# ಅರಿಕೆ

ಕನ್ನಡಿಗರ ಸೌಜನ್ಯ, ಅಭಿಮಾನದಿಂದಾಗಿ ಈ ಕಾದಂಬರಿ ಎರಡನೆಯ ಮುದ್ರಣವನ್ನು ಕಾಣುತ್ತಿದೆ.

ಮನುಷ್ಯನು ದುರ್ಬಲ. ಸನ್ನಿವೇಶಗಳಿಗೆ ಮನೋದೌರ್ಬಲ್ಯಕ್ಕೆ ಬಲಿಯಾಗಿ ಹಲವುಬಾರಿ ಅವನು ಕಾಲುಜಾರುವುದುಂಟು. ಹಾಗೆ ಎಡವಿ ಮತ್ತೆ ಎಚ್ಚೆತ್ತ ದಂಪತಿಗಳಿಬ್ಬರ ಜೀವನವನ್ನು ಚಿತ್ರಿಸಲು ಇಲ್ಲಿ ಪ್ರಯತ್ನಿಸಿದ್ದೇನೆ.

ಆದರೆ ಬಹುಕಾಲ ಒಬ್ಬರನ್ನೊಬ್ಬರು ಅಗಲಿದ ಪತಿಪತ್ನಿಯರೆಲ್ಲ ಕಾದಂಬರಿಯಲ್ಲಿ ರೂಪುಗೊಂಡಿರುವ ಆನಂದ ಭಾರತಿಯರಂತೆ ವರ್ತಿಸುವರೆಂದಾಗಲೀ, ಇಲ್ಲವೆ ಅವರ ವರ್ತನೆಯನ್ನು ಸಮರ್ಥಿಸುವ ಪ್ರಯತ್ನ ಇಲ್ಲಿ ನಡೆದಿದೆಯೆಂದಾಗಲೀ ಓದುಗರು ಭಾವಿಸಬಾರದು. ಹಾಗೆ ಎಡವಿದ ಹತಭಾಗ್ಯರ ವಿಷಯದಲ್ಲಿ ಆಕ್ರೋಶಕ್ಕಿಂತ ಸಹಾನುಭೂತಿ ಕರುಣೆ ಇರಬೇಕೆಂಬುದೇ ನನ್ನ ಕೋರಿಕೆ.

ಈ ಕಾದಂಬರಿಯನ್ನು ಬೆಳಕಿಗೆ ತರಲು ಶ್ರೀಯುತರಾದ ಎಚ್. ಎಂ. ಶಂಕರನಾರಾಯಣರಾವ್, ಬಿ. ನರಸಿಂಗರಾವ್, ಇವರು ಸಹಾಯಮಾಡಿದ್ದಾರೆ; 'ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿ'ನ ಒಡೆಯರಾದ ಶ್ರೀ ಜಿ. ಹೆಚ್. ರಾಮರಾಯರು ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿದ್ದಾರೆ; ಶ್ರೀ ಎಸ್. ರಮೇಶರು ಅಂದವಾದ ಮುಖಚಿತ್ರವನ್ನು ಬರೆದು ಕೊಟ್ಟಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು.

೧೧೫೨, ಚಾಮರಾಜಪುರಂ<br>ಮೈಸೂರು

ತ್ರಿವೇಣಿ

# ೧

ಸೀತಾರಾಮಯ್ಯನವರು ನೆಲದ ಮೇಲೆ ಹಾಸಿದ್ದ ಚಾಪೆಯ ಮೇಲೆ ಕಾಲುನೀಡಿ ಕುಳಿತರು. ಅವರಿಗೆ ಸುಮಾರು ಐವತ್ತು ವರ್ಷಗಳಾಗಿದ್ದವು. ತಲೆಯ ಹಿಂಭಾಗದಲ್ಲಿದ್ದ ನಿಂಬೆಕಾಯಿ ಗಾತ್ರದ ಗಂಟಿನ ಕೂದಲಲ್ಲಿ ಮುಕ್ಕಾಲುಪಾಲು ಹಣ್ಣಾಗಿದ್ದವು. ಹಣೆಯಲ್ಲಿ ಎದ್ದು ಕಾಣುವ ಗಂಧಾಕ್ಷತೆ, ಪಿಳಚಲು ಕಣ್ಣಿಗೆ ಕನ್ನಡಕ, ಕ್ಲೋಸ್ ಕಾಲರಿನ ಕೋಟು, ಕಚ್ಚೆಪಂಚೆ, ಮಣುಕು ಹಿಡಿದಿದ್ದ ಬೂದು ಬಣ್ಣದ ಟೋಪಿ ಇವುಗಳಿಂದ ಅಲಂಕೃತರಾದ ಸೀತಾರಾಮಯ್ಯನವರನ್ನು ಯಾರು ನೋಡಿದರೂ ಯೂನಿವರ್ಸಿಟಿ ಆಫೀಸಿನಲ್ಲಿ ಗುಮಾಸ್ತರಾಗಿದ್ದಾರೆಂದು ಸುಲಭವಾಗಿ ಹೇಳಿಬಿಡಬಹುದಾಗಿತ್ತು.

ಸೀತಾರಾಮಯ್ಯನವರು ಬಳಿಯಲ್ಲಿಯೇ ನಿಂತಿದ್ದ ಭಾರತಿಗೆ "ಸ್ವಲ್ಪ ಅಮ್ಮನ್ನ ಕರಿ" ಎಂದರು. ಭಾರತಿ ತಾಯಿಯನ್ನು ಕರೆಯಲು ಒಳಗೆ ಹೋದಳು. ಮಗಳ ಕರೆಯನ್ನು ಕೇಳಿದೊಡನೆಯೇ ಸರೋಜಮ್ಮ ಒದ್ದೆ ಕೈಯನ್ನು ಒರೆಸಿಕೊಳ್ಳುತ್ತಾ ಹೊರಗೆ ಬಂದರು. ಹೆಂಡತಿಯನ್ನು ನೋಡಿ ಸೀತಾರಾಮಯ್ಯನವರು,

"ವೆಂಕಟಸುಬ್ಬು ಕಾಗದ ಬರೆದಿದಾನೆ...." ಎಂದರು.

ಸರೋಜಮ್ಮ ಆಶ್ಚರ್ಯದಿಂದ ಕಣ್ಣರಳಿಸಿ "ಏನು! ಅಣ್ಣ ಕಾಗದ ಬರೆದಿದಾನೆಯೇ ? ಅವನಿಂದ ಕಾಗದ ಬರುವುದೇ ಅಪರೂಪ, ಕಾಗದವಿದ್ದ ಮೇಲೆ ಏನೋ ವಿಶೇಷ ಸಮಾಚಾರವಿರಲೇ ಬೇಕು" ಎಂದರು.

"ವಿಶೇಷ ಸಮಾಚಾರವಿರುವುದರಿಂದಲೇ ಕಾಗದ ಬರೆದಿದಾನೆ. ಅವನು ಅವನ ಸ್ನೇಹಿತ ಸುಂದರರಾಯರು ನಾಳೆ ದಿನ ಹನ್ನೊಂದು ಗಂಟೆ ರೈಲಿಗೆ ಇಲ್ಲಗೆ ಬರುತ್ತಾರಂತೆ. ಬಾಕಿ ವಿಷಯ ಬಂದ ಮೇಲೆ ತಿಳಿಸುತ್ತೇನೆ ಎಂದು ಬರೆದಿದಾನೆ."

"ಸುಂದರರಾಯರೂ ಇಲ್ಲಿಗೇ ಬರುತ್ತಾರೇನು ?"

"ಇಲ್ಲ. ಅವರು ತಮ್ಮ ತಂಗೀ ಮನೇಗೆ ಹೋದರೂ ಹೋಗಬಹುದು ಎಂದು ಬರೆದಿದಾನೆ"

ಅಪರೂಪಕ್ಕೆ ಅಣ್ಣ ಬರುವ ಸುದ್ದಿ ಕೇಳಿ ಸರೋಜಮ್ಮನಿಗೆ ಆನಂದವಾಯಿತು.

"ಭಾರತಿ, ನಾಳೆ ಅಣ್ಣ ಬರುತ್ತಾನೆ. ನೀನು, ವಾಣಿ ಇಬ್ಬರೂ ಸೇರಿ

ನಿಮ್ಮ ರೂಮನ್ನು ಚೊಕ್ಕಟವಾಗಿಡಿ” ಎಂದು ಮಗಳಿಗೆ ಹೇಳಿದರು.

ಮಾರನೆಯ ದಿನ ಕಾಲೇಜಿಗೆ ಹೋಗುವ ಆತುರವಿದ್ದುದರಿಂದ ಭಾರತಿ ಹತ್ತು ಗಂಟೆಗೇ ಊಟ ಮಾಡಿ ಕಾಲೇಜಿಗೆ ಹೊರಟು ಹೋದಳು. ಸರೋಜಮ್ಮ ಅಣ್ಣನಿಗಾಗಿ ಕಾಯುತ್ತ ಬೀದಿ ಬಾಗಿಲಿನಲ್ಲಿ ಬಂದು ಕುಳಿತರು.

ಅವರು ತಮ್ಮ ಅಣ್ಣನನ್ನು ನೋಡಿ ಸುಮಾರು ಐದಾರು ವರ್ಷಗಳಾಗಿದ್ದುವು. ಅಣ್ಣನಿಂದ ಕಾಗದ ಬರುವುದು ಸಹ ಅಪರೂಪವಾಗಿತ್ತು. ಪರಿಸ್ಥಿತಿ ಹೀಗಿರುವಾಗ ಅನಿರೀಕ್ಷಿತವಾಗಿ ಅಣ್ಣ ಬರುವನೆಂದು ಬರೆದ ಕಾಗದ ನೋಡಿ ಸರೋಜಮ್ಮನಿಗೆ ಆಶ್ಚರ್ಯವೇ ಆಗಿತ್ತು.

ದೂರದಲ್ಲಿ ಕೆಂಪು ಬಣ್ಣದ ಟಾಂಗ ಗಾಡಿಯೊಂದು ಕಾಣಿಸಿತು. ಟಾಂಗ ಮನೆಯ ಮುಂದೆ ನಿಂತೊಡನೆ ಸರೋಜಮ್ಮ ಎರಡು ಮೆಟ್ಟಿಲುಗಳನ್ನು ಹಾರಿ ಸಮೀಪದಲ್ಲಿ ನಿಂತರು.

ಅಣ್ಣ ತಂಗಿ ಒಳಗೆ ಬಂದರು. ವೆಂಕಟಸುಬ್ಬಯ್ಯ ಪೆಟ್ಟಿಗೆಯನ್ನು ಒಂದು ಮೂಲೆಯಲ್ಲಿಟ್ಟು “ರಾಮ” ಎನ್ನುತ್ತಾ ಕುರ್ಚಿಯ ಮೇಲೆ ಕುಳಿತರು.

“ಸುಂದರರಾಯರು ಬರಲಿಲ್ಲವೇ?”

“ಬಂದಿದಾರೆ. ಅವರು ತಮ್ಮ ತಂಗೀ ಮನೆಗೆ ಹೋದರು”

“ಇಲ್ಲೇ ಬರಬಹುದಿತ್ತು”

“ಅವರು ನಾಳೆ ಬೆಳಗ್ಗೆ ಇಲ್ಲಿಗೆ ಬರುತ್ತಾರೆ”

“ಹಂಡೇಲಿ ಬಿಸಿನೀರಿದೆ. ಬೇಕಾದರೆ ಸ್ನಾನ ಮಾಡಬಹುದು”

“ಸ್ನಾನ ಮಾಡಿಯೇ ಬರುತ್ತೇನೆ. ನಿನ್ನ ಊಟವಾಯಿತೆ?”

“ಇನ್ನೂ ಇಲ್ಲ. ನೀನು ಬರಲಿ ಎಂದು ಕಾದುಕೊಂಡಿದ್ದೆ.”

“ಭಾರತಿ, ರಾಜಾರಾಮ, ವಾಣಿ ಎಲ್ಲರೂ ಎಲ್ಲಿ?”

“ಎಲ್ಲರೂ ಸ್ಕೂಲಿಗೆ ಹೋಗಿದಾರೆ. ರೋಹಿಣಿ ಮಾತ್ರ ಇದಾಳೆ”

“ಭಾವ?”

“ಅವರೂ ಆಫೀಸಿಗೆ ಇದೇ ತಾನೇ ಹೋದರು.”

ವೆಂಕಟಸುಬ್ಬಯ್ಯ ಸ್ನಾನ ಮಾಡಿ ಬರುವಷ್ಟರಲ್ಲಿ ಸರೋಜಮ್ಮ ಮಣೆ ಹಾಕಿ ನೀರಿಟ್ಟು, ಬಾಳೆ ಎಲೆ ಹಾಕಿದರು. ವೆಂಕಟಸುಬ್ಬಯ್ಯ ಮಣೆಯ ಮೇಲೆ ಕುಳಿತು ತಂಗಿಗೆ “ನೀನೂ ತಟ್ಟೆ ಹಾಕಿಕೊಂಡು ಬಿಡು” ಎಂದರು. “ಇಲ್ಲ. ನಿನ್ನದಾಗಲಿ” ಎನ್ನುತ್ತಾ ಸರೋಜಮ್ಮ ಬಡಿಸತೊಡಗಿದರು. ಸರೋಜಮ್ಮ ಕೇಳಿದರು,

“ಅತ್ತಿಗೆ, ಮಕ್ಕಳು ಎಲ್ಲಾ ಹುಷಾರಾಗಿದಾರೆಯೇ?”

"ಹುಷಾರಾಗಿದಾರೆ. ರೋಹಿಣಿ ಎಲ್ಲಿ ?"

"ಲೇ ರೋಹಿಣೀ, ಬಾರೆ ಇಲ್ಲಿ. ಯಾರು ಬಂದಿದಾರೆ ನೋಡು ಬಾ"

"ಮಗೂನ ಕರೆದುಕೊಂಡು ಬಾ. ನಾನು ನೋಡೇ ಇಲ್ಲ." ಸರೋಜಮ್ಮ ರೂಮಿನಲ್ಲಿದ್ದ ರೋಹಿಣಿಯನ್ನು ಎತ್ತಿಕೊಂಡು ಬಂದು "ಮಾವನಿಗೆ ನಮಸ್ಕಾರ ಮಾಡಮ್ಮ" ಎಂದರು.

"ಮಾವ ಕಣೆ ರೋಹಿ"

"ಮಾವ !"

"ಹೂಂ, ಮಾವ. ನಿನ್ನ ಹೆಸರೇನು ಮಾವನಿಗೆ ಹೇಳು"

"ಲೋಹಿಣಿ"

"ಓಹೋ ಮಾತು ಬೇರೆ ಆಡ್ತಾಳೇನು? ಬಾಮ್ಮ ರೋಹಿಣಿ" ವೆಂಕಟಸುಬ್ಬಯ್ಯ ಮಗುವಿನ ಮುದ್ದು ಮಾತಿಗೆ ಮರುಳಾಗಿ ಕೂಗಿದರು. ರೋಹಿಣಿ ತಾಯಿಯ ಮಡಿಲಿನಲ್ಲಿ ಮುಖ ಮರೆಸಿಕೊಂಡಳು.

"ಇನ್ನೂ ಹೊಸ ಮುಖ. ಸ್ವಲ್ಪ ಬಳಕೆಯಾದ ಮೇಲೆ ಬೇಡಾಂದರೂ ಬಂದು ನಿನ್ನ ಹೆಗಲೇರುತ್ತಾಳೆ."

ವೆಂಕಟಸುಬ್ಬಯ್ಯ ರೋಹಿಣಿಯನ್ನೇ ನೋಡುತ್ತಾ "ನಾನು ವಾಣಿಯನ್ನು ನೋಡಿದಾಗ ಹೀಗೇ ಇದ್ದಳು. ಈಗ ತುಂಬಾ ಬೆಳೆದಿರ ಬೇಕಲ್ಲವೆ ?" ಎಂದರು.

"ಈಗೇನು ಭಾರತೀನೂ ಮೀರಿಸಿ ಬೆಳೆಯುತ್ತಿದ್ದಾಳೆ. ಅವಳಿಗೂ ಮೊನ್ನೆಗೆ ಒಂಬತ್ತು ವರ್ಷ ತುಂಬಿತು."

"ರೋಹಿಣಿ ಎಲ್ಲಾ ವಾಣಿಯ ಹಾಗೇ ಇದಾಳೆ. ಚೀಲದಲ್ಲಿ ಪೆಪ್ಪರಮೆಂಟು, ಚಾಕೊಲೇಟ್ ಇದೆ. ಮಗುವಿಗೆ ತೆಗೆದು ಕೊಡು."

"ನಿಧಾನವಾಗಿ ಕೊಟ್ಟರಾಯಿತು. ಈಗ ತಾನೇ ಊಟ ಮಾಡಿದಾಳೆ. ಇನ್ನೂ ಸ್ವಲ್ಪ ಮಜ್ಜಿಗೆ ಬಡಿಸಲೇ ?"

"ಬೇಡಮ್ಮ ಸಾಕು. ನೀನೂ ತಟ್ಟೆ ಹಾಕಿಕೊಂಡು ಬಿಡು."

ಸರೋಜಮ್ಮ ತಮ್ಮ ಅಲ್ಯೂಮಿನಿಯಂ ತಟ್ಟೆ ಹಾಕಿ, ಉಪ್ಪು ಬಡಿಸಿಕೊಂಡು, ಮಜ್ಜಿಗೆ ತುಪ್ಪ ಹತ್ತಿರ ಇಟ್ಟುಕೊಂಡು ಕುಳಿತರು. ವೆಂಕಟಸುಬ್ಬಯ್ಯ ಊಟ ಮುಗಿದಿದ್ದರೂ ಮಣೆಯ ಮೇಲೆ ಕುಳಿತು ಬಹು ಕಾಲಕ್ಕೆ ಸಂಧಿಸಿದ ತಂಗಿಯೊಡನೆ ಮಾತನಾಡ ತೊಡಗಿದರು,

"ಇದ್ಯಾಕಣ್ಣಾ ತುಂಬಾ ಬಡವಾಗಿದೀಯಾ ?" ಸರೋಜಮ್ಮ ಮಮತೆಯಿಂದ ಕೇಳಿದರು.

"ಇನ್ನೇನಮ್ಮ ವಯಸ್ಸಾಯಿತು. ಪ್ರಾಯದ ಮೈ ಇನ್ನು ಬಂದೀತೇ" ವೆಂಕಟಸುಬ್ಬಯ್ಯ ನಕ್ಕು ಹೇಳಿದರು.

ನಿಜಕ್ಕೂ ವೆಂಕಟಸುಬ್ಬಯ್ಯ ಮೊದಲಿಗಿಂತಲೂ ಬಡವಾಗಿದ್ದರು. ಬಡಕಲು ಮೈ, ಹಣ್ಣಾದ ಗಡ್ಡ, ಸುಕ್ಕಾದ ಕೆನ್ನೆ, ಮಂಜುಗಣ್ಣಿನ ಕೊರತೆಯನ್ನು ನೀಗಿಸುವ ಸಲುವಾಗಿ ಮೂಗಿನ ಮೇಲೆ ಕುಳಿತಿದ್ದ ಕನ್ನಡಕ–ಇವು ಅವರಿಗೆ ಆಗಿದ್ದ ವಯಸ್ಸಿಗಿಂತಲೂ ಹೆಚ್ಚು ವಯಸ್ಸನ್ನು ತೋರಿಸುತ್ತಿದ್ದವು.

ಸರೋಜಮ್ಮ ಒಂದೆರಡು ಗಳಿಗೆ ಯೋಚಿಸಿ, ಕೇಳಲೋ ಬೇಡವೋ ಎಂದು ಅವೇ ಅನಿಶ್ಚಯದಿಂದ ತೂಗಾಡುತಿದ್ದ ಮನಸ್ಸನ್ನು ಗಟ್ಟಿಮಾಡಿ ಕೇಳಿಯೇ ಬಿಟ್ಟರು.

"ಶಿವರಾಮೂಗೆ ಹೆಣ್ಣು ಗೊತ್ತಾಯಿತೇನಣ್ಣ ?"

"ಇನ್ನೂ ಇಲ್ಲಮ್ಮ . ಹೆಣ್ಣಿನವರೇನೋ ಬಂದು ಹೋಗುತ್ತಿದಾರೆ. ಅವನೇ ಎಂ. ಎಸ್.ಸಿ. ಆಗಲಿ. ಆಮೇಲೆ ಕೆಲಸ ಸಿಗಲಿ. ಅದುವರೆಗೂ ಮದುವೆ ಆಗೋದಿಲ್ಲ ಅಂತ ಹಟ ಹಿಡಿದಿದ್ದಾನೆ. ನಮ್ಮ ಮಾತು ಯಾರು ಕೇಳುತ್ತಾರೆ? ಈಗಿನ ಕಾಲದಲ್ಲಿ ಹುಡುಗರ ಮಾತು ಮುಖ್ಯ. ಅದಿರಲಿ. ಭಾರತಿಗೆ ಗಂಡು ಗೊತ್ತಾಯಿತೆ ?"

"ಇನ್ನೂ ಇಲ್ಲ. ಅವಳಿಗೂ ಹದಿನೇಳಾಯಿತು"

"ಎಲ್ಲಾದರೂ ಪ್ರಯತ್ನ ಪಟ್ಟಿದೀರಾ ?"

"ನಾವು ಎಲ್ಲೂ ಪ್ರಯತ್ನಪಟ್ಟಿಲ್ಲ. ಈಗಿನಿಂದಲೂ ಪ್ರಯತ್ನಿಸಿದರೆ ಇನ್ನೆರಡು ವರ್ಷಕ್ಕೆ ಆದೀತು. ಬಡವರ ಮನೆ ಹುಡುಗೀಂತ ಗಂಡುಗಳು ತಾತ್ಸಾರ ಮಾಡಬಹುದು."

ವೆಂಕಟಸುಬ್ಬಯ್ಯ ಒಂದು ಗಳಿಗೆ ಸುಮ್ಮನಿದ್ದು

"ಭಾರತಿ ಈಗ ಏನು ಓದುತಿದ್ದಾಳೆ" ಎಂದರು.

"ಜೂನಿಯರ್ ಇಂಟರ್ ಸೇರಿದಾಳೆ. ಅದೇನು ಪಾಸು ಮಾಡ್ತಾಳೋ ನಾನು ಕಾಣೆ. ಸದಾ ಕತೆ ಪುಸ್ತಕಗಳನ್ನು ಓದುತ್ತಾ ಇರುತ್ತಾಳೆ."

"ಭಾರತಿ ಈಗ ಹೇಗಿದಾಳೆ ?" ವೆಂಕಟಸುಬ್ಬಯ್ಯನವರ ದನಿಯಲ್ಲಿ ಕಾತರವಿತ್ತು.

ಅಣ್ಣನ ಪ್ರಶ್ನೆಗೆ ಸರೋಜಮ್ಮ ಕಣ್ಣರಳಿಸಿ 'ಹೇಗಿದಾಳೆ ಅಂದರೆ ?' ಎಂದರು.

"ನೋಡೋಕೆ ಹೇಗಿದಾಳೆ ಅಂತ ಕೇಳಿದೆ."

"ಸುಮಾರಾಗಿ ಇದಾಳೆ. ನಮ್ಮ ಹುಡುಗಿ ಹೇಗಿದ್ದರೂ ನಮಗೆ

ಚೆನ್ನ."

ಮಗಳ ಸೌಂದರ್ಯ ವರ್ಣಿಸಲು ಸಂಕೋಚಪಟ್ಟು ಸರೋಜಮ್ಮ ತಗ್ಗಿದ ದನಿಯಲ್ಲಿ ಈ ರೀತಿ ಹೇಳಿದರು. ತನ್ನ ಮಗಳನ್ನು ವರ್ಣಿಸುವಾಗ ಉತ್ಪ್ರೇಕ್ಷೆಯಾಗಬಹುದೆಂದು ಹೆದರಿಕೆಯೂ ಇತ್ತು ಸರೋಜಮ್ಮನಿಗೆ.

"ಈ ಮಾತು ನಾನು ಒಪ್ಪುವುದಿಲ್ಲ. ನಾನು ಹಿಂದೆ ನೋಡಿದಾಗ ಅವಳು ಹನ್ನೊಂದು ವರ್ಷದ ಹುಡುಗಿ. ಗುಲಾಬಿ ಹೂವಿನ ಸೌಂದರ್ಯ ವನ್ನು ಮೊಗ್ಗಿನಲ್ಲೇ ಕಾಣಬಹುದಲ್ಲವೇ ?"

ಮಗಳ ಸೌಂದರ್ಯದ ಹೊಗಳಿಕೆ ಕೇಳಿ ತಾಯಿಯೆದೆ ಹೆಮ್ಮೆಯಿಂದ ಬಿರಿಯಿತು.

"ಅಯ್ಯೋ, ಅವಳ ಚೆನ್ನ ಅಷ್ಟರಲ್ಲೇ ಇದೆ.."

"ಭಾರತಿ ಯಾರ ಕಣ್ಣಿಗಾದರೂ ಚೆನ್ನಾಗಿರಲೇಬೇಕು. ಹುಡುಗಿ ಯಾಗಿದ್ದಾಗ ಅವಳನ್ನು ನೋಡಿದ್ದೆನಲ್ಲ, ಅವಳ ಕಣ್ಣು, ಬಣ್ಣ, ತುಟಿ, ಹುಬ್ಬು ಯಾರಿಗೂ ಇರಲಿಲ್ಲ. ಅಷ್ಟು ಮುದ್ದಾಗಿರುವ ಹುಡುಗಿಯನ್ನು ನಾನು ನೋಡಿಯೇ ಇರಲಿಲ್ಲ."

"ಸಾಕು ಸುಮ್ಮನಿರಣ್ಣ. ನಮ್ಮ ನಮ್ಮದು ನಮಗೆ ಯಾವಾಗಲೂ ಸೊಗಸು."

"ಹಾಗಲ್ಲ, ಸರೋಜ. ಇರುವ ವಿಷಯ ಹೇಳಿದೆ. ಅವಳು ಈಚೆಗೆ ತೆಗೆಸಿಕೊಂಡಿರುವ ಫೋಟೋ ಯಾವುದಾದರೂ ಇದ್ದರೆ ತೋರಿಸು."

"ಅಷ್ಟೊಂದು ಆತುರ ಯಾಕೆ? ಸಂಜೆ ಕಾಲೇಜಿನಿಂದ ಬರ್‍ತಾಳಲ್ಲ ಆಗ ನೀನೇ ಕಣ್ತುಂಬ ನಿನ್ನ ಸೊಸೆಯನ್ನು ನೋಡಿ ತೃಪ್ತಿ ಪಡುವಿಯಂತೆ."

"ಆಗಲಿ. ಸದ್ಯಕ್ಕೆ ಅವಳ ಫೋಟೋ ತೋರಿಸು."

ಅಣ್ಣನ ಆತುರವನ್ನು ಕಂಡು ಸರೋಜಮ್ಮ ನಕ್ಕು 'ಆಗಲಿ' ಎಂದರು. ಊಟ ಮುಗಿದ ಮೇಲೆ ಕಸಮುಸುರೆ ಮುಗಿಸಿ ಹೊರ ಬಂದರು. ಅಣ್ಣ ಪೇಪರ್ ಓದುತ್ತ ಕುಳಿತಿದ್ದ.

"ರೈಲಿನಿಂದ ಬಂದು ಸುಸ್ತಾಗಿದೀಯಾ. ಒಂದು ಗಳಿಗೆ ಮಲಗ ಬಾರದೇ" ಎಂದರು ಸರೋಜಮ್ಮ.

"ನಾನೇನು ಬೆಂಗಳೂರಿನಿಂದ ನಡೆದು ಕೊಂಡು ಬರಲಿಲ್ಲವಲ್ಲ. ಫೋಟೋ ಸಿಕ್ಕಿತೆ?"

ಸರೋಜಮ್ಮ ರೂಮಿಗೆ ಹೋಗಿ ಭಾರತಿ ತನ್ನ ಇತರ ಮೂರುಜನ ಗೆಳತಿಯರೊಡನೆ ತೆಗೆಸಿಕೊಂಡಿದ್ದ ಫೋಟೋ ತಂದು ಅಣ್ಣನ ಕೈಗೆ

ಕೊಟ್ಟರು. ವೆಂಕಟಸುಬ್ಬಯ್ಯ ಕನ್ನಡಕ ತೆಗೆದು ಅದನ್ನೊಮ್ಮೆ ಟವಲಿನಿಂದ ಉಜ್ಜಿ ಆ ಬಳಿಕ ಮೂಗಿನ ಮೇಲೇರಿಸಿಕೊಂಡು ಭಾವ ಚಿತ್ರ ಹಿಡಿದು ನೋಡತೊಡಗಿದರು.

ಭಾರತಿ ಎಡಗಡೆ ಕೊನೆಯಲ್ಲಿದ್ದ ಕುರ್ಚಿಯ ಮೇಲೆ ಕುಳಿತಿದ್ದಳು. ಕಾಲು ತುಂಬ ಮುಚ್ಚುವ ಹೂವಿನ ಸೀರೆಯುಟ್ಟು, ಚೋಲಿ ತೊಟ್ಟು, ಜಡೆಯನ್ನು ಎಡಭುಜದ ಮೇಲಿಂದ ತಂದು ಎದೆಯ ಮೇಲೆ ಇಳಿಬಿಟ್ಟಿದ್ದಳು. ಹೌದೋ ಅಲ್ಲವೋ ಎನ್ನುವಷ್ಟು ಮೂಡಿದ್ದ ಕಿರುನಗೆ ತುಟಿ, ಕೆನ್ನೆಗಳಲ್ಲಿ ಹರಿದು ಬಂದಿತ್ತು. ತುಂಟತನದಿಂದ ಕಣ್ಣುಗಳು ದೊಡ್ಡದಾಗಿ ಅರಳಿದ್ದುವು. ಮುಡಿದಿದ್ದ ಹೂವು ಎಡಗಿವಿಯ ಹಿಂದೆ ಇಣುಕಿ ನೋಡುತ್ತಿತ್ತು.

ಭಾವಚಿತ್ರವನ್ನು ನೋಡಿ ವೆಂಕಟಸುಬ್ಬಯ್ಯನವರು ತೃಪ್ತಿಯಿಂದ ನಕ್ಕರು.

"ಹೂ, ನಾನಾಡಿದ ಮಾತು ಸುಳ್ಳಾಗುವುದಿಲ್ಲ. ಹೇಗಿದ್ದರೂ ಸಂಜೆ ಭಾರತಿ ಬರುತ್ತಾಳಲ್ಲಾ. ತಗೋ ಸರೋಜ. ಫೋಟೋ ತೆಗೆದಿರಿಸು."

"ಭಾರತಿ ವಿಚಾರ ಈಗೇಕೆ ಬೇಕಾಯಿತಣ್ಣ ?"

"ಅದರ ವಿಷಯ ಆಮೇಲೆ ಹೇಳ್ತೀನಿ. ರೋಹಿಣಿ, ಬಾ ಇಲ್ಲಿ. ಚಾಕ್ಲೇಟು ಕೊಡ್ತೀನಿ."

ಮಾವನ ಹತ್ತಿರ ಹೋಗಲು ರೋಹಿಣಿ ಮೊದಲು ಹಿಂಜರಿದರೂ ಅವರ ಕೈಯಲ್ಲಿದ್ದ ಚಾಕಲೇಟು ಅವಳನ್ನು ಆಕರ್ಷಿಸಲು, ಆಗಾಗ್ಗೆ ತಾಯಿಯ ಕಡೆ ನೋಡಿ, ಅವರ ನಗುಮುಖದಿಂದ ಧೈರ್ಯ ಹೊಂದಿ, ರೋಹಿಣಿ ಮಾವನ ಮುಂದೆ ನಿಂತು ಕೈನೀಡಿದಳು. ವೆಂಕಸುಬ್ಬಯ್ಯನವರು ರೋಹಿಣಿಯನ್ನೆತ್ತಿ ತೊಡೆಯಮೇಲೆ ಕೂರಿಸಿಕೊಂಡು ಅವಳ ಕೈಗೆ ಚಾಕಲೇಟ್ ಕೊಟ್ಟರು. ಚಾಕಲೇಟು ಅವಳ ಕೈಗೆ ಬಂದೊಡನೆ ರೋಹಿಣಿ ಕೊಸರಾಡಿ ಮಾವನ ಹತ್ತಿರದಿಂದ ಓಡಿಹೋದಳು. ಸರೋಜಮ್ಮ ಮಾತಿಗೆ ಪ್ರಾರಂಭಮಾಡಿದರು.

"ಏನು ಸಮಾಚಾರ ಹೇಳಬಾರದೇ ?"

"ಭಾವನೂ ಬರಲಿ. ಆಮೇಲೆ ಎಲ್ಲಾ ಹೇಳ್ತೀನೆ. ಇಲ್ಲದಿದ್ದರೆ ಅವನಿಗೊಂದು ಬಾರಿ ಪುನಃ ಮೊದಲಿನಿಂದಲೂ ಹೇಳಬೇಕಾಗುತ್ತದೆ."

"ನೀನು ಯಾವಾಗಲೂ ಹೀಗೆ ನಮ್ಮನ್ನ ಸಂಶಯದಲ್ಲಿರಿಸಿ ಕಿರುಗುಟ್ಟಿಸ್ತೀಯಾ."

"ಇರಲಿ, ಇರಲಿ. ನಾನೊಂದು ಗಳಿಗೆ ನಿದ್ದೆಮಾಡಿ ಏಳ್ತೀನಿ."

"ರಾಮಾ" ಎಂದು ಭಗವಂತನನ್ನು ಕರೆಯುತ್ತಾ ವೆಂಕಟಿ ಮಲಗಿದರು. ಸರೋಜಮ್ಮ ಏನನ್ನೋ ಯೋಚಿಸುತ್ತಾ ಒಂದು ಅಲ್ಲೇ ನಿಂತಿದ್ದು ಅಣ್ಣ ಮಿಸುಕಾಡದಿರುವುದನ್ನು ನೋಡಿ ರೂಮಿನ ಒ ಲನ್ನು ಮುಂದೆಳೆದುಕೊಂಡು ಹೊರಟು ಹೋದರು :

ವೆಂಕಟಸುಬ್ಬಯ್ಯನಿಗೆ ಎಚ್ಚರವಾದಾಗ ನಾಲ್ಕು ಗಂಟೆಯಾಗಿತ್ತು. ಅವರು ಎದ್ದು ಮುಖ ತೊಳೆದುಕೊಂಡು ಬಂದು ಅಡಿಗೆ ಮನೆಯಲ್ಲಿ ಕುಳಿತರು. ರೋಹಿಣಿ ಚಕ್ಕುಲಿಯ ಚೂರೊಂದನ್ನು ಹಿಡಿದುಕೊಂಡು ಕಡಿಯುತ್ತಿದ್ದಳು. ಸರೋಜಮ್ಮ ಒಲೆಯ ಮುಂದೆ ಕುಳಿತು ಚಕ್ಕುಲಿ ಜೇಯಿಸುತ್ತಿದ್ದರು. ಹತ್ತಿರವಿದ್ದ ಬಾಳೆಯ ಎಲೆಯ ಮೇಲೆ ಒತ್ತಿದ ನಾಲ್ಕೈದು ಚಕ್ಕುಲಿಗಳಿದ್ದವು. ಅಣ್ಣನನ್ನು ನೋಡಿ ಸರೋಜಮ್ಮ ತಟ್ಟೆಹಾಕಿ ಬಿಸಿಯಾಗಿ ಕೆಂಪಗಿದ್ದ ನಾಲ್ಕು ಚಕ್ಕುಲಿಯನ್ನು ಹಾಕಿ, ಕಾಫಿ ಬಟ್ಟಲನ್ನು ಮುಂದಿಟ್ಟರು. ವೆಂಕಟಸುಬ್ಬಯ್ಯ ಚಕ್ಕುಲಿ ಬಳ್ಳಿಯನ್ನು ಬಾಯಿಗೆ ಹಾಕಿಕೊಳ್ಳುತ್ತಾ 'ಮಕ್ಕಳು ಇನ್ನೂ ಬಂದಿಲ್ಲವೇ' ಎಂದರು.

"ಇನ್ನೇನು ಎಲ್ಲರೂ ಬರುವ ಸಮಯ."

"ಭಾವ ಬಂದಿಲ್ಲವೇ"

ಬಂದಿದಾರೆ. ರೋಹಿ, ಅಪ್ಪನ್ನ ತಿಂಡೀಗೆ ಬಾ ಅಂತ ಕರೆದುಕೊಂಡು ಬಾ ಚಿನ್ನ."

ರೋಹಿಣಿ ತಂದೆಯನ್ನು ಕುಳಿತ ಜಾಗದಿಂದಲೇ ಕೂಗತೊಡಗಿದಳು.

"ಅಪ್ಪಾ....ಅಪ್ಪಾ ..."

ಸೀತಾರಾಮಯ್ಯನವರು ಒಳಗೆ ಬಂದು 'ಏನಪ್ಪಾ ವೆಂಕಟಸುಬ್ಬು, ಬಹಳ ಅಪರೂಪ ಆಗಿದೀಯಾ. ಮನೇಲಿ ಎಲ್ಲರೂ ಕ್ಷೇಮವೇ' ಎಂದರು.

"ದೇವರ ದಯೆಯಿಂದ ಕ್ಷೇಮವಾಗಿದೀವಿ. ನೀವು ಮನೆಗೆ ಬಂದು ಎಷ್ಟು ಹೊತ್ತಾಯಿತು ?"

"ನಾನು ಬಂದು ಅರ್ಧ ಗಂಟೆಯಾಯಿತು. ನೀನು ದಣಿದಿದೀಯಾ ಅಂತ ಎಬ್ಬಿಸಲಿಲ್ಲ."

ಸರೋಜಮ್ಮ ಗಂಡನಿಗೂ ತಿಂಡಿ ಕೊಟ್ಟು "ಇನ್ನಾದರೂ ಅದೇನು ಸಮಾಚಾರ ಹೇಳಣ್ಣ" ಎಂದರು.

"ಒಳ್ಳೇ ಆತುರವಾಯಿತು. ಭಾವ, ಭಾರತಿಗೆ ಮದುವೆ ಮಾಡುವ ಯೋಚನೆ ಇದೆಯೇ ?"

"ಇದೇನು ಹೀಗೆ ಕೇಳ್ತೀಯಾ? ಮಗಳಿಗೆ ಮದುವೆ ಮಾಡದೇ

ಕೂರಿಸಿಕೊಂಡು ಪೂಜೆ ಮಾಡ್ತೀವಿ ಅಂತ ತಿಳಿದುಕೊಂಡೆಯಾ?"

"ಎಲ್ಲಾದರೂ ವರನ್ನ ನೋಡಿದೀಯಾ ?"

"ಇನ್ನೂ ಇಲ್ಲ ವೆಂಕಟಸುಬ್ಬು. ನಾವು ಬೇರೆ ಎಲ್ಲಾದರೂ ಯಾಕೆ ನೋಡಬೇಕು. ಮನೇಲಿ ಬೆಣ್ಣೆಯಿಟ್ಟುಕೊಂಡು ತುಪ್ಪಕ್ಕೆ ಸಾಲ ಕೇಳಲು ಹೋದರು ಎಂದ ಹಾಗೆ. ನಿನ್ನ ಮಗ ಶಿವರಾಮೂಗೆ ದೊಡ್ಡ ಮನಸ್ಸು ಮಾಡಿ ತಂದುಕೊಂಡು ಬಿಡು."

"ನೋಡಿದೀರಾ, ನೀವು ನನ್ನ ಮನಸ್ಸಿನಲ್ಲಿರುವುದನ್ನೇ ಹೇಳಿದಿರಿ. ಹೌದು ಅಣ್ಣ, ಹಾಗೇ ಮಾಡು. ನಾವಂತೂ ಬಡವರು. ಅಳಿಯನಿಗೆ ಕೈ ತುಂಬಾ ಏನನ್ನೂ ಕೊಡಲಾರೆವು ಏನೋ ದೊಡ್ಡ ಮನಸ್ಸು ಮಾಡಿ .. ...."

ವೆಂಕಟಸುಬ್ಬಯ್ಯ ಕಿರುನಗೆ ನಕ್ಕು 'ನಾನು ಶಿವರಾಮುಗಿಂತಲೂ ಒಳ್ಳೆ ಹುಡುಗನ್ನ ಹುಡುಕಿ ಕೊಟ್ಟರೆ ...... ?" ಎಂದರು.

ಸೀತಾರಾಮಯ್ಯನವರು ಮಾತನಾಡುವುದಕ್ಕೆ ಮುಂಚೆಯೇ ಸರೋಜಮ್ಮ "ನಿನಗೆ ಯಾವಾಗಲೂ ತಮಾಷಿಯಾಯಿತು ಅಣ್ಣ. ಶಿವರಾಮುವಿಗಿಂತಲೂ ಭಾರತಿಗೆ ಒಳ್ಳೆ ವರ ಎಲ್ಲಿ ಸಿಗಬೇಕು? ಅಥವಾ ಬಡವರ ಮನೆ ಹುಡುಗಿ ಅಂತ ತಾತ್ಸಾರ ಮಾಡ್ತಿದೀಯೋ, ಇಲ್ಲಾ ಸೋದರ ಸೊಸೇನ ಮಗನಿಗೆ ತಂದುಕೊಳ್ಳುವುದು ನಿನಗಿಷ್ಟವಿಲ್ಲವೋ !"

"ಸರೋಜ, ನನ್ನ ತಪ್ಪು ತಿಳಿಯ ಬೇಡ. ಮೊದಲನೆಯದಾಗಿ ಶಿವರಾಮು ಇನ್ನ ಎರಡು ವರ್ಷ ಮದುವೆಯಾಗೋಲ್ಲಾ ಅಂತಿದಾನೆ. ಶಿವರಾಮು ಕೈ ಹಿಡಿದರೆ ಹುಡುಗಿ ಸುಖ ಪಡುವುದೂ ಅಷ್ಟರಲ್ಲೇ ಇದೆ. ಅವನು ಓದಿ ದೊಡ್ಡ ಕೆಲಸ ಮಾಡಿ ಸಂಸಾರಕ್ಕೆ ಹೊಣೆಯಾಗ್ತಾನೆ ಅಂತ ನಾನು ಹೊಟ್ಟೆ ಬಟ್ಟೆ ಕಟ್ಟಿ, ಶಿವರಾಮೂನ ಓದಿಸಿದ್ದೇನೆ. ಮುಂದೆ ತಮ್ಮಂದಿರನ್ನು ಓದಿಸುವುದು, ತಂಗಿಯರ ಮದುವೆಯೆಲ್ಲಾ ಅವನಿಗೆ ಸೇರಿದ್ದು. ಅನಾಯಾಸವಾಗಿ ಇನ್ನೂ ಉತ್ತಮ ವರ ಸಿಕ್ಕಿರುವಾಗ ಯಾಕೆ ಬಿಡಬೇಕು? ಭಾರತಿಯಂತಹ ಸೊಸೆ ಸಿಗಬೇಕಾದರೆ ನಾನೂ ಪುಣ್ಯ ಮಾಡಿರಬೇಕು. ನಿನ್ನ ಮಗುವಾದರೇನಂತೆ? ಎಲ್ಲಾದರೂ ದೊಡ್ಡ ಕಡೆ ಸೇರಿ ಸುಖವಾಗಿರಲಿ. ನಮ್ಮ ಮನೆ ಹೆಣ್ಣುಮಗು ಸಂತೋಷವಾಗಿರುವುದು ನನಗೂ ಬೇಕು."

"ಶಿವರಾಮುವಿಗಿಂತಲೂ ಉತ್ತಮ ವರ ಯಾರಿದಾರಪ್ಪಾ ?"

ಬೆಂಗಳೂರಿನಲ್ಲಿ ರಿಟೈರ್ಡ್ ಅಮಲ್ದಾರರು ರಂಗಣ್ಣ ಅಂತ ನಮವರ್ಕು ಇದಾರೆ. ಅವರ ಹೆಸರು ಕೇಳಿದೀಯಾ ?"

"ಇಲ್ಲ"

"ಅವರಿಗೆ ಒಬ್ಬನೇ ಮಗ. ಆನಂದ ಅಂತ ಹೆಸರು."

"ಏನು ಓದಿದಾನೆ? ನಮ್ಮ ಶಿವರಾಮು ಅಷ್ಟು ಓದಿದಾನೆಯೇ ?"

"ಶಿವರಾಮುವಿಗಿಂತಲೂ ಹೆಚ್ಚು ಓದಿದಾನೆ. ಬಿ. ಎಸ್‌ಸಿ. ಬಿ. ಇ. ಹೋದ ವರ್ಷವೇ ಆಯಿತು."

"ಕೆಲಸದಲ್ಲಿದ್ದಾನೆಯೇ ?"

"ಹೂಂ. ಹಿಂದೂಸ್ಥಾನ್ ಏರ್ ಫ್ಯಾಕ್ಟರಿಯಲ್ಲಿ ೬೫೦. ರೂ ಗೆ ಕೆಲಸಕ್ಕಿದಾನೆ."

"ವಯಸ್ಸೆಷ್ಟೋ ?"

"ಇಪ್ಪತ್ನಾಲ್ಕು ವರ್ಷವಂತೆ. ನೋಡೋದಕ್ಕೂ ತುಂಬಾ ಲಕ್ಷಣ ವಾಗಿದಾನೇಂತ ನನ್ನ ಸ್ನೆಹಿತರು ಸುಂದರರಾಯರು ಹೇಳಿದರು. ನಾಳೆ ದಿನ ಸುಂದರರಾಯರು ಭಾರತೀನ ನೋಡಲು ಇಲ್ಲಿಗೆ ಬರುತ್ತಾರೆ."

"ಆ ಹುಡುಗನಿಗೆ ತಾವಾಗಿಯೇ ಹೆಣ್ಣು ಹುಡುಕಿಕೊಂಡು ಹೊರ ಟಿರಲು ಕಾರಣ ವೇನು ?"

"ಅವರಿಗೆ ಇಷ್ಟುದಿನ ಮದುವೆ ಮಾಡುವ ಯೋಚನೆಯೇ ಇರಲಿಲ್ಲ ವಂತೆ. ಈಗ ಇನ್ನು ಹದಿನೈದು ದಿನಗಳಲ್ಲಿ ಮದುವೆ ಮಾಡಿಕೊಡಬೇಕು ಎಂದು ನಿರ್ಧರಿಸಿದಾರಂತೆ. ನನಗೆ ಸರಿಯಾಗಿ ಗೊತ್ತಿಲ್ಲ. ನಾನೂ ಅವ ರನ್ನು ಕೆದಕಿ ಕೇಳಲಿಲ್ಲ."

"ನಿನ್ನ ಸ್ನೇಹಿತರಿಗೆ ನಮ್ಮನೇಲಿ ಹೆಣ್ಣಿದೆ ಅಂತ ಯಾರು ಹೇಳಿದರು ?"

"ಮೊನ್ನೆ ಸುಂದರರಾಯರು ನಮ್ಮನೆಗೆ ಬಂದಿದ್ದರು. ಹಾಗೆ ಮಾತಿಗೆ ಮಾತು ಬಂದು ಸುಂದರರಾಯರು ನಮ್ಮ ರಂಗಣ್ಣೋರ ಮಗನಿಗೆ ಹೆಣ್ಣು ಬೇಕಂತೆ. ಯಾರನ್ನಾದರೂ ಹೇಳಪ್ಪ. ಹುಡುಗಿ ತುಂಬಾ ಲಕ್ಷಣವಾಗಿರ ಬೇಕು. ಬಡವರಾದರೂ ಚಿಂತೆಯಿಲ್ಲ. ಎಸ್. ಎಸ್. ಎಲ್. ಸಿ. ಪಾಸಾ ಗಿದ್ದರೆ ಸಾಕು ಎಂದು ಹೇಳಿದ್ದರು. ಕೂಡಲೇ ನನಗೆ ಭಾರತಿಯ ಜ್ಞಾಪಕ ಬಂತು. ನಾನು ನೋಡಿದಾಗ ಅವಳಿನ್ನೂ ಹನ್ನೊಂದು ವರ್ಷದ ಹುಡುಗಿ. ಆದರೂ ಏನು ಕಳೆ! ಈಗ ಇನ್ನೂ ಚೆನ್ನಾಗಿರ ಬೇಕು ಎಂದು ಊಹಿಸಿ, 'ನನ್ನ ತಂಗಿ ಮಗಳಿದ್ದಾಳೆ ಹೋಗಿ ನೋಡಿಕೊಂಡು ಬರೋಣ' ಎಂದು ಹೇಳಿ ಕರೆದುಕೊಂಡು ಬಂದೆ."

"ಅವರು ನಾಳೆ ಎಷ್ಟು ಹೊತ್ತಿಗೆ ಬರುತ್ತಾರೆ ?"

"ಊಟಕ್ಕೆ ಇಲ್ಲಿಗೇ ಬರಬೇಕು ಎಂದು ಹೇಳಿದೀನಿ"

"ಅಮ್ಮ, ಮಾವ ಬಂದರೇನಮ್ಮ" ಎಂದು ಕೂಗುತ್ತಾ ರಾಜಾರಾಮು ಒಳಗೆ ಬಂದ. "ಹೂಂ, ಬಂದಿದಾನೆ ನಿಮ್ಮ ಮಾವ. ಯಾವ ಕ್ಲಾಸೋ ನೀನು?"

"ಐದನೆಯ ಫಾರಂ ಓದುತ್ತಿದೀನಿ"

ವೆಂಕಟಸುಬ್ಬಯ್ಯನವರು ಸೋದರಳಿಯನಿಗೆ ಬೆಂಗಳೂರಿನಿಂದ ತಾವು ತಂದಿದ್ದ ಹಣ್ಣು ಕೊಟ್ಟರು. ಹಣ್ಣು ತಿಂದೊಡನೆ ರಾಜಾರಾಮು ಕ್ರಿಕೆಟ್ ಆಡಲು ಓಡಿ ಹೋದ.

ಮಾವ ಬಂದಿರಬಹುದೆಂದು ಊಹೆಯಿಂದ ವಾಣಿ ಮೆಲ್ಲನೆ ಒಳಗೆ ಬಂದಳು. ಅವಳಿಗೆ ಮಾವನ ಪರಿಚಯವಿರಲಿಲ್ಲ. ಆದರೆ ಅವರು ಬರುವ ಸುದ್ದಿಗಳಿದ್ದಿದ್ದರಿಂದ ಮನೆಯಲ್ಲಿದ್ದ ಹೊಸ ವ್ಯಕ್ತಿಯೇ ಮಾವನಿರಬೇಕೆಂದು ಊಹಿಸಿದಳು.

"ಏನು ಮಗೂ? ನನ್ನ ಜ್ಞಾಪಕ ಇದೆಯೇ? ಆಗಿನ್ನು ನೀನು ಪುಟ್ಟ ಹುಡುಗಿ. ಭಾರತಿ ಯಾಕೆ ಇನ್ನೂ ಬಂದಿಲ್ಲ?"

ಅವಳಿಗೆ ಕಾಲೇಜಾದ ಮೇಲೆ ಆಟವಿರುತ್ತದೆ. ಆಟ ಮುಗಿಸಿಕೊಂಡು ಬರುತ್ತಾಳೆ.

ಇಷ್ಟು ಮಾತಾದ ಮೇಲೆ ಭಾವ, ಭಾವಮೈದುನ ತಿರುಗಾಡಲು ಹೊರಗೆ ಹೋದರು. ಭಾರತಿ ಬಂದ ಕೂಡಲೇ ಸರೋಜಮ್ಮ

"ಅಣ್ಣ ಇದುವರೆವಿಗೂ ನಿನಗಾಗಿ ಕಾದು ಇದೀತಾನೆ ಹೊರಗೆ ಹೋದ" ಎಂದರು.

"ಏನು ಆಗಲೇ ಊರಿಗೆ ಹೊರಟು ಹೋದರೇ?"

"ಇಲ್ಲ. ಅವರು ಅಣ್ಣ ಸುತ್ತಾಡಿಕೊಂಡು ಬರಲು ಹೋಗಿದಾರೆ. ಅವರು ಬರುವಷ್ಟರಲ್ಲಿ ನೀನು ಮುಖ ತೊಳೆದುಕೊಂಡು ಜಡೆ ಹಾಕಿಕೊಂಡಿರು."

ಭಾರತಿ ಬೇಸರದಿಂದ "ಹೋಗಮ್ಮ, ಆಗಲೇ ಆರು ಗಂಟೆಯಾಯಿತು. ಈಗ ಜಡೆ ಹಾಕಿಕೊಂಡು ಎಲ್ಲಿಗೆ ಹೋಗಬೇಕು" ಎಂದಳು.

"ಅಣ್ಣ ಅಪರೂಪಕ್ಕೆ ಬಂದಿರುವಾಗ ನೀಟಾಗಿರಬೇಡವೇ?"

"ನಾನು ಈಗ ಏನಾಗಿದ್ದೀನಿ? ಇಷ್ಟಕ್ಕೂ ಮಾವ ನನ್ನ ನೋಡಿ ಮೆಚ್ಚಿ ನನಗೆ ಗಂಡು ಗೊತ್ತುಮಾಡಬೇಕಾಗಿದೆಯೇನು?" ಭಾರತಿ ತಮಾಷೆಗಾಗಿ ಕೇಳಿದಳು.

"ಹೌದು. ಆದುದರಿಂದ ತಾನೇ ತಲೆ ಬಾಚಿಕೋ ಅಂತ ಹೇಳಿದೆ."

"ಏನು !"

"ನಿಜವಾಗಿಯೂ ಭಾರತಿ. ನಾನು ಸದ್ಯಕ್ಕೆ ಹೇಳುವ ಹಾಗೆ ಕೇಳು."

"ನಾನೀಗಲೇ ಮದುವೆ ಮಾಡಿಕೊಳ್ಳಲ್ಲ."

"ನಾನು ಮದುವೆ ಮಾಡಿಕೊಳ್ಳುವಾಗಲೂ ಹಾಗೇ ಹೇಳಿದ್ದೆ."

ಭಾರತಿ ತಾಯಿಯ ಮೇಲೆ ಹುಸಿಮುನಿಸು ತೋರಿಸಿ ಒಳಕ್ಕೆ ಹೋದಳು.

ಸ್ವಲ್ಪ ಹೊತ್ತಾದ ಮೇಲೆ ವೆಂಕಟಸುಬ್ಬಯ್ಯನವರು ಸುತ್ತಾಡಿ ಕೊಂಡು ಒಳಗೆ ಬಂದವರೇ ಆತುರದಿಂದ 'ಭಾರತಿ ಬಂದಳೇ' ಎಂದು ತಂಗಿಯನ್ನು ಕೇಳಿದರು.

"ಬಂದಿದಾಳೆ."

"ಎಲ್ಲಿ ಕಾಣಲಿಲ್ಲ ?"

"ಅವಳಿಗೆ ಕತೆ ಪುಸ್ತಕ ಸಿಕ್ಕಿಬಿಟ್ಟಿರಬೇಕು. ಪ್ರಪಂಚವೇ ಮರೆತು ಹೋಗುತ್ತದೆ. ರೂಮಿನಲ್ಲಿ ಓದುತ್ತಾ ಇರಬೇಕು."

ವೆಂಕಟಸುಬ್ಬಯ್ಯನವರು ಸೋದರಸೊಸೆಯನ್ನರಿಸಿ ರೂಮಿಗೆ ಬಂದರು. ಭಾರತಿ ದೀಪಕ್ಕೆದುರಾಗಿ ಕುರ್ಚಿ ಹಾಕಿಕೊಂಡು ಕೈಯಲ್ಲಿ ಪುಸ್ತಕ ಹಿಡಿದಿದ್ದಳು. ದೀಪದ ಬೆಳಕು ಅವಳ ಮುಖದ ಮೇಲೆ ಬಿದ್ದು ಮುಖಕ್ಕೆ ಚಿನ್ನದ ಕಾಂತಿ ಕೊಟ್ಟಿತ್ತು. ಕಪ್ಪಾದ, ದಟ್ಟವಾದ ಅಲೆಗೂದಲು ಹಣೆಯ ಮೇಲೆ ಹಾರಾಡುತ್ತಿತ್ತು. ಕಾದಂಬರಿಯಲ್ಲಿನ ಯಾವ ಸನ್ನಿವೇಶ ವನ್ನು ಓದುತ್ತಿದ್ದಳೋ ಹುಬ್ಬುಗಳು ಕೊಂಚ ಗಂಟಿಕ್ಕಿದ್ದವು. ಕಣ್ಣುಗಳು ಗಾಬರಿಯಿಂದ ಮುಂದೇನಾಗುವುದೋ ಎಂದು ತಿಳಿಯಲು ಕಾಗದದ ಮೇಲೆ ಓಡುತ್ತಿದ್ದವು. ಉದ್ವೇಗದಲ್ಲಿ ಕೊಂಚ ತೆರೆದ ಬಾಯಿ.

ವೆಂಕಟಸುಬ್ಬಯ್ಯನವರು ಬಾಗಿಲ ಬಳಿ ನಿಂತು ಭಾರತಿಯನ್ನು ನೋಡಿದರು. ಭಾರತಿ ಅವರ ಕಲ್ಪನೆಯಂತೆ ಅಂದು ಮೊಗ್ಗಾಗಿ ದ್ದವಳು ಇಂದು ಅರಳಿ ಹೂವಾಗಿದ್ದಳು. ಅವರ ಕಲ್ಪನೆಗೂ ಮೀರಿದ ಚಲುವೆಯಾಗಿ ಮಿಂಚಿನ ಬಳ್ಳಿಯಂತಿದ್ದಳು. ವೆಂಕಟಸುಬ್ಬಯ್ಯನವರು ಭಾರತಿಯನ್ನು ಶಿವೂಗೆ 'ಬೇಡ' ಎಂದು ಹೇಳಬಾರದಾಗಿತ್ತೇನೋ ಎಂದು ಕೊಂಡರು. ಆ ಯೋಚನೆಯನ್ನು ಮನಸ್ಸಿನಿಂದ ಓಡಿಸಿ ಮೃದುವಾಗಿ 'ಭಾರತಿ' ಎಂದರು.

ಭಾರತಿ ಭಾವನಾಪ್ರಪಂಚದಿಂದ ಎಚ್ಚೆತ್ತಳು. ಗಂಟಿಕ್ಕಿದ ಹುಬ್ಬು

ಸಡಿಲವಾಗಿ ಬಾಗಿದ ಬಿಲ್ಲಿನಂತಾಯಿತು. ಗಾಬರಿಯ ಕಣ್ಣುಗಳಲ್ಲಿ ಸಂಕೋಚ, ಲಜ್ಜೆಯ ನಸುಕಾಂತಿ ಹೊಳೆದುವು. ತುಟಿಯ ಮೇಲೆ ನಸು ನಗೆ ಲಾಸ್ಯವಾಡಿತು. ಭಾರತಿ ಪುಸ್ತಕ ಮುಚ್ಚಿ, ಎದ್ದುನಿಂತು 'ಬನ್ನಿ ಮಾವ. ಕುಳಿತುಕೊಳ್ಳಿ' ಎಂದು ತಾನು ಕುಳಿತಿದ್ದ ಕುರ್ಚಿಯ ಕಡೆ ಕೈ ತೋರಿದಳು. ವೆಂಕಟಸುಬ್ಬಯ್ಯನವರು ಕುರ್ಚಿಯ ಮೇಲೆ ಕುಳಿತು 'ಏನು ಓದುತ್ತಿದ್ದೆ ಮಗು' ಎಂದರು.

"ಯಾವುದೋ ಕತೆ ಪುಸ್ತಕ."

"ನಾನು ಜ್ಞಾಪಕವಿದೆಯೇ ತಾಯಿ ?"

ಹೂಂ. ಸುಮಾರಾಗಿ ಜ್ಞಾಪಕವಿದೆ."

ವೆಂಕಟಸುಬ್ಬಯ್ಯನವರು ಭಾರತಿಯೊಡನೆ ಲೋಕಾಭಿರಾಮವಾಗಿ ಕಾಲೇಜಿನ ವಿಷಯ, ಅವಳ ಗೆಳತಿಯರು, ಆಟ ಪಾಠಗಳನ್ನು ಕೇಳತೊಡಗಿದರು.

"ಊಟದ ನೆನಪೇ ಮರೆತುಹೋಯಿತೇನು ?" ಎಂದು ಸರೋಜಮ್ಮ ಕೂಗಿದಾಗ ಮಾವ, ಸೊಸೆಗೆ ಎಚ್ಚರವಾಯಿತು. ಅಲ್ಲಿಂದ ಎದ್ದು ಅವರು ಊಟದ ಮನೆಗೆ ನಡೆದರು. ಊಟಮಾಡುತ್ತಾ ವೆಂಕಟಸುಬ್ಬಯ್ಯನವರು

"ಸರೋಜ, ಗುಲಾಬಿ ಮೊಗ್ಗು ಎಂದಿಗೂ ಕಣಿಗಲೆ ಹೂವಾಗಿ ಅರಳುವುದಿಲ್ಲ ಎನ್ನುವ ಧೈರ್ಯವಿತ್ತು ನನಗೆ. ಆನಂದ ನಿನ್ನ ಅಳಿಯನಾದರೆ ನಿಜವಾಗಿಯೂ ನೀನು ಭಾಗ್ಯಶಾಲಿ" ಎಂದರು.

## ೨

ಭಾವೀ ಬೀಗರ ಪ್ರತಿನಿಧಿಯಾಗಿ ಬರಲಿದ್ದ ಸುಂದರರಾಯರನ್ನು ಕರೆದುತರಲು ವೆಂಕಟಸುಬ್ಬಯ್ಯನವರು ಭಾವನೊಂದಿಗೆ ಹೊರಟರು. ಸರೋಜಮ್ಮ ಅಡಿಗೆ ಮನೆಯಲ್ಲಿ ಸೆರೆಯಾಗಿದ್ದರು. ವಾಣಿ ಭಾರತಿಯನ್ನು ಆಗಲೇ ಮದುವೆ ಗೊತ್ತಾಗಿದೆ ಎನ್ನುವಂತೆ ಕೀಟಲೆ ಮಾಡುತ್ತಿದ್ದಳು.

"ಆನಂದರಾಯರ ಪತ್ನಿ ಏನಂತಾರೆ ?"

"ಸುಮ್ಮನಿರೆ. ಮದುವೇಗೆ ಮುಂಚೇನೆ ಸಿಕ್ಕಿದವರ ಹೆಂಡತಿ ಮಾಡಬೇಡ."

"ಇವತ್ತಿಲ್ಲದಿದ್ದರೆ ನಾಳೆ ಆಗ್ತಿಯಾ."

"ಆದ ಮೇಲೆ ಬೇಕಾದರೆ ಹಾಸ್ಯ ಮಾಡುವಿಯಂತೆ"

"ಈಗಿನಿಂದಲೇ ಮಾಡಿದರೆ ತಪ್ಪೇನು? ಅಕೋ, ಆಗಲೇ ಮದುವೆ ಅಂತ ನೆನೆದು ಮುಖ ಎಲ್ಲಾ ಕೆಂಪಗಾಗುತ್ತಾ ಇದೆ."

"ಕೆಂಪೂ ಇಲ್ಲ, ಹಳದೀನೂ ಇಲ್ಲ. ನಾನೇನು ಈಗಲೇ ಮದುವೆ ಮಾಡಿಕೊಳ್ಳೋಲ್ಲ. ಗೊತ್ತೋ?"

"ಹೌದು. ಅದಕ್ಕೇ ಪಾಪ, ಅಮ್ಮ ಇವತ್ತು ಕಾಲೇಜಿಗೆ ಹೋಗ ಬೇಡ ಮನೇಲಿ ಇರು ಅಂತ ಹೇಳಿದ್ದಕ್ಕೆ ಅವಳ ಮಾತನ್ನು ಶಿರಸಾವಹಿಸು ತ್ತಿದ್ದೀಯ. ನಿನಗಿಷ್ಟ ಇಲ್ಲದಿದ್ದರ ಕಾಲೇಜಿಗೆ ಹೊರಟುಹೋಗಬೇಕಾ ಗಿತ್ತು." ವಾಣಿ ಕೆಣಕಿ ನುಡಿದಳು.

"ಅಮ್ಮ ಬೈತಾಳೇಂತ....."

"ಮಹಾ, ಅಮ್ಮನಿಗೆ ನೀನು ಹೆದರಿಕೊಳ್ಳುವುದು ಅಷ್ಟರಲ್ಲೇ ಇದೆ."

"ನನ್ನ ನೋಡೋಕೆ ಅಂತ ಅಷ್ಟು ದೂರದಿಂದ ಬಂದವರಿಗ ಅವಮಾನ ವಾಗಬಾರದೂಂತ....."

"ಈ ಒಣ ಮಾತು ಯಾಕಮ್ಮ...."

ಹೊರಗಡೆ ಮಾವ, ತಂದೆಯ ದನಿಯಾಗಲು ಇಬ್ಬರೂ ಮಾತು ನಿಲ್ಲಿ ಸಿದರು. ಎಲ್ಲರೂ ಊಟ ಮುಗಿಸಿ ಮಾತಿಗೆ ಕುಳಿತರು. ವೆಂಕಟಸುಬ್ಬಯ್ಯ ನವರೇ ಮಾತಿಗೆ ಮೊದಲುಮಾಡಿದರು.

"ಒಂದು ಗಳಿಗೆ ವಿಶ್ರಮಿಸಿಕೊಳ್ಳಿ ರಾಯರೇ."

"ಛೆ, ವಿಶ್ರಾಮ ಯಾಕೆ? ಬಂದ ಕೆಲಸ ಮೊದಲಾಗಲಿ."

"ರಾಯರೇ, ಒಂದು ಮಾತು. ಭಾವ ಕೆಲವು ವಿಚಾರಗಳನ್ನು ವಿವರ ವಾಗಿ ತಿಳಿಯಬೇಕೂಂತ ಅಪೇಕ್ಷೆ ಪಡುತ್ತಿದ್ದಾನೆ."

"ಏನು ಸಂದೇಹ ಇದ್ದರೂ ಈಗಲೇ ಪರಿಹಾರ ಮಾಡಿಕೊಂಡು ಬಿಡಿ ಸೀತಾರಾಮಯ್ಯನವರೇ. ಸಂಕೋಚ ಪಟ್ಟುಕೊಳ್ಳಬೇಡಿ. ರಂಗಣ್ಣ, ನಾನು ಆಪ್ತ ಗೆಳೆಯರು. ಮೊದಲಿನಿಂದಲೂ ಒಟ್ಟಿಗೆ ಆಡಿ ಬೆಳೆದವರು. ಆನಂದ ನನ್ನ ಕಣ್ಣೆದುರಿಗೆ ಹುಟ್ಟಿ ಬೆಳೆದ ಮಗು. ಚಿನ್ನದಂತಹ ಹುಡುಗ. ವಿದ್ಯೆ, ವಿನಯ, ರೂಪು ಯಾವುದರಲ್ಲೂ ತೆಗೆದು ಹಾಕುವ ಹಾಗಿಲ್ಲ........"

ಸುಂದರರಾಯರು ಮಾತು ಮುಗಿಸುವ ಮುನ್ನ ಸೀತಾರಾಮಯ್ಯ ಪ್ರಶ್ನಿಸಿದರು.

"ತಾವೇ ಹೋಗಿ ಹೆಣ್ಣು ಕೇಳಲು ಕಾರಣವೇನು?"

ಸುಂದರರಾಯರು ಜೋರಾಗಿ ನಗುತ್ತಾ "ನನಗೆ ಗೊತ್ತು. ನೀವು ಈ ರೀತಿ ಸಂಶಯಪಡುತ್ತೀರಿ ಅಂತ. ಬ್ರಾಹ್ಮಣರ ಜಾತೀಲಿ ಗಂಡಸರು

ವಧೂ ಹುಡುಕುವುದು ಅಪರೂಪವಾದ್ದರಿಂದ್ದ ನಿಮ್ಮ ಸಂಶಯ ಸಹಜ. ಇರುವ ಸಂಗತಿ ಹೇಳ್ತೀನಿ. ಆನಂದನನ್ನು ಕಾರ್ಖಾನೆಯವರು ಹೆಚ್ಚಿನ ಶಿಕ್ಷಣ ಪಡೆಯಲು ಇಂಗ್ಲೆಂಡಿಗೆ ಕಾರ್ಖಾನೆಯ ವೆಚ್ಚದಲ್ಲಿ ಕಳುಹಿಸಬೇಕೆಂದಿದಾರೆ. ಆನಂದ ಸದ್ಯದಲ್ಲಿಯೇ ಇಂಗ್ಲೆಂಡಿಗೆ ಹೋಗುತ್ತಾನೆ."

"ಸರಿ"

"ರಂಗಣ್ಣನವರಿಗೆ, ಅವರ ಹೆಂಡತಿಗೆ ಮಗನಿಗೆ ಮದುವೆ ಮಾಡದೆ ಕಳುಹಿಸುವುದು ಸುತರಾಂ ಇಷ್ಟವಿಲ್ಲ. ಅಲ್ಲಿಗೆ ಬ್ರಹ್ಮಚಾರಿಯಾಗಿ ಹೋದರೆ ಯಾವ ಕಟ್ಟು, ನಿಬಂಧನೆ ಇಲ್ಲದೆ ಎಲ್ಲಿ ಬಿಳೀ ಹುಡುಗಿಯನ್ನು ಮೋಹಿಸಿ ಬಿಡುತ್ತಾನೋ ಎಂದು ಅವರಿಗೆ ತುಂಬ ಹೆದರಿಕೆ. ಮದುವೆಯಾಗಿದ್ದರೆ ಮನಸ್ಸಿಗೆ ಕಡಿವಾಣ ಹಾಕಿದ ಹಾಗಿರುತ್ತದೆ. ಹುಡುಗ ಎಲ್ಲೆ ಮೀರಿ ಹೋಗುವುದಿಲ್ಲ ಅಂತ ಅವರ ಭಾವನೆ. ಹೆಂಡತಿಯ ಮೇಲಿನ ಮೋಹ ಅವನನ್ನು ಕಟ್ಟಿನಲ್ಲಿಟ್ಟಿರುತ್ತದೆ ಎಂದು ಅವರ ಎಣಿಕೆ. ಇಲ್ಲದಿದ್ದರೆ ಅಲ್ಲಿ ಫರಂಗಿ ಹೆಂಗಸರ ಹಾವಭಾವಗಳಿಗೆ ಮನಸೋತು ಅಲ್ಲಿಯೇ ನಿಂತುಬಿಟ್ಟರೇನು ಗತಿ ಎಂದು ತಲೆಯಮೇಲೆ ಕೈಹೊತ್ತು ಕುಳಿತಿದ್ದಾರೆ."

ಸೀತಾರಾಮಯ್ಯನವರ ಸಂದೇಹ ಕ್ರಮೇಣ ಮರೆಯಾಗಿ ಅವರ ಮನಸ್ಸಿನಲ್ಲಿ ಸಂತಸವುಕ್ಕಿತು. ಮುಖದಲ್ಲಿಯೂ ಅದು ವ್ಯಕ್ತವಾಯಿತು.

"ಅದಕ್ಕೇ ಅವರು ಮಗನಿಗೆ ಕೂಡಲೇ ಮದುವೆಮಾಡಿಬಿಡಬೇಕು ಅಂತ ಆತುರಪಡುತ್ತಿದ್ದಾರೆ. ಹುಡುಗಿಯ ಮನೆಯವರು ಬಡವರಾದರೂ ಚಿಂತೆಯಿಲ್ಲ. ಎಸ್. ಎಸ್. ಎಲ್. ಸಿ. ಯಾಗಿದ್ದರೆ ಸಾಕು. ಆದರೆ ಹುಡುಗಿ ಮಾತ್ರ ತುಂಬಾ ರೂಪವತಿಯಾಗಿರಬೇಕು ಅಂತ ಹೇಳಿದ್ದಾರೆ. ಇಂಗ್ಲೆಂಡಿನ ರಮಣಿಯರ ಮೋಹಪಾಶವನ್ನು ತಳ್ಳಿ ತನ್ನ ಕಡೆ ಆಕರ್ಷಿಸಿಕೊಳ್ಳುವ ರೂಪಸಿಯಾಗಿರಬೇಕು ಹುಡುಗಿ. ಇರುವ ವಿಷಯ ಹೇಳಿದೇನೆ."

"ಹುಡುಗನ ಮನೆಯ ಸ್ಥಿತಿ ಹೇಗಿದೆ?"

"ತಕ್ಕಮಟ್ಟಿಗಿದಾರೆ. ರಂಗಣ್ಣನವರಿಗೆ ಆನಂದ ಒಬ್ಬನೇ ಮಗ. ಮದ್ದೂರಿನ ಹತ್ತಿರ ಹತ್ತು ಎಕರೆ ಗದ್ದೆಯಿದೆ. ಬೆಂಗಳೂರಿನಲ್ಲಿ ಸ್ವಂತ ಮನೆಯಿದೆ. ಆನಂದನಿಗೆ ಈಗ ಇನ್ನೂರೈವತ್ತು ರೂಪಾಯಿ ಬರುತ್ತಿದೆ. ಕೆಲಸಕ್ಕೆ ಸೇರಿ ಇನ್ನೂ ಒಂದು ವರ್ಷವಾಯಿತು. ಇಂಗ್ಲೆಂಡಿನಿಂದ ಬಂದ ಮೇಲೆ ಸಂಬಳ ಹೆಚ್ಚಾಗುತ್ತದೆ. ಮುಂದೆ ಅವನ ಅದೃಷ್ಟ, ಬುದ್ಧಿ ಇದ್ದ ಹಾಗೆ ಮುಂದೆ ಬರುತ್ತಾನೆ."

ವಿಷಯವನ್ನೆಲ್ಲ ಕೇಳಿ ಸೀತಾರಾಮಯ್ಯನವರ ಮುಖ ಊರಗಲ

ವಾಯಿತು. ಸಾಮಾನ್ಯ ಗುಮಾಸ್ತನ ಮಗಳು ಅಷ್ಟು ದೊಡ್ಡ ಪದವಿಗೇರು ವುದು ಅವರು ಕನಸಿನಲ್ಲಿಯೂ ನಂಬಲು ಸಾಧ್ಯವಾಗದ ಮಾತು. ಈಗ ವಿದ್ಯಾವಂತ ತರುಣನ ಕೈ ಅನಾಯಾಸವಾಗಿ ತಮ್ಮ ಮಗಳು ಹಿಡಿಯುವ ಸುಯೋಗ ಒದಗಿಬಂದುದಕ್ಕಾಗಿ ಅವರಿಗೆ ತುಂಬಾ ಸಂತೋಷವಾಯಿತು. ಆದರೆ ಮುಂದಿನ ಕಾರ್ಯವೆಲ್ಲಾ ಅವರ ಮಗಳ ಸೌಂದರ್ಯವನ್ನವಲಂಬಿ ಸಿತ್ತು.

ಸುಂದರರಾಯರು ಸೀತಾರಾಮಯ್ಯನವರ ಮುಖದಲ್ಲಿ ಅವರ ಮಗಳ ಮುಖವನ್ನು ಕಲ್ಪಿಸಿಕೊಂಡರು. ಅವರ ಉತ್ಸಾಹಕ್ಕೆ ತಕ್ಕಮಟ್ಟಿಗೆ ತಣ್ಣೀರೆರಚಿದಂತಾಯಿತು. ತಂದೆ ಹೀಗಿದ್ದರೆ ಮಗಳೂ ಇವರಂತೆಯೇ ಇದ್ದರೆ? ವೆಂಕಟಸುಬ್ಬಯ್ಯನವರ ಮಾತು ಕೇಳಿ ವೃಥಾ ಬಂದ ಹಾಗಾಯಿ ತೇನೋ ಎಂದುಕೊಂಡರು ಅವರು.

ಸುಂದರರಾಯರ ಮುಖದ ಮೇಲೆ ಮೂಡಿದ ಅನುಮಾನ ಗ್ರಹಿಸಿ ವೆಂಕಟಸುಬ್ಬಯ್ಯ ತನ್ನಲ್ಲೇ ನಗುತ್ತ 'ಭಾವ, ಭಾರತೀನ ಕರಿ' ಎಂದರು. ಸೀತಾರಾಮಯ್ಯನವರು ಎದ್ದು ಒಳಗೆ ಹೋದರು.

ಎರಡು ನಿಮಿಷಗಳ ನಂತರ ಕೈಯಲ್ಲಿ ವೀಳೆಯದೆಲೆ, ಅಡಿಕೆ, ಸುಣ್ಣ ವಿದ್ದ ತಟ್ಟೆಯೊಂದನ್ನು ಹಿಡಿದು ತಂದೆಯೊಡನೆ ಭಾರತಿ ಒಳಗೆ ಬಂದಳು. ನೀಲಿ ಧರ್ಮಾವರದ ಸೀರೆಯುಟ್ಟು, ಬಿಳಿಯ ಸಿಲ್ಕಿನ ರವಿಕೆ ತೊಟ್ಟು ಕೆಂಪೇರಿದ ಕೆನ್ನೆಯೊಡನೆ ಭಾರತಿ ಒಳಗೆ ಬಂದೊಡನೆ ಸುಂದರರಾಯರ ಅನುಮಾನ ದೂರವಾಯಿತು. ಅವರ ಮುಖದ ಮೇಲೆ ಕಂಡ ತೃಪ್ತಿಯ ನಗು ವೆಂಕಟಸುಬ್ಬಯ್ಯನಿಗೆ ಸಮಾಧಾನ ತಂದಿತು. ವೆಂಕಟಸುಬ್ಬಯ್ಯ ಸೊಸೆಗೆ,

"ಸುಂದರರಾಯರಿಗೆ ನಮಸ್ಕಾರ ಮಾಡಮ್ಮ" ಎಂದರು.

ಭಾರತಿ ತಟ್ಟೆಯನ್ನು ಮೇಜಿನ ಮೇಲಿಟ್ಟು ಚಿಗುರಿನಂತಹ ಕೈಗಳಿಂದ ಸುಂದರರಾಯರ ಒರಟು ಕಾಲನ್ನು ಮುಟ್ಟಿ ನಮಸ್ಕರಿಸಿದಳು. ಹುಡುಗಿಯ ಎಳೆಯ ಕೈಗಳು ತಮ್ಮ ಒಡೆದು ಚೂರಾಗಿದ್ದ ಒರಟು ಕಾಲನ್ನು ಸ್ಪರ್ಶಿಸಿದ ಕೂಡಲೇ ಸುಂದರರಾಯರು ಕಾಲನ್ನು ಹಿಂದಕ್ಕೆಳೆದುಕೊಂಡು

"ಛೇ ಛೇ, ನನಗೇಕೆ ನಮಸ್ಕಾರ ಮಾಡ್ತೀಯಮ್ಮ? ನಿನ್ನ ಅತ್ತೆ, ಮಾವ ಬರ್ತಾರಲ್ಲ ಅವರಿಗೆ ಮಾಡು" ಎಂದರು.

"ಇರಲಿ ನೀವೂ ಹಿರಿಯರು. ನಿಮಗೆ ನಮಸ್ಕಾರ ಮಾಡಿದರ ತಪ್ಪೇನು?" ವೆಂಕಟಸುಬ್ಬಯ್ಯ ಸಮಯೋಚಿತವಾಗಿ ನುಡಿದರು.

"ತಪ್ಪೇನಿಲ್ಲ. ನೀನು ಯಾವ ಕ್ಲಾಸಿನಲ್ಲಿ ಓದುತ್ತಿದೀಯಮ್ಮಾ ?"

"ಜೂನಿಯರ್ ಇಂಟರ್."

"ಸಂಗೀತ ಏನಾದರೂ ಬರುತ್ತದೆಯೇ ?"

ಭಾರತಿ ತಗ್ಗಿಸಿದ ತಲೆ ಎತ್ತಿ ತಂದೆಯ ಕಡೆ 'ಈ ಪ್ರಶ್ನೆಗೆ ನೀನೇ ಉತ್ತರ ಹೇಳು' ಎನ್ನುವಂತೆ ನೋಡಿದಳು. ಸೀತಾರಾಮಯ್ಯನವರು

"ಅವಳಿಗೆ ಸಂಗೀತದಲ್ಲಿ ಆಸಕ್ತಿಯಿಲ್ಲ. ಆದುದರಿಂದ ಏನೂ ಕಲಿಸಿಲ್ಲ" ಎಂದರು.

"ಒಳ್ಳೆಯದಾಯಿತು ಬಿಡಿ. ಹೆಣ್ಣುಮಕ್ಕಳಿಗೆ ನಾವು ಹಣ ಸುರಿದು ಸಂಗೀತ ಕಲಿಸುವುದು, ಅವರು ಮದುವೆಯಾಗುತ್ತಲೇ ವಾದ್ಯ ಮುಸುಗು ಹಾಕಿ ಮೂಲೆಯಲ್ಲಿ ಕುಳಿತುಬಿಡುತ್ತದೆ. ನನ್ನ ಮಗಳು ಸುಶೀಲಾಗೆ ವೀಣೆ ಹತ್ತು ವರ್ಷ ಹೇಳಿಸಿದೆ. ಈಗ ಅವಳ ಸಂಸಾರ ತಾಪತ್ರಯ, ಐದು ಮಕ್ಕಳ ಕಾಟದಲ್ಲಿ ವೀಣೆ ಮಾರೋಣ ಅಂತ ಯೋಚಿಸುತ್ತಾ ಇದಾಳೆ. ಮೊನ್ನೆ ಹೋಗಿದ್ದಾಗ 'ಒಂದು ಹಾಡು ಬಾರಿಸಮ್ಮ' ಎಂದೆ. 'ವೀಣೆ ಮುಖ ನೋಡಿ ಯುಗವಾಯಿತಣ್ಣ' ಎಂದಳು. ಅದೂ ಒಂದು ಕಲೆ ಅಂತ ಕೊನೆಯವರೆವಿಗೂ ಸಾಧಿಸಿಕೊಂಡು ಬರುವವರು ಮಾತ್ರ ಸಂಗೀತ ಕಲಿಯ ಬೇಕು ನೋಡಿ" ಎಂದು ಸುಂದರರಾಯರು ನುಡಿದರು.

"ಹೌದು. ಪಟ್ಟಮ್ಮಾಳ್ ಕಲಿತು ಹಾಡುತ್ತಾರಲ್ಲಾ ಹಾಗೆ ಇರ ಬೇಕು. ಮದುವೆಗಾಗಿ ಸಂಗೀತ ಕಲಿಯುವವರು ಕಲಿಯಲೇಬಾರದು."

ವಧೂ ಪರೀಕ್ಷೆ ಮುಗಿಯಿತು.

## ೩

ಸುಂದರರಾಯರು ಅದೇ ದಿನ ರಾತ್ರಿ ಹತ್ತು ಗಂಟೆಗೆ ಮೈಸೂರಿನಿಂದ ಹೊರಡುವ ರೈಲಿನಲ್ಲಿ ಬೆಂಗಳೂರಿಗೆ ಹೊರಟರು. ಹೊರಡುವುದಕ್ಕೆ ಮುಂಚೆ ವೆಂಕಟಸುಬ್ಬಯ್ಯನನ್ನು ಕರೆದು

"ರಂಗಣ್ಣ, ಆನಂದನನ್ನು ಸಾಧ್ಯವಾದರೆ ಭಾನುವಾರ ಕಳುಹಿಸು ತ್ತೇನೆ. ಯಾವುದಕ್ಕೂ ಕಾಗದ ಬರೆಯುತ್ತೇನೆ" ಎಂದರು.

ಸುಂದರರಾಯರು ಬೆಂಗಳೂರು ಸೇರಿದಾಗ ಬೆಳಗಿನ ಜಾವ ಆರು ಗಂಟೆಯಾಗಿತ್ತು. ರೈಲಿನಿಂದಿಳಿದವರು ನೇರವಾಗಿ ತಮ್ಮ ಸ್ನೇಹಿತರಾದ ರಂಗಣ್ಣನವರ ಮನೆಗೆ ಹೋದರು.

ವೇದಮ್ಮನವರು ಆದೇ ತಾನೇ ಎದ್ದು ಮುಂಬಾಗಿಲಿಗೆ ನೀರು ಚಿಮುಕಿಸಿ ರಂಗೋಲಿ ಇಡುತ್ತಿದ್ದರು.

"ರಂಗಣ್ಣೋರು ಎದ್ದಿದ್ದಾರೆಯೇ ತಾಯಿ ?"

ಅರ್ಧ ಬಾಗಿ ಉದಯರಾಗವನ್ನು ಮನಸ್ಸಿನಲ್ಲಿಯೇ ಹೇಳಿಕೊಳ್ಳು ತ್ತಿದ್ದ ವೇದಮ್ಮ, ನಸುಬೆಳಕಿನಲ್ಲಿ ಪರಿಚಿತ ದನಿಕೇಳಿ ಚಕಿತರಾಗಿ ತಲೆ ಎತ್ತಿ ಸುಂದರರಾಯರನ್ನು ನೋಡಿ,

"ಇನ್ನೂ ಎದ್ದಿಲ್ಲ. ಒಳಗೆ ಬಂದು ಕುಳಿತುಕೊಳ್ಳಿ. ಎಬ್ಬಿಸುತ್ತೇನೆ" ಎಂದು ನಗುಮುಖದಿಂದ ಸ್ವಾಗತಿಸಿದರು.

"ಎಬ್ಬಿಸಬೇಡಮ್ಮ. ನಿಧಾನವಾಗಿ ಏಳಲಿ. ನನಗೆ ಆತುರವಿಲ್ಲ. ನಾನೂ ಮುಖ ತೊಳೆದುಕೊಂಡು ಬರ್ತೀನಿ" ಎನ್ನುತ್ತಾ ಸುಂದರರಾಯರು ಒಳಗೆ ಹೋದರು.

ಅವರು ಮುಖ ತೊಳೆದು ಈಚೆಗೆ ಬರುವಷ್ಟರಲ್ಲಿ ವೇದಮ್ಮ ಕಾಫಿ ಒಲೆ ಹಚ್ಚಿಸಿ ನೀರಿಟ್ಟು ಬೀಸುತ್ತಿದ್ದರು. ಸುಂದರರಾಯರು ಅಲ್ಲೇ ಹಾಸಿದ ಚಾಪೆಯ ಮೇಲೆ ಕುಳಿತರು.

ಹೊಸ ಧ್ವನಿ ಕೇಳಿ ರಂಗಣ್ಣನವರಿಗೆ ಎಚ್ಚರವಾಯಿತು. ಎದ್ದು ಹೊರಗೆ ಬಂದು 'ನೀನೇ! ಯಾವಾಗ ಬಂದೆ?' ಎಂದರು.

"ಇದೇ ತಾನೆ ಬಂದೆ ನಿನ್ನೆ ನಿಮ್ಮ ಕೆಲಸಕ್ಕಾಗಿಯೇ ಮೈಸೂರಿಗೆ ಹೋಗಿದ್ದೆ. ವೇದಮ್ಮನ ಕೈಯಿನ ಕಾಫಿ ಕುಡಿದು ಬಹಳ ದಿನವಾಯಿತು. ಆದುದರಿಂದ ರೈಲಿನಿಂದಿಳಿದವನು ನೇರವಾಗಿ ಇಲ್ಲಿಗೇ ಬಂದೆ"

ಸುಂದರರಾಯರ ಹೊಗಳಿಕೆ ಕೇಳಿ ವೇದಮ್ಮ ನಾಚಿದರು.

"ಕುಮಾರ ಕಂಠೀರವನಿಗೆ ಬೆಳಗಾಗುವುದು ಯಾವಾಗ?"

"ಇನ್ನೇನು ಏಳುವ ಹೊತ್ತು"

"ಇಂಗ್ಲೆಂಡಿಗೆ ಹೊರಡುವ ತಾರೀಖು ನಿಶ್ಚಯವಾಯಿತೆ ?"

"ಇನ್ನೂ ಇಲ್ಲ"

ವೇದಮ್ಮ ಎರಡು ಬಟ್ಟಲು ಕಾಫಿ ತಂದು ಇಬ್ಬರ ಮುಂದೆ ಇರಿಸಿದರು.

"ಹೋದ ಕೆಲಸವೇನಾಯಿತು ಸುಂದರೂ ?" ವೇದಮ್ಮ ಅವರ ಮಾತು ಕೇಳಲು ಅಲ್ಲೇ ಗೋಡೆಯೊರಗಿ ನಿಂತರು.

"ಹುಡುಗೀನೇನೋ ನೋಡಿ ಬಂದೆ"

"ಹೇಗಿದಾಳೆ" ವೇದಮ್ಮ ಆತುರದಿಂದ ಕೇಳಿದರು.

"ಸಾಕ್ಷಾತ್ ಲಕ್ಷ್ಮಿ. ವೆಂಕಟಸುಬ್ಬಯ್ಯ ತನ್ನ ತಂಗಿ ಮಗಳನ್ನು ಹೊಗಳಿದಾಗ ಅಭಿಮಾನದಿಂದ ಹಾಗೆ ಹೇಳ್ತಾನೆ ಎಂದುಕೊಂಡಿದ್ದೆ. ಆದರೆ ನಾನೇ ಕಣ್ಣಾರೆ ನೋಡಿದ ಮೇಲೆ ಅವನದು ಬರೀ ಒಣ ಅಭಿಮಾನವಲ್ಲ ಎನಿಸಿತು."

"ಸುಮಾರಾಗಿ ಯಾರ ಹಾಗಿದಾಳೆ ಹೇಳಿ? ರಾಮರಾಯರ ಕಿರೀ ಸೊಸೆ ಮಾಲತಿಯಷ್ಟರಮಟ್ಟಿಗಿದಾಳೆಯೇ ?"

ರಾಮರಾಯರ ಕಿರಿಯ ಸೊಸೆ ಬಹಳ ಚೆಲುವೆಯೆಂಬುದು ವೇದಮ್ಮನ ಅಭಿಪ್ರಾಯವಾಗಿತ್ತು.

"ಅವಳಿಗಿಂತಲೂ ಮೇಲು ಎಂದು ಹೇಳಬಹುದು. ರಾಮರಾಯರ ಸೊಸೆಯ ಬಣ್ಣ ಬರೀ ಬಿಳುಪು—ಗೋಡೆಯ ಸುಣ್ಣದ ಹಾಗೆ. ಆದರೆ ಈ ಹುಡುಗಿಯ ಬಣ್ಣ ಬಿಳುಪಿಗೆ ಗುಲಾಬಿ ಬೆರಸಿದಂತಿದೆ. ಬರೀ ಬಣ್ಣ ಮಾತ್ರ ವಲ್ಲ. ಕಣ್ಣು ಮೂಗು ಎಲ್ಲಾ ಹೇಳಿ ಮಾಡಿಸಿದ ಹಾಗಿದೆ. ಹುಡುಗಿ ಬಹಳ ಲಕ್ಷಣವಾಗಿದಾಳೆ"

"ಯಾರಪ್ಪಾ ಅಷ್ಟೊಂದು ಲಕ್ಷಣವಾಗಿರೋದು ?" ಎಂದು ಚೇಷ್ಟೆ ಯಿಂದ ಕೇಳುತ್ತಾ ಆನಂದ ಮಹಡಿಯಿಂದಿಳಿದು ಕೆಳಗೆ ಬಂದ.

ಅವನ ಕಣ್ಣುಗಳಲ್ಲಿನ್ನೂ ನಿದ್ದೆಯ ಮೋಡಿಯಿತ್ತು. ಕ್ರಾಪು ಕೆದರಿ ಅವನ ಹಣೆಯನ್ನು ಮುಚ್ಚಿತ್ತು. ಆನಂದ ಎತ್ತರವಾದ ಆಳು, ಆದರೆ ಆ ಎತ್ತರಕ್ಕೆ ಅವನ ಗಾತ್ರ ಸಾಲದು ಎನ್ನಿಸುವಂತಿತ್ತು. ಸಾಧಾರಣವಾದ ಬಣ್ಣ, ತುಂಟತನ, ಪ್ರೀತಿ, ನಿಷ್ಕಾಪಟ್ಯದ ಕಣ್ಣುಗಳು, ತೆಳುವಾದ ತುಟಿಯ ಮೇಲೆ ಚಿಗುರು ಮೀಸೆ, ಮುಖಕ್ಕೆ ದೊಡ್ಡದಾದ ಮೂಗು—ಒಟ್ಟಿ ನಲ್ಲಿ ಆನಂದ ಮನಸೆಳೆಯುವ ಯುವಕನಲ್ಲದಿದ್ದರೂ ಲಕ್ಷಣವಾಗಿದ್ದ.

ಸುಂದರರಾಯರು ಅವನ ಕಡೆ ತಿರುಗಿ 'ಯಾರೇನು? ನಿನ್ನ ಹೆಂಡತಿ ವಿಚಾರ ಹೇಳುತ್ತಾ ಇದೀನಿ. ನಿನಗೆ ತಕ್ಕ ಹೆಂಡತಿ ಅವಳು' ಎಂದರು. ಆನಂದ ಕೈಯ್ಯಲ್ಲಿ ಹಿಡಿದಿದ್ದ ಬ್ರಷ್ಷಿನೊಡನೆ ಆಟವಾಡುತ್ತಾ 'ನನಗೇನೋ ಈಗಲೇ ಮದುವೆಯಾಗಲು ಇಷ್ಟವಿಲ್ಲ ಸುಂದರರಾಯರೇ, ಇಂಗ್ಲೆಂಡಿನಿಂದ ಬಂದಮೇಲೆ ಮದುವೆಯಾಗ್ತೀನಿ ಎಂದರೆ ಅಮ್ಮ ಕೇಳೋದಿಲ್ಲ. ಅವಳಿಗೆ ನನಗೆ ಮದುವೆ ಮಾಡದೇ ಅಲ್ಲಿಗೆ ಕಳಿಸಲು ದಿಗಿಲು. ಅಲ್ಲಿಂದಲೇ ಬಿಳೀ ಹುಡುಗೀನ ಕರೆದುಕೊಂಡು ಬಂದುಬಿಡುತ್ತೀನೇನೋ ಅಂತ ಹೆದರಿಕೆ. ಅಲ್ಲವೇನಮ್ಮ ?'

ಆನಂದ ತಾಯಿಯ ಕಡೆ ತಿರುಗಿ ನಕ್ಕ.

"ಸುಮ್ಮನಿರೋ. ಮದುವೆ ಅಂದರೆ ಯಾಕೆ ಹಾಗೆ ಆಡ್ತೀಯ ಈಗ ಹೀಗೆ ಆಡುವವರೇ ಮುಂದೆ ಸದಾ ಹೆಂಡತಿಯ ಸೆರಗು ಹಿಡಿದು ಓಡಾಡುತ್ತಾರೆ"

"ನಿಮ್ಮಗಳ ಕೈಲಿ ನಾನು ಸೂತ್ರದ ಬೊಂಬೆಯಾಗಿದೀನಿ. ಏನಾದರೂ ಮಾಡಿಕೊಳ್ಳಿ. ಸುಂದರರಾಯರೇ, ಹುಡುಗಿ ಅಮ್ಮನ ಮಟ್ಟಿಗಿದಾಳೆಯೇ?"

ಆನಂದ ಅಭಿಮಾನದಿಂದ ತಾಯಿಯ ಕಡೆ ನೋಡಿದ.

ವೇದಮ್ಮ ಅರುಂಧತಿಯಂತಹ ಮುತ್ತೈದೆ. ಅರಿಸಿನದ ಕೆನ್ನೆಯವೇ ಒಂದು ಬಗೆಯ ಲಾವಣ್ಯವಾದರೆ, ಕೆಂಪು ಬಳೆಗಳು ತುಂಬಿದ ಕೈ ಮತ್ತೂ ಸೊಗಸು. ಕಾಡಿಗೆ ಬಳಿದ ಕಣ್ಣು ಒಮ್ಮೆ ಸೆರೆಹಿಡಿದರೆ, ಕರಿಮಣಿಸರ, ಚಿನ್ನದ ಸರದಿಂದ ತುಂಬಿದ ಕೊರಳು ಮತ್ತೊಮ್ಮೆ ನೋಡಿದವರ ಮನಸ್ಸನ್ನು ಸೆರೆಹಿಡಿಯುತ್ತಿತ್ತು.

ಮಗನ ಪ್ರಶ್ನೆಗೆ ತಾಯಿ "ನಿನಗೇಕೋ ಅದೆಲ್ಲಾ. ಈಗ ತಾನೇ ಮದುವೆ ಬೇಡ ಎಂದೆ. ಅವಳು ಯಾರ ಹಾಗಿದ್ದರೆ ನಿನಗೇನಂತೆ" ಎಂದರು.

"ಅವೇನೋ ನನಗೆ ಅದೆಲ್ಲಾ ತಿಳಿಯುವುದಿಲ್ಲ. ಭಾನುವಾರ ನಿಮ್ಮನ್ನೇ ಕಳಿಸ್ತೀನಿ ಅಂತ ಹೇಳಿ ಬಂದಿದೀನಿ. ಆಗ ನೀನೇ ಹೋಗಿ ನೋಡು" ಸುಂದರರಾಯರು ಉತ್ತರ ಕೊಟ್ಟರು.

"ಸರಿ. ಹಾಗಾದರೆ ಯಾವತ್ತು ಹೋಗೋಣ" ರಂಗಣ್ಣ ಹೆಂಡತಿಯ ಕಡೆ ತಿರುಗಿದರು.

"ಸುಂದರರಾಯರೇ ಹೇಳಿ ಬಂದಿದಾರಲ್ಲಾ ಭಾನುವಾರ ಕಳಿಸ್ತೀನಿ ಅಂತ. ಭಾನುವಾರ ಆನಂದನಿಗೂ ರಜವಿರುತ್ತದೆ. ಆದುದರಿಂದ ಅವತ್ತೇ ಹೋಗಿ ಬಂದುಬಿಡೋಣ. ಏನೋ ಮಗು?" ಎಂದು ವೇದಮ್ಮ ಆನಂದನನ್ನು ನೋಡಿದರು.

"ನೀನು ಹೇಗೆ ಹೇಳಿದರೆ ಹಾಗೆ" ಆನಂದ ಉತ್ತರಿಸಿದ.

ರಂಗಣ್ಣ "ಭಾನುವಾರ ಹೋಗಿ ನಾವೂ ರಾತ್ರಿಗಾಡಿಗೇ ಬರುತ್ತೇವೆ. ಒಂದು ದಿನ ಈ ಮನೆಯ ಕಾವಲಿಗೆ ನೀನಿರಬೇಕಪ್ಪಾ" ಎಂದರು.

"ಅಗತ್ಯವಾಗಿ ಆಗಲಿ. ಹಾಗಾದರೆ ಭಾನುವಾರ ತಾಯಿ, ತಂದೆ, ಮಗ ಬರ್ತಾರೇಂತ ವೆಂಕಟಸುಬ್ಬಯ್ಯನವರಿಗೆ ಕಾಗದ ಹಾಕಲೇನು?"

"ಹಾಗೇ ಮಾಡು."

"ಅಣ್ಣ, ನನಗೇನೋ ಇಂಗ್ಲೆಂಡಿನಿಂದ ಬಂದ ಮೇಲೆ ಮದುವೆ

ಯಾಗೋಣ ಅಂತ........" ಆನಂದ ಇನ್ನೂ ರಾಗ ಎಳೆಯುತ್ತಿರುವಾಗಲೇ,

"ಆ ಮಾತು ಬೇಡ. ಈಗ ಎಲ್ಲ ನಿಶ್ಚಯವಾಗಿ ಹೋಗಿದೆ" ಎಂದು ರಂಗಣ್ಣನವರು ಆನಂದನ ಮಾತನ್ನು ತಡೆದು ನಿಲ್ಲಿಸಿದರು.

೪

ಸುಂದರರಾಯರು ಬರೆದ ಕಾಗದ ವೆಂಕಟಸುಬ್ಬಯ್ಯನವರಿಗೆ ಶನಿವಾರವೇ ತಲುಪಿತು. ಕಾಗದ ಒಡೆದು ಓದಿ ಅವರು ಶುಭಸಮಾಚಾರ ವನ್ನು ತಂಗಿಗೆ ತಿಳಿಸಲು ಅಡಿಗೆ ಮನೆಗೆ ಹೋದರು.

"ಸರೋಜ, ಅವರು ನಾಳೆ ಬೆಳಿಗ್ಗೆ ಬರ್ತಾರಂತೆ. ಭಾರಿ ಔತನದ ಅಡಿಗೆ ಮಾಡಿಸು. ಹಾಲುಕೀರಿನ ರುಚಿಗೆ ಸೋತು ಹುಡುಗ ಸೊರಗಬೇಕು. ಆಮೇಲೆ ಹುಡುಗೀನ ತೋರಿಸಿದರೆ ಪೂರ್ತಿ ಸುಸ್ತು. ಏನು ಹೇಳ್ತೀಯಾ ?"

"ಆಗಲಣ್ಣ" ಎಂದರು ಸರೋಜಮ್ಮ.

ಭಾನುವಾರದ ಔತನಕ್ಕೆ ಬೇಕಾದ ಸಮಸ್ತ ಸಾಮಾನುಗಳನ್ನು ಹೊಂದಿಸಿ ರಾತ್ರಿ ಒಂಭತ್ತು ಗಂಟೆಗೆ ಸರೋಜಮ್ಮ ಚಾಪೆ ಜೊಂಬು ಹಿಡಿದು ರೂಮಿನಲ್ಲಿ ಕುಳಿತು ಬಿಟ್ಟರು. 'ನಾಳೆ ಏನುಗತಿ' ಎಂದು ಅವರ ಮನಸ್ಸು ಒದ್ದಾಡಿತು. ರೂಮಿನಲ್ಲಿ ಕುಳಿತು ಅವರು ಮಗಳನ್ನು ಕೂಗಿದರು.

"ಭಾರತೀ, ಸ್ವಲ್ಪ ಬಾ ಇಲ್ಲಿ "

"ಏನಮ್ಮ ?"

"ವಾಣಿಗೆ ಹೇಳು. ರಾಜಾರಾಮನ್ನ ಜೊತೆ ಮಾಡಿಕೊಂಡು ನರಸಮ್ಮನ ಮನೆಗೆ ಹೋಗಿ 'ಭಾರತೀನ ನೋಡೋಕೆ ಯಾರೋ ಬರ್ತಾರಂತೆ ಅಮ್ಮ ಒಳಗಿಲ್ಲವಂತೆ. ನಾಳೆ ಒಂದು ದಿನದ ಮಟ್ಟಿಗೆ ಬಂದು ಅಡಿಗೆ ಮಾಡಿ ಹೋಗಬೇಕಂತೆ' ಅಂತ ಹೇಳಿಬರಲಿ."

ಭಾರತಿ ಮುಖ ತಿರುಗಿಸಿ 'ಥೂ, ಭಾರತಿ ನೋಡೋಕೆ ಯಾರೋ ಬರ್ತಾರೆ ಅಂತ ಈಗಿನಿಂದಲೂ ಊರಲ್ಲೆಲ್ಲಾ ಟಾಂ ಟಾಂ ಮಾಡೋದು ನನಗಿಷ್ಟವಿಲ್ಲ' ಎಂದಳು.

"ಊರಲ್ಲೆಲ್ಲಾ ಎಲ್ಲಿ ಟಾಂ ಟಾಂ ಮಾಡ್ತೀವೆಯೇ ? ನಮಗೆ ಬೇರೆ ಕೆಲಸವಿಲ್ಲವೇ ?"

"ಇನ್ನೇನು? ನರಸಮ್ಮನವರಿಗೆ ಸುದ್ದಿ ತಿಳಿದರೆ ಪೇಪರಿನಲ್ಲಿ ಹಾಕಿಸ ಬೇಕಾಗೇ ಇಲ್ಲ."

"ನೀನು ವಾಣೀಗೆ ಹೇಳ್ತೀಯೋ? ಇಲ್ಲಾ ನಾನೇ ಕರೆದು ಹೇಳಲೋ?"

ಭಾರತಿ ಗೊಣಗುತ್ತಾ ವಾಣಿಯ ಬಳಿ ಬಂದು 'ಅಮ್ಮ ಕರೀತಾಳೆ' ಎಂದಳು.

ತಾಯಿಯ ಸಂದೇಶವನ್ನು ಹೊತ್ತು ವಾಣಿ, ರಾಜಾರಾಮು ನರಸಮ್ಮನ ಮನೆಯಿಂದ ಹಿಂದಿರುಗಿ ಬಂದು 'ನರಸಮ್ಮನವರು ನಾಳೆ ಬೆಳಿಗ್ಗೆ ಏಳು ಗಂಟೇಗೆ ಬರ್ತೀನಿ ಅಂತ ಹೇಳಿದರಮ್ಮ' ಎಂದು ಹೇಳಿದ ಮೇಲೆ ಸರೋಜಮ್ಮನಿಗೆ ಸ್ವಲ್ಪ ಸಮಾಧಾನವಾಯಿತು.

ಬೆಳಿಗ್ಗೆ ಏಳು ಗಂಟೆಗೆ ನರಸಮ್ಮನವರು ಬರುವುದರೊಳಗೆ ಸರೋಜಮ್ಮ ಎರಡು ಬಾರಿ ರಾಜಾರಾಮುನ ಕೈಲಿ ಅವರ ಮನೆಗೆ ಹೇಳಿಕಳುಹಿಸಿದ್ದರು. ನರಸಮ್ಮನವರು ಬಂದು ಮಡಿಯುಟ್ಟು ಅಡಿಗೆಯ ಸಿದ್ಧತೆಗೆ ತೊಡಗಿದರು.

ಹತ್ತು ಗಂಟೆಯಾಯಿತು. ಸರೋಜಮ್ಮ ಮಗಳನ್ನು ಕೂಗಿ 'ಭಾರತಿ, ಲಕ್ಷಣವಾಗಿ ತಲೆ ಬಾಚಿಕೊಂಡು ಹೂವು ಮುಡಿದುಕೋ. ಬಣ್ಣವಾಗಿರುವ ಯಾವುದಾದರೂ ರೇಷ್ಮೆ ಸೀರೆ ಉಟ್ಟುಕೋ' ಎಂದರು.

"ನಾನೇನು ಅಲಂಕಾರ ಮಾಡಿಕೊಂಡು ಅವರನ್ನು ಒಲಿಸಬೇಕೆ? ನನ್ನನ್ನೇನೂ ವಸ್ತುಪ್ರದರ್ಶನದಲ್ಲಿಟ್ಟಿಲ್ಲ. ನಾನಿರುವ ಹಾಗೇ ಇರ್ತೀನಿ. ಬೇಕಾದರೆ ಮಾಡಿಕೊಳ್ಳಲಿ, ಸಾಕಾದರೆ ಬಿಡಲಿ" ಎಂದು ಭಾರತಿ ತಾಯಿಯ ಮೇಲೆ ಹಾರಾಡಿದಳು.

"ಇವೊಂದು ದಿನ ನಾನು ಹೇಳಿದ ಹಾಗೆ ಕೇಳಿಬಿಡಮ್ಮ. ಆಮೇಲೆ ನಿನ್ನ ತಂಟೆಗೆ ನಾನು ಬರುವುದಿಲ್ಲ. ನಾನು ಒಳಗಿದ್ದಿದ್ದರೆ ನಿನಗೆ ಎಲ್ಲಾ ಸರಿಯಾಗಿ ಅಲಂಕಾರ ಮಾಡುತ್ತಿದ್ದೆ" ಸರೋಜಮ್ಮ ಆತಂಕದಿಂದ ನುಡಿದರು.

"ಸದ್ಯ ನೀನು ಹೊರಗಿರುವುದೇ ಕ್ಷೇಮವಾಯಿತು. ಇಲ್ಲದಿದ್ದರೆ ನನಗೆ ನಾಗರು, ಕುಚ್ಚಿನ ಜಡೆಹಾಕಿ 'ಸರಸ್ವತಿ ವೇಷ' ಹಾಕಿಬಿಡುತ್ತಿದ್ದೆ ಅಂತ ತೋರುತ್ತದೆ."

"ಈಗ ಹೇಗಾದರೂ ಇರಲಿ. ನನ್ನ ಮಾತು ಮೀರಬೇಡ."

ಭಾರತಿ ಗೊಣಗುತ್ತಾ ರೂಮಿಗೆ ಬಂದಾಗ ವಾಣಿ ಅಕ್ಕನ ನೆರಳಿನಂತೆ ಹಿಂಬಾಲಿಸಿ ಒಳಗೆ ಬಂದಳು. ಭಾರತಿ ಜಡೆ ಬಿಚ್ಚುತ್ತಿದ್ದಂತೆ ವಾಣಿ,

"ಅಕ್ಕ, ನಿನಗೆ ಮೆರೂನ್ ಬಣ್ಣದ ಸೀರೆ ತುಂಬ ಚೆನ್ನಾಗಿ ಒಪ್ಪುತ್ತದೆ. ಇವತ್ತು ನೀನು ಅದನ್ನೇ ಉಟ್ಟುಕೋ" ಎಂದಳು.

"ಊಹೂಂ. ನಾನು ಯಾವುದೂ ಉಟ್ಟುಕೊಳ್ಳುವುದಿಲ್ಲ."

"ಮತ್ತೆ, ಇದೇ ಸೀರೇಲಿರುತ್ತೀಯಾ ?"

"ಹೂಂ. ಯಾಕಾಗಬಾರದು ?"

"ಆಮೇಲೇನಿಲ್ಲ. ಅಮ್ಮ ನಿನ್ನ ಹೊಡದೇ ಬಿಡುತ್ತಾಳೆ. ನನ್ನ ಮಾತು ಕೇಳು. ಮೆರೂನ್ ಬಣ್ಣದ ಸೀರೆ, ಅದೇ ಬಣ್ಣದ ಬ್ಲೌಸು ಹಾಕಿಕೋ. ಸಡಿಲವಾಗಿ ಜಡೆ ಹೆಣೆದುಕೊಂಡು, ಹಣೆಗೆ ಸಣ್ಣಗೆ, ದುಂಡಗೆ ಕುಂಕುಮ ಇಟ್ಟುಕೋ. ನಿನ್ನ ಆ ನಕ್ಷತ್ರ, ತಿಲಕ ಯಾವುದೂ ಬೇಡಮ್ಮ. ಕೈಗೆ ಕೆಂಪು ಬಳೆಗಳನ್ನೇ ಹಾಕಿಕೊಂಡು, ತಲೆಗೆ ......."

"ಅಲ್ಲಾ, ನನ್ನ ನೋಡೋಕೆ ಬಂದಾಗಲೇ ನೀನು ಹೀಗೆ ಮಾಡಿಕೋ ಅಂತ ಹೇಳಬೇಕಾದರೆ ಇನ್ನು ನಿನ್ನ ಯಾರಾದರೂ ನೋಡೋಕೆ ಬಂದ ದಿವಸ ಹೇಗೆ ಅಲಂಕಾರ ಮಾಡಿಕೊಳ್ಳುತ್ತೀಯೋ ನಾನು ಬೇರೆ ಕಾಣೆ."

"ಹೇಗೇನು? ಬಹಳ ಷೋಕಾಗಿ ಮಾಡಿಕೊಂಡು ನನ್ನ ನೋಡೋಕೆ ಬಂದವನು ನನ್ನಲಂಕಾರ, ನನ್ರೂಪ ನೋಡಿ, ಬೆರಗಾಗಿ ತೆರೆದ ಕಣ್ಣು, ಬಿಟ್ಟ ಬಾಯಿನಿಂದ ನನ್ರೂಪ ನುಂಗಿ ಒಂದೇ ಮಾತಿನಲ್ಲಿ ಹಿಂದೆ ಮುಂದೆ ಯೋಚಿಸದೆ 'ನಾನು ಮದುವೆ ಆಗುವುದಾದರೆ ಈ ಹುಡುಗೀನ್ನೇ ಮಾಡ್ಕೋತೀನಿ. ಇಲ್ಲದಿದ್ದರೆ ಸಾಯುವವರೆವಿಗೂ ಬ್ರಹ್ಮಚಾರಿಯಾಗಿರುತ್ತೀನಿ' ಅಂತ ಹಟಹಿಡಿಯಬೇಕು."

"ಸರಿ ಕಣಮ್ಮ. ಆದರೆ ನನಗೆ ಅಲಂಕಾರ ಬೇಡ" ಎನ್ನುತ್ತಿದ್ದರೂ ಭಾರತಿ ತಂಗಿ ಹೇಳಿದಂತೆ ಅಲಂಕರಿಸಿಕೊಳ್ಳತೊಡಗಿದಳು.

ಭಾರತಿ ಕನ್ನಡಿಯ ಮುಂದೆ ಕುಳಿತು ಸಡಿಲವಾಗಿ ಜಡೆ ಹೆಣೆದುಕೊಂಡು, ಹುಬ್ಬಿನ ನಡುವೆ ಸಣ್ಣದಾಗಿ ದುಂಡಾಗಿ ಕುಂಕುಮದ ಬಟ್ಟನ್ನಿಟ್ಟಳು. ವಾಣಿ ತಂದುಕೊಟ್ಟ ಸೀರೆ, ರವಿಕೆಯನ್ನು ಮರುಮಾತಿಲ್ಲದೆ ಧರಿಸಿ, ಸೆರಗನ್ನು ನಾಜೂಕಾಗಿ ಹೊದ್ದು ಸೊಂಟಕ್ಕೆ ಸಿಕ್ಕಿಸಿದಳು.

"ತಗೊಳ್ಳೇ, ಹೂವು ಮುಡಿದುಕೋ" ಎಂದು ವಾಣಿ ಹೂವಿನ ಕುಚ್ಚು ಅಕ್ಕನ ಕೈಗೆ ಕೊಡುತ್ತಿರುವಾಗಲೇ ಹೊರಗೆ ಗಾಡಿಯ ಸದ್ದು ಕೇಳಿಸಿತು.

"ಬಂದರು ಅಂತ ತೋರುತ್ತದೆ" ಎಂದು ವಾಣಿ ಸಂಭ್ರಮದಿಂದ ಹೊರಗೆ ಓಡಿಹೋದಳು. ಭಾರತಿ ಹೂವನ್ನು ಗಡಿಬಿಡಿಯಿಂದ ತಲೆಗೆ ಸಿಕ್ಕಿಸಿ ಅಡಿಗೆ ಮನೆಯೊಳಗೆ ಧಾವಿಸಿದಳು. ಸರೋಜಮ್ಮ ಹಾಲಿನ ಒಂದು ಮೂಲೆಯಲ್ಲಿ ನಿಂತರು.

ಹಸಿರು ಬಣ್ಣದ ಧರ್ಮಾವರದ ಸೀರೆಯುಟ್ಟು, ಕೈಕಾಲು ಕೆನ್ನೆಗಳಿಗೆ

ಬಣ್ಣಗೆ ಅರಿಶಿನ ಬಳಿದುಕೊಂಡು, ಹಣೆಗೆ ಅಡ್ಡ ಕುಂಕುಮವಿಟ್ಟು ನಗೆಮೊಗ ದಿಂದ ವೇದಮ್ಮ ಒಳಗೆ ಬಂದರು. ಸರೋಜಮ್ಮ ಅವರನ್ನು ನೋಡಿ 'ಮುತ್ತೈದೆ ಎಷ್ಟು ಲಕ್ಷಣವಾಗಿದಾರೆ!' ಎಂದುಕೊಂಡರು.

"ಬನ್ನಿ"

"ಓಹೋ ಯಾವತ್ತು?" ವೇದಮ್ಮ ಸ್ನೇಹದಿಂದ ಕೇಳಿದರು. ಸರೋಜಮ್ಮ ಸಂಕೋಚದಿಂದ ತಲೆ ತಗ್ಗಿಸಿ 'ನೀವು ಅಪರೂಪಕ್ಕೆ ಬಂದಿರು ವಾಗ ಈ ಹಾಳು ಕಾಟ........' ಎಂದರು.

"ಏನು ಮಾಡುವುದು ಹೇಳಿ? ಹೆಣ್ಣಾಗಿ ಹುಟ್ಟಿದ ಮೇಲೆ ಎಲ್ಲ ಅನು ಭವಿಸಬೇಕು. ಬಚ್ಚಲು ಮನೆ ಎಲ್ಲಿದೆ?"

"ವಾಣೀ, ವಾಣೀ........"

"ಏನಮ್ಮ?"

"ಇವರನ್ನ ಕರೆದುಕೊಂಡು ಹೋಗು"

ವೇದಮ್ಮ ವಾಣಿಯ ಮುಖದಲ್ಲಿ ಅವಳಕ್ಕನ ಮುಖವನ್ನು ಚಿತ್ರಿಸುತ್ತಾ ಅವಳನ್ನು ಹಿಂಬಾಲಿಸಿದರು.

ರೂಮಿನಲ್ಲಿ ವೆಂಕಟಸುಬ್ಬಯ್ಯನವರು ಭಾವೀ ಬೀಗರನ್ನು ಉಪಚರಿ ಸುತ್ತಿದ್ದರು.

"ತಗೊಳ್ಳಯ್ಯ, ನೀನು ಮನೆ ಅಳಿಯ. ನಿನಗೆ ಇನ್ನೊಂದು ಬಟ್ಟಲು ಹೆಚ್ಚಾಗಿ ಕಾಫಿ ಕೊಡುತ್ತೇನೆ."

"ನನಗೆ ಕಾಫಿ ಅಭ್ಯಾಸವೇ ಇಲ್ಲ" ಎನ್ನುತ್ತಾ ಆನಂದ ಬಟ್ಟಲನ್ನು ಸರಿಸಿದ. ಅವನಿಗೆ ಅವರ ಉಪಚಾರದಲ್ಲಿ ಆಸಕ್ತಿಯಿರಲಿಲ್ಲ. ಆದುದರಿಂದ ಅವರ ಮಾತುಗಳನ್ನು ನಿರಾಸಕ್ತಿಯಿಂದ ಆಲಿಸುತ್ತ ಕುಳಿತ.

ವೇದಮ್ಮ ಹಾಲಿನಲ್ಲಿ ಹಾಸಿದ್ದ ಚಾಪೆಯ ಮೇಲೆ ಕುಳಿತು ತಾವು ಬೆಂಗಳೂರಿನಿಂದ ತಂದಿದ್ದ ಹಣ್ಣು, ತರಕಾರಿಯ ಬುಟ್ಟಿಯನ್ನು ವಾಣಿಯ ಮುಂದಿಟ್ಟು 'ಒಳಗೆ ತೆಗೆದಿಡಮ್ಮ' ಎಂದರು.

"ಇವೆಲ್ಲಾ ಯಾಕೆ ತಂದಿರಿ?" ಸರೋಜಮ್ಮ ಕೇಳಿದರು.

"ಮಕ್ಕಳಿರುವ ಮನೆಗೆ ಬರಿಗೈಲಿ ಹೋಗುವುದೇ?"

ಹಾಲಿನಲ್ಲೇ ಎಲ್ಲರಿಗೂ ಬಾಳೆ ಎಲೆಗಳನ್ನು ಹಾಕಿ, ಎಲೆಯ ಮುಂದೆ ರಂಗವಲ್ಲಿ ಇಡಲಾಯಿತು. ಭಾರತಿ, ಸರೋಜಮ್ಮನ ಹೊರತು ಎಲ್ಲರೂ ಊಟಕ್ಕೆ ಕುಳಿತರು. ವಾಣಿ ಅಕ್ಕನನ್ನೂ ಜೊತೆಯಲ್ಲಿ ಊಟಮಾಡಲು ಬಲವಂತಪಡಿಸಿದಳು. ಆದರೆ ಭಾರತಿ ಖಂಡಿತವಾದ ದನಿಯಲ್ಲಿ 'ಊಹೂಂ

ಎಂದು ಬಿಟ್ಟಳು.

ಎಲ್ಲರೂ ವಿನೋದವಾಗಿ ಮಾತನಾಡುತ್ತಾ ನಗುತ್ತಾ ಊಟಮಾಡು ತ್ತಿದ್ದರೆ ಆನಂದ ಮಾತ್ರ ಮೌನವಾಗಿ ತಲೆ ತಗ್ಗಿಸಿ ಊಟ ಸಾಗಿಸುತ್ತಿದ್ದ. ವೆಂಕಟಸುಬ್ಬಯ್ಯನವರು ಚೇಷ್ಟೆ ಮಾಡುತ್ತಾ

"ಏನಯ್ಯ ಬಹಳ ಮೌನವಾಗಿದೀಯ? ಹೆಂಡತೀನ ನೋಡುವ ಯೋಚನೆಯೇನು" ಎಂದರು. ಎಲ್ಲರೂ ನಕ್ಕರು. ಆನಂದನ ಮುಖದ ಮೇಲೆ ಕೃತಕನಗು ಮೂಡಿ ಮಾಯವಾಯಿತು.

ಎಲ್ಲರ ಊಟ ಮುಗಿಯುತ್ತಿದ್ದಂತೆ ಸರೋಜಮ್ಮ ಅಡಿಗೆ ಮನೆಯ ಲ್ಲಿದ್ದ ಭಾರತಿಯನ್ನು ಕರೆದು ಹೇಳಿದರು.

"ರೂಮಿನಲ್ಲಿ ಎಲೆ ಅಡಿಕೆ, ಸುಣ್ಣ ಎಲ್ಲಾನೂ ಅಣಿಯಾಗಿಟ್ಟು ತಟ್ಟೆ ಇಟ್ಟು ಬಾ"

"ಊಹೂಂ. ನಾನು ಹೋಗಲ್ಲಮ್ಮ. ಹಾಲಿನಲ್ಲಿ ಅವರೆಲ್ಲಾ ಕೂತಿ ದಾರೆ. ನಾನು ಅವರ ಮಧ್ಯೆ ಹೇಗೆ ಹೋಗಲಿ ?"

"ಹೇಗೆ ಹೋಗೋದು ಎಂದರೆ ನಡೆದುಕೊಂಡು ಹೋಗೋದು. ಈಗ ನಾನು ಹೋಗಿ ಸಿದ್ಧಪಡಿಸುವುದಕ್ಕೆ ಆಗುತ್ತದೆಯೇ ?" ಸರೋಜಮ್ಮ ಕೇಳಿದರು.

"ವಾಣಿ ಊಟವಾದ ಮೇಲೆ ಹೋಗಿ ಇಡಲಿ."

"ತುಂಬಾ ತಡವಾಗುತ್ತದೆ. ನೀನೇ ಹೋಗು" ಸರೋಜಮ್ಮ ಮಗ ಳನ್ನು ಗದರಿಸಿದರು. ನಿರ್ವಾಹವಿಲ್ಲದೆ ಭಾರತಿ ಒಪ್ಪಿಕೊಳ್ಳಬೇಕಾಯಿತು. ಭಾರತಿ ಎಲೆ ಅಡಿಕೆಯನ್ನು ತಟ್ಟೆಯಲ್ಲಿ ಸಿದ್ಧಪಡಿಸಿ ತಟ್ಟೆ ಕೈಲಿ ಹಿಡಿದು, ಸಿಂಹಗಳ ನಡುವೆ ಬೆದರಿ ಓಡುವ ಹರಿಣಿಯಂತೆ ವೇಗವಾಗಿ ಹಾಲನ್ನು ದಾಟಿ ರೂಮಿನಲ್ಲಿ ಐಕ್ಯವಾದಳು. ಭಾರತಿ ಹಾಲಿನೊಳಗೆ ಬಂದಾಗ ಆನಂದ ತಲೆ ತಗ್ಗಿಸಿ ಊಟಮಾಡುತ್ತಿದ್ದ. ಮೆರೂನ್ ಸೀರೆಯ ನಿರಿಗಳ ಕೆಳಗೆ ಕೆಂಪಾಗಿ ಬೆವರಿದ್ದ ಪುಟ್ಟ ಹೆಜ್ಜೆಗಳು ಅವನ ಮುಂದೆ ಬಂದಾಗ ಆನಂದ ಅವಳ ಕಾಲುಗಳನ್ನೇ ದಿಟ್ಟಿಸಿ ನೋಡಿದ. ಆ ನಡಿಗೆಯ ಬೆಡಗು ಜನ್ಮಜನ್ಮಾಂತರ ಗಳಿಂದಲೂ ತನಗೆ ಪರಿಚಿತವಿದ್ದಂತೆ ಅವನಿಗೆ ತೋರಿತು. ಕಾಲುಗಳನ್ನು ನೆಲಕ್ಕೆ ತಗುಲಿಯೂ ತಗುಲದಂತೆ ಮಾಡಿ ಓಡುತ್ತಿರುವ ಚಲುವೆಯ ಮುಖ ಕಾಣಲು ಆನಂದನ ಮನಸ್ಸು ತವಕಿಸಿತು. ಹುಡುಗಿಯನ್ನು ನೋಡುವುದ ರಲ್ಲಿ ಅವನಿಗೆ ನಿರಾಸಕ್ತಿಯಿದ್ದರೂ ಕುತೂಹಲವುಂಟಾಯಿತು. ಸುಂದರ ಕಾಲಿನೊಡತಿಯನ್ನು ನೋಡಲು ಆನಂದ ಕತ್ತೆತ್ತಿದ. ಪಕ್ಕದಲ್ಲಿ ಕುಳಿತಿದ್ದ

ವೆಂಕಟಸುಬ್ಬಯ್ಯನವರು ಏನೆಂದುಕೊಳ್ಳುವರೆಂಬ ಯೋಚನೆ ಸಹ ಆವನಿಗೆ ಬರಲಿಲ್ಲ.

ಆವಳ ಹಾರಾಡುತ್ತಿದ್ದ ಸೆರಗು, ಮೊಳಕಾಲಿನವರೆವಿಗೆ ತೂಗಾಡುತ್ತಿದ್ದ ಜಡೆ, ಕೆಂಪು ಬಳೆಗಳು ತುಂಬಿದ ದುಂಡುಗೈ, ಮುಡಿಯ ಮೇಲಿದ್ದ ಮಲ್ಲಿಗೆಯ ಹೊರತು ಬೇರೇನೂ ಕಾಣಲಿಲ್ಲ.

ಕ್ಷಣದಲ್ಲಿ ಅವಳು ಅವನ ಮನಸ್ಸನ್ನು ಚಂಚಲಗೊಳಿಸಿ ಕೊಠಡಿಯಲ್ಲಿ ಮರೆಯಾದಳು. ಮುಖ ತೋರಿಸದ ಚೆಲುವೆ ಅವನ ಹೃದಯದಲ್ಲಿ ಮಧುರ ತರಂಗಗಳನ್ನೆಬ್ಬಿಸಿದಳು.

ಆಮೇಲೆ ಆನಂದನ ಊಟ ಸರಿಯಾಗಿ ಸಾಗಲಿಲ್ಲ. 'ಛೇ, ಅವಳ ಮುಖ ನೋಡಬೇಕಾಗಿತ್ತು' ಎಂದು ತನ್ನನ್ನು ತಾನೇ ಹಳಿದುಕೊಂಡ. ಆದರೇನಂತೆ, ಆಮೇಲಾದಲೂ ನೋಡುವೆನಲ್ಲಾ ಎಂದು ತನ್ನನ್ನೇ ತಾನು ಸಮಾಧಾನಪಡಿಸಿಕೊಂಡ. ಆಗಾಗ್ಗೆ ಕೊಠಡಿಯ ಮುಚ್ಚಿದ ಬಾಗಿಲನ್ನೇ ನೋಡತೊಡಗಿದ.

ಆನಂದನ ಎದುರಿಗೆ ಕುಳಿತಿದ್ದ ವೇದಮ್ಮ ಮಗನ ಮನಸ್ಸಿನ ಓಟದ ದಿಕ್ಕನ್ನು ಗಮನಿಸಿ ನಕ್ಕರು. ಆನಂದನ ಮನಸ್ಸಾಗಲೇ ಅವಳನ್ನು ನೋಡಲು ಕಾತರಗೊಂಡಿದೆಯೆಂಬುದು ಅವರಿಗೆ ತಿಳಿಯಿತು.

ನರಸಮ್ಮನವರು ಹಾಲುಕೀರು ಬಡಿಸಲು ಬಂದವರು

'ಪಾಯಿಸ ಬೇಕೇ' ಎಂದರು.

ಅನ್ಯಮನಸ್ಕನಾಗಿದ್ದ ಆನಂದ 'ಬೇಡ' ಎಂದ.

ನರಸಮ್ಮನವರು ವೆಂಕಟಸುಬ್ಬಯ್ಯನವರಿಗೆ ಬಡಿಸಲು ಬಂದಾಗ ಅವರು ಆನಂದನಿಗೆ

'ಕೀರು ಹಾಕಿಸಿಕೊಳ್ಳಯ್ಯ' ಎಂದು ಉಪಚಾರ ಮಾಡಿದರು.

ಆನಂದ ನಿದ್ರೆಯಿಂದ ಎಚ್ಚೆತ್ತವನಂತೆ 'ಏನು' ಎಂದ.

'ಹಾಲುಕೀರು ಬೇಡವೆ ?'

'ಓ, ನಾನು ಏನೋ ಅಂತಿದ್ದೆ........' ಆನಂದ ಅರ್ಧದಲ್ಲಿಯೇ ಮಾತು ನಿಲ್ಲಿಸಿ ತಾಯಿಯ ಕಡೆ ನೋಡಿದ. ವೇದಮ್ಮನ ಮುಖದಲ್ಲಿ ನಗು ನಲಿಯುತ್ತಿತ್ತು. ತಾಯಿಯ ಮುಖದಲ್ಲಿ ನೆಲಸಿದ್ದ ತೃಪ್ತಿ ಸಮಾಧಾನ ಕಂಡು ಮಗನ ಹೃದಯವೂ ಹಗುರವಾಯಿತು.

ಎಲ್ಲರೂ ಕೈ ತೊಳೆಯಲು ಹೋದ ಸಮಯ ಸಾಧಿಸಿ ಭಾರತಿ ರೂಮಿನಿಂದ ಹೊರಗೆ ಬಂದು ಮತ್ತೆ ಅಡಿಗೆ ಮನೆಯಲ್ಲಿ ಅಡಗಿದಳು. ವೆಂಕಟ

ಸುಬ್ಬಯ್ಯನವರು ಭಾರತಿಯಿದ್ದ ಕಡೆಗೆ ಬಂದು

'ಮಗು, ಎಲೆ ಅಡಿಕೆ ತಂದು ಕೊಡು' ಎಂದರು.

'ರೂಮಿನಲ್ಲಿ ಎಲ್ಲ ಇಟ್ಟಿದೀನಿ ಮಾವ'

'ನೀನೇ ಬಂದು ಎಲ್ಲರಿಗೂ ಕೊಡು'

'ಊಹೂಂ, ಅವರೆದುರಿಗೆ ನಾನು ಬರಲಾರೆ'

ವೆಂಕಟಸುಬ್ಬಯ್ಯ ನಕ್ಕು 'ಹಾಗಾದರೆ ಆನಂದ ನನ್ನ ಮುದ್ದು ಮುಖ ನೋಡಲು ಬಂದಿದ್ದಾನೆ ಅಂತ ತಿಳಿದುಕೊಂಡೆಯೇನು' ಎಂದರು.

'ನನಗೆ ಹೆದರಿಕೆ'

'ಅವನೇನು ಹುಲಿಯಲ್ಲ. ಹಾಗೇ ನೀನೂ ಹುಡುಗನನ್ನು ನೋಡಿದ ಹಾಗಾಗುತ್ತದೆ' ಎನ್ನುತ್ತಾ ಅವರು ಹೊರಗೆ ಹೋದರು. ಭಾರತಿ ಮಾವ ನನ್ನು ಹಿಂಬಾಲಿಸಿದಳು.

ಅವಳ ಹೃದಯ ಪರೀಕ್ಷೆಯ ಹಾಲಿನೊಳಗೆ ಪ್ರವೇಶಿಸುವ ವಿದ್ಯಾರ್ಥಿಯ ಎದೆಯಂತೆ ಹೊಡೆದುಕೊಂಡಿತು.

ರೂಮಿನಲ್ಲಿ ಊದುಕಡ್ಡಿಯ ಸುಗಂಧ ತುಂಬಿತ್ತು. ನಗುವಿನ ತೆರೆಗಳೊಡನೆ ಮಾತಿನ ಹೊಳೆ ಹರಿದು ಹೋಗುತ್ತಿತ್ತು. ಭಾರತಿ ತಲೆ ತಗ್ಗಿಸಿ ಒಳಗೆ ಬಂದೊಡನೆ ಎಲ್ಲರೂ ಮಾತು ನಿಲ್ಲಿಸಿದರು.

'ಬಾ ಮಗು. ಎಲ್ಲರಿಗೂ ಕೊಡು'

ಭಾರತಿ ಮೊದಲು ವೇದಮ್ಮನ ಮುಂದೆ ತಟ್ಟೆ ಹಿಡಿದಳು. ಎಲ್ಲರ ಮುಂದೆ ತಟ್ಟೆ ಹಿಡಿದು, ಆನಂದನ ಬಳಿ ಮಾತ್ರ ಸುಳಿಯದೆ ತಟ್ಟೆ ಕೆಳಗಿ ಟ್ಟಳು. ವೆಂಕಟಸುಬ್ಬಯ್ಯನವರು

'ಎಲ್ಲರಿಗೂ ಕೊಟ್ಟು ಮುಖ್ಯರಾದವರಿಗೆ ಕೊಡಲಿಲ್ಲಾ' ಎಂದರು.

ಭಾರತಿಯ ಮುಖ ಉಟ್ಟಿದ್ದ ಸೀರೆಗಿಂತಲೂ ಕೆಂಪಾಯಿತು. ಅವಳು ಏನುಹೇಳಲೂ ತೋಚದೆ ಸುಮ್ಮನೆ ನಿಂತಳು. ಹೆಣ್ಣಿನ ಕಷ್ಟವರಿತ ವೇದಮ್ಮ

'ಅವನಿಗಿನ್ನೂ ಮದುವೆಯಾಗಿಲ್ಲ. ಬ್ರಹ್ಮಚಾರಿ ಎಲೆ ಅಡಿಕೆ ಹಾಕ ಬಾರದಲ್ಲವೇ' ಎಂದರು.

ವೆಂಕಟಸುಬ್ಬಯ್ಯನವರು

'ಇವತ್ತು ಆಗದಿದ್ದರೆ ಏನಂತೆ? ಒಂದಲ್ಲ ಒಂದು ದಿನ ಸಂಸಾರಿ ಯಾಗುತ್ತಾನೆ. ಅವರಿಗೂ ಕೊಡು ತಾಯಿ' ಎಂದರು. ಭಾರತಿ ಮತ್ತೆ ತಟ್ಟೆ ಹಿಡಿದು ಆನಂದನ ಮುಂದೆ ನಿಂತಳು. ಆನಂದನ ಕಣ್ಣು ಅವಳ ಮುಖದ ಮೇಲೆ ನಾಟಿತ್ತು. ಅವಳ ಕಡೆಯೇ ನೋಡುತ್ತಾ ತಟ್ಟೆಗೆ ಕೈ ಹಾಕಿ ಎಲೆ

ತೆಗೆದುಕೊಂಡ. ಅಡಿಕೆಯೆಲ್ಲಾ ನೆಲದ ಮೇಲೆ ಬಿತ್ತು. ವೇದಮ್ಮ 'ಇಲ್ಲೇ ಕುಳಿತುಕೋ' ಎಂದರು. ಭಾರತಿ ವೇದಮ್ಮನ ಪಕ್ಕದಲ್ಲಿ ಕುಳಿತಳು.

ಸುತ್ತಲೂ ಕುಳಿತಿದ್ದವರು ಮಂಜು ಕರಗಿದಂತೆ ಕರಗಿ ಮಾಯವಾದಂತೆ ಆನಂದನಿಗೆ ಭಾಸವಾಯಿತು. ಆ ಕೊಠಡಿಯ ತುಂಬ ಭಾರತಿಯ ಚೆಲುವು ಅಡಕವಾಗಿದ್ದಂತೆ ತೋರಿತು.

'ಆನಂದ....' ವೇದಮ್ಮ ಕೂಗಿದರು.

'ಏನಮ್ಮ ?'

'ಹುಡುಗೀನ ಈಗಲೇ ಸರಿಯಾಗಿ ನೋಡಿ ಬಿಡು. ಆಮೇಲೆ ನಾನು ಸರಿಯಾಗಿ ನೋಡಲಿಲ್ಲ ಅಂತ ಕೊಂಕು ತೆಗೆಯಬೇಡ. ಭಾರತಿ, ನೀನೂ ಆನಂದನನ್ನ ಸರಿಯಾಗಿ ನೋಡಿ ಬಿಡಮ್ಮ, ನಾಚಿಕೊಳ್ಳಬೇಡ. ನನ್ನ ಮಗ ನಿನ್ನಷ್ಟು ಚೆನ್ನಾಗಿಲ್ಲ........'

ಭಾರತಿ ಸೆರಗಿನ ಮರೆಯಲ್ಲಿ ನಕ್ಕಳು. ಆದರೆ ಆನಂದನನ್ನು ನೋಡುವ ಧೈರ್ಯ ಮಾತ್ರ ಅವಳಿಗೆ ಬರಲಿಲ್ಲ. ಆನಂದ ಮಾತ್ರ ನಿಸ್ಸಂಕೋಚದಿಂದ ಕಣ್ಣುಗಳಿಗೆ ಹಬ್ಬವನ್ನುಂಟುಮಾಡಿಕೊಳ್ಳುತ್ತಿದ್ದ.

'ನಿನ್ನದು ಊಟವಾಯಿತೇ ಮಗು' ವೇದಮ್ಮ ಕೇಳಿದರು.

ಭಾರತಿ ಇಲ್ಲವೆಂದು ತಲೆಯಾಡಿಸಿದಳು.

'ಹೋಗು ಊಟಮಾಡಿಕೊಂಡು ಬಾ.'

ಭಾರತಿ ಪಂಜರದಿಂದ ಹೊರಗೆ ಹಾರುವ ಹಕ್ಕಿಯಂತೆ ಓಡಿಹೋದಳು.

ಭಾರತಿ ಅಡಿಗೆ ಮನೆಯೊಳಗೆ ಬಂದ ಕೂಡಲೇ ವಾಣಿ ಕೇಳಿದಳು.

"ಹುಡುಗನ್ನ ನೋಡಿದೆಯೇನೇ ?"

"ಇಲ್ಲ. ನಾನು ಕತ್ತು ಎತ್ತಲೇ ಇಲ್ಲ."

"ಬರೀ ಸುಳ್ಳು. ನೀನು ನೋಡದೇ ಇರ್ತೀಯ ?"

"ಖಂಡಿತ ಇಲ್ಲ. ನನಗೆ ತುಂಬಾ ನಾಚಿಕೆಯಾಗ್ತಿತ್ತು."

"ಆದರೆ ಅವರು ಮಾತ್ರ ನಿನ್ನ ನುಂಗುವಂತೆ ನೋಡುತ್ತಿದ್ದರು. ಊಟಮಾಡುತ್ತಿದ್ದಾಗ ನೀನು ಬಂದೆಯಲ್ಲಾ ಆಗ ಅವರು ನೆಲ ನೋಡುತ್ತಿದ್ದರು. ನೀನು ಮುಂದೆ ಹೋದ ಮೇಲೆ ಕತ್ತೆತ್ತಿದರು. ಆಮೇಲೆ ಬೇಡಾ ಬೇಡಾ ಅವರ ಗೋಳು. ಅಂತು ಮೊದಲು ಮುಖ ತೋರಿಸದೆ ತುಂಬಾ ಗೋಳಾಡಿಸಿಬಿಟ್ಟೆ. ಅದಕ್ಕೆ ಬಡ್ಡಿ ಸಮೇತ ರೂಮಿನಲ್ಲಿ ನಿನ್ನ ನೋಡಿದರು."

"ನಿನಗೆ ಹೇಗೆ ಗೊತ್ತು ?"

"ನಾನು ಕಿಟಿಕಿಯ ಮರೆಯಿಂದ ನೋಡಿದೆ."

ವೇದಮ್ಮ ಒಳಗೆ ಬಂದುದರಿಂದ ಅಕ್ಕತಂಗಿಯರು ಮಾತು ನಿಲ್ಲಿಸಿದರು. ಊಟಮಾಡಿದ ಮೇಲೆ ರಂಗಣ್ಣನವರು ವೆಂಕಟಸುಬ್ಬಯ್ಯನವರಿಗೆ

"ಇನ್ನೇನು ಸ್ವಾಮಿ, ನಾವು ಬಂದ ಕೆಲಸವಾಯಿತು. ಇನ್ನು ಹೊರಡುತ್ತೇವೆ" ಎಂದರು.

"ರಾತ್ರಿ ರೈಲಿಗೆ ಹೊರಡುವಿರಂತೆ. ಆತುರವೇಕೆ ಸ್ವಾಮಿ? ಈ ಊರಿನಲ್ಲಿ ನಿಮ್ಮ ಗುರುತಿನವರಿದ್ದರೆ ಸಂಜೆ ಹೋಗಿ ಬರೋಣ."

ವೆಂಕಟಸುಬ್ಬಯ್ಯನವರ ಉಪಚಾರಕ್ಕೆ ರಂಗಣ್ಣನವರು ಒಪ್ಪಿಕೊಳ್ಳಲೇಬೇಕಾಯಿತು. ಮಾತುಕತೆ ಮುಗಿದ ಮೇಲೆ ಆನಂದ ಮಲಗಿ ನಿದ್ರಿಸಿದ.

ಅವನಿಗೆ ಎಚ್ಚರವಾದಾಗ ಸಂಜೆ ಐದು ಗಂಟೆಯಾಗಿತ್ತು. ಅವನ ಬಳಿಯಲ್ಲಿಯೇ ಮಲಗಿದ್ದ ರಂಗಣ್ಣನವರು ಅಲ್ಲಿರಲಿಲ್ಲ. ಆನಂದ ಎದ್ದು ಕುಳಿತು, ಮೈಮುರಿದು ಆಕಳಿಸಿ ಬೆರಳುಗಳಿಂದ ಕ್ರಾಪು ಸರಿಮಾಡಿಕೊಂಡು ಸೋಪಿನ ಪೆಟ್ಟಿಗೆ, ಟವಲು ಹಿಡಿದು ಬಚ್ಚಲುಮನೆಯ ಕಡೆ ಹೊರಟ. ಆನಂದ ಹೊರಗೆ ಬಂದುದನ್ನು ನರಸಮ್ಮ ನೋಡಿ,

"ಭಾರತಿ, ಅವರಿಗೆ ಬೋಂಡಾ, ಕಾಫಿ ಕೊಟ್ಟು ಬಾಮ್ಮ" ಎಂದರು.

"ಊಹೂಂ. ನಾನು ಹೋಗೋದಿಲ್ಲ. ಅವರು ರೂಮಿನಲ್ಲೇ ಇದಾರೆ."

"ಇಲ್ಲ. ಅವರು ಮುಖ ತೊಳೆದುಕೊಂಡು ಬರಲು ಹೋಗಿದಾರೆ."

"ನಾನಂತೂ ಹೋಗೋದಿಲ್ಲ."

"ರಾಜಾರಾಮನ್ನ ಕೂಗು."

"ಅವನು ಕ್ರಿಕೆಟ್ ಆಡಲು ಹೋಗಿದಾನೆ?"

"ನಿಮ್ಮ ಮಾವ, ತಂದೆ ಯಾರೂ ಇಲ್ಲವೇ?"

"ಯಾರೂ ಇಲ್ಲ. ಅವರೆಲ್ಲಾ ಅದೆಲ್ಲಿಗೋ ನಾಲ್ಕು ಗಂಟೆಗೇ ಹೋದರು. ಇವರು ಮಲಗಿದ್ದುದರಿಂದ ಎಬ್ಬಿಸುವುದು ಬೇಡ ಅಂತ ಮಾತನಾಡಿಕೊಂಡು ಹೋದರು."

"ವಾಣೀನ ಕೂಗು."

"ವಾಣೀ........ ವಾಣೀ........"

ಮನೆಯಲ್ಲಿ ವಾಣಿಯ ಸದ್ದಿರಲಿಲ್ಲ.

"ನೀನೇ ಇಟ್ಟು ಬಂದು ಬಿಡಮ್ಮ."

ನಿರ್ವಾಹವಿಲ್ಲದೆ ಭಾರತಿ ಕಾಫಿ ತಿಂಡಿ ತೆಗೆದುಕೊಂಡು ಕಳ್ಳಹೆಜ್ಜೆಗಳಿಂದ ರೂಮಿಗೆ ಹೋದಳು. ರೂಮಿನಲ್ಲಿದ್ದ ಮೇಜಿನ ಮೇಲೆ ಬಟ್ಟೆಲಿಡುವಾಗ ಬಾಗಿಲಿನ ಹತ್ತಿರ ಹೆಜ್ಜೆಯ ಸದ್ದಾಯಿತು.

ಆನಂದ ಬಾಗಿಲಿನ ಬಳಿ ನಿಂತು ಟವಲಿನಿಂದ ಮುಖ ಒರೆಸಿಕೊಳ್ಳುತ್ತಿದ್ದ.

ಭಾರತಿಗೆ ಭೂಮಿ ಬಾಯಿಬಿಟ್ಟರೆ ಸಾಕು ಎನಿಸಿತು. ಭಾರತಿಯನ್ನು ರೂಮಿನಲ್ಲಿ ಕಂಡೊಡನೆ ಆನಂದ ಸಂತೋಷದಿಂದ ಕಣ್ಣರಳಿಸಿದ. ಕೆನ್ನೆಯ ಮೇಲೆ ತೂಗಾಡುತ್ತಿದ್ದ ಕೆಂಪುಹರಳಿನ ಜುಮಕಿಗಿಂತಲೂ ಅವಳ ಕೆನ್ನೆ ಕೆಂಪಗಾಗಿತ್ತು. ಭಾರತಿಯನ್ನು ನೋಡಿದಾಗಿನಿಂದಲೂ ತನ್ನ ಮನಸ್ಸಿನಲ್ಲಿ ಮೂಡಿದ್ದ ಸಂದೇಹ ನಿವಾರಿಸಿಕೊಳ್ಳಲು ಇದೇ ತಕ್ಕ ಸಮಯವೆಂದು ಆನಂದನಿಗೆ ತೋರಿತು. ಬಾಗಿಲನ್ನು ಬಿಟ್ಟು ಸರಿದರೆ ಹುಡುಗಿ ಓಡಿಹೋಗಬಹುದೆಂದು ಹೆದರಿ ಆನಂದ ಬಾಗಿಲಿಗೆ ಅಡ್ಡವಾಗಿಯೇ ನಿಂತು ಕೇಳಿದ.

"ಕುಳಿತುಕೊಳ್ಳಬಹುದಲ್ಲಾ... "

ಭಾರತಿ ಉತ್ತರ ಕೊಡಲಿಲ್ಲ.

"ಒಂದೇ ಒಂದು ನಿಮಿಷ. ನಾನೊಂದು ಮಾತು ಕೇಳಬೇಕಾಗಿದೆ..."

ಭಾರತಿ ತಲೆಯೆತ್ತಿ ಅವನ ಕಡೆ ನೋಡಿದಳು. ಎಷ್ಟು ಮುದ್ದಾಗಿದ್ದಾರೆ! ಹಣೆಗೆ ಅಂಟಿಕೊಂಡಿದ್ದ ಒದ್ದೆ ಕೂದಲು, ಮುಗ್ಧ ಕಣ್ಣುಗಳು, ತುಂಟನಗೆ ಲೇಪಿಸಿಕೊಂಡಿದ್ದ ತುಟಿ. ಎತ್ತರ........

ಅವನ ಮುಖ ಒಂದು ಕ್ಷಣ ನೋಡಿ ಭಾರತಿ ತಲೆ ತಗ್ಗಿಸಿದಳು.

ಆನಂದನ ಪ್ರಶ್ನೆ ತೀರ ಅನಿರೀಕ್ಷಿತವಾಗಿತ್ತು.

"ನಾನು ನಿಮಗೆ ಒಪ್ಪಿಗೆಯೇ ?"

"..........................."

"ಹಿರಿಯರ ಒಪ್ಪಿಗೆಗಿಂತಲೂ ನನಗೆ ನಿಮ್ಮ ಒಪ್ಪಿಗೆ ಮುಖ್ಯ. ನಾನು ಸ್ವಲ್ಪ ಕಪ್ಪು. ಅದು ನಿಮಗೆ ಒಪ್ಪಿಲ್ಲದಿದ್ದರೆ ಹಿರಿಯರ ಮಾತಿಗೆ ಕಟ್ಟುಬಿದ್ದು ಮದುವೆಯಾಗಬೇಡಿ. ಈ ವಿಚಾರ ಯೋಚಿಸಲು ನೀವು ನನ್ನಷ್ಟೇ ಸ್ವತಂತ್ರರು. ಆಮೇಲೆ ಕಪ್ಪುಹುಡುಗನ ಕೈಹಿಡಿದೆ ಎಂದು ನೀವು ಕೊರಗುವಂತಾಗಬಾರದು........"

ಅವಳರಿವಿಲ್ಲದೇ ಮಾತು ಹೊರಕ್ಕೆ ಬಂತು.

"ನೀವು ಕಪ್ಪಗೇನಿಲ್ಲ."

3

ಅವನ ಕಣ್ಣುಗಳಲ್ಲಿ ನಗೆಯ ತರಂಗಗಳಿದ್ದವು.

"ನಿಜವಾಗಿಯೂ ?"

"ನಿಜವಾಗಿಯೂ ಹೇಳುತ್ತಿದೇನೆ."

ಭಾರತಿಗೆ ತಾನೇನು ಮಾತನಾಡುತ್ತಿರುವೆನೆಂಬುದರ ಅರಿವಾಯಿತು. ಅಬ್ಬ! ತನಗೆ ಎಷ್ಟೊಂದು ಧೈರ್ಯ ಬಂದುಬಿಟ್ಟದೆ! ಅದೇಕೋ ಆನಂದ ಅಪರಿಚಿತ ಎಂಬ ಭಾವನೆ ಅವಳಿಗೆ ಬರಲಿಲ್ಲ. ಆತ ಜನ್ಮ ಜನ್ಮಾಂತರಗಳ ಗೆಳೆಯ ಎಂಬ ಭಾವನೆ ಅವಳಿಗೆ ಬಂದಿತ್ತು.

"ನೀವು ಕೇಳಿದ ಪ್ರಶ್ನೆಯನ್ನೇ ನಾನು ಕೇಳಲೆ?"

ಆನಂದ ಹುಡುಗಿಯ ದಿಟ್ಟತನಕ್ಕೆ ಬೆರಗಾದ. ಮಾತನಾಡಿಸಿದರೆ ಮಾತನಾಡುವಳೋ ಇಲ್ಲವೋ ಎಂದು ಸಂಶಯಪಡುತ್ತಿದ್ದ ಅವನಿಗೆ ಹುಡುಗಿಯ ಧೈರ್ಯ ಕಂಡು ಆಶ್ಚರ್ಯವಾಯಿತು. ಅವಳ ಧೈರ್ಯ ಮೆಚ್ಚಿ ನುಡಿದ.

"ನೀವೇನು ಕೇಳಬೇಕೂಂತ ಇದೀರಿ ?"

"ನಾನು ಕೇಳಬೇಕೆಂದಿರುವುದು ನಿಮಗೆ ಗೊತ್ತು."

ಭಾರತಿ ತಲೆ ಅಲುಗಿಸಿದಳು.

"ನನಗೆ ಈಗಲೇ ಹೇಳುವುದಕ್ಕಾಗುವುದಿಲ್ಲ."

ಭಾರತಿಯ ಉತ್ಸಾಹ ಕುಗ್ಗಿ ತಟ್ಟನೆ ನಿರಾಶೆ ಕಣ್ಣುಗಳಲ್ಲಿ ಹಣಿಕಿತು. ಅವಳ ಮುಖದಲ್ಲಾದ ಬದಲಾವಣೆ ಗಮನಿಸಿ ಆನಂದ ನುಡಿದ.

"ಮಿಂಚಿದ ಕೂಡಲೇ ಕಣ್ಣು ಕಾಣಿಸುವುದಿಲ್ಲ. ಅಲ್ಲವೇ ?"

"ಹಾಗೆಯೇ ಕಣ್ಣು ಕೋರಯಿಸುವ ರೂಪದ ಮುಂದೆ ಮಾತು ಹೊರಡುವುದಿಲ್ಲ."

ಭಾರತಿ ನಕ್ಕಳು. ಆನಂದ ಮೊದಲನೆಯ ಬಾರಿ ಅವಳ ಕೆನ್ನೆಗಳಲ್ಲಿ ಆಳವಾಗಿ ಮೂಡಿದ ಗುಳಿಗಳನ್ನು ಗಮನಿಸಿದ.

"ಓ !" ಆನಂದ ಆಶ್ಚರ್ಯದಿಂದ ನುಡಿದ.

"ಏನು ?"

"ನನಗಿದು ಗೊತ್ತೇ ಇರಲಿಲ್ಲ."

"ಯಾವುದು ?"

ಆನಂದ ಮಾತನಾಡದೇ ತನ್ನ ಕೆನ್ನೆ ಮುಟ್ಟಿ ತೋರಿಸಿದ.

ಆನಂದ ಮುಂದೆ ಬಂದು ಬಟ್ಟಲು ಕೈಯಲ್ಲಿ ಹಿಡಿದು ಹಿಂದಿರುಗಿ ನೋಡಿದಾಗ ಕೊಠಡಿ ಬರಿದಾಗಿತ್ತು. ಆನಂದ ಕಾಫಿಯ ಬಟ್ಟಲ ಕಡೆ

ನೋಡಿದ. ಕಾಫಿ ಕುಡಿಯುವ ಅಭ್ಯಾಸವಿಲ್ಲದಿದ್ದರೂ ಅದನ್ನು ತಂದವಳು ಭಾರತಿಯಾದುದರಿಂದ ಬಟ್ಟಲು ಬರಿದುಮಾಡಿದ.

ರಾತ್ರಿ ಊಟದ ಶಾಸ್ತ್ರಮುಗಿಸಿ ಗಂಡ, ಹೆಂಡತಿ, ಮಗ ಊರಿಗೆ ಹೊರಟರು. ವೇದಮ್ಮ ಹೊರಡುವ ಮುಂಚೆ ಭಾರತಿಗೆ,

"ಹೋಗಿ ಬರ್ತೀನಮ್ಮ" ಎಂದರು.

"ಭಾರತಿ, ಅವರಿಗೆ ನಮಸ್ಕಾರ ಮಾಡು"—ತಾಯಿ ನುಡಿದರು.

ಭಾರತಿ ವೇದಮ್ಮನವರ ಕಾಲು ಮುಟ್ಟಿ ನಮಸ್ಕಾರ ಮಾಡಿದಳು. ವೇದಮ್ಮ ಅಕ್ಕರೆಯಿಂದ ಅವಳ ತಲೆ ಸವರಿದರು.

ಆನಂದ ಎಲ್ಲರಿಗೂ 'ನಮಸ್ಕಾರ' ಹೇಳಿ ಹೊರಟ. ಆದರೆ ಯಾರನ್ನು ಕಾಣಲು ಅವನ ಹೃದಯ ತವಕಿಸುತ್ತಿತ್ತೋ ಅವಳು ಮಾತ್ರ ಕಣ್ಣಿಗೆ ಬೀಳಲಿಲ್ಲ. ನಿರಾಶೆಯಿಂದ ಸುತ್ತಲೂ ನೋಡಿ ತಾಯಿಯೊಡನೆ ಹೊರಟ. ಗೇಟಿನವರೆವಿಗೆ ಹೋದವನು ಏನನ್ನೋ ಜ್ಞಾಪಿಸಿಕೊಂಡು,

"ಅಮ್ಮ, ನನ್ನ ಹ್ಯಾಂಡ್ ಬ್ಯಾಗ್ ರೂಮಿನಲ್ಲೇ ಮರೆತು ಬಂದಿದೀನಿ" ಎನ್ನುತ್ತಾ ಮತ್ತೆ ಒಳಗೆ ಬಂದ. ಎಲ್ಲರೂ ಹೊರಟು ಹೋಗಿರುವರೆಂಬ ಧೈರ್ಯದಿಂದ ಭಾರತಿ ಕಿಟಕಿಯಲ್ಲಿ ಮುಖವಿಟ್ಟು ನಿಂತಿದ್ದಳು. ಆನಂದ ರೂಮಿನಲ್ಲಿ ಬಿಟ್ಟುಹೋಗಿದ್ದ ಚೀಲ ತೆಗೆದುಕೊಂಡು ಹೊರಗೆ ಬಂದು ಕಿಟಕಿಯ ಬಳಿ ನಿಂತಿದ್ದ ಭಾರತಿಯನ್ನು ನೋಡಿ ನಕ್ಕು ಕಣ್ಣಿನಲ್ಲೇ 'ಹೋಗಿ ಬರುತ್ತೇನೆ' ಎಂದು ತಿಳಿಸಿದ. ಭಾರತಿ ಪ್ರತಿಯಾಗಿ ನಕ್ಕು ತಲೆ ಅಲುಗಿಸಿದಳು. ಆನಂದ ಈ ಬಾರಿ ಸಮಾಧಾನದಿಂದ ತಾಯಿಯೊಡನೆ ಹೊರಟ.

೫

ಮದುವೆಯ ದಿನ ಸಮೀಪಿಸುತ್ತಿದ್ದಂತೆ ಮನೆಗೆ ನೆಂಟರು ಬರತೊಡಗಿದರು. ವೆಂಕಟಸುಬ್ಬಯ್ಯನವರ ಹಿರಿಯಮಗ ಶಿವರಾಮು ಮದುವೆಗೆ ಬಂದಿದ್ದ. ಭಾರತಿ ಹತ್ತು ವರ್ಷದ ಹುಡುಗಿಯಾಗಿದ್ದಾಗ ಕೀಟಲೆ ಮಾಡಿ ಅವಳನ್ನು ಅಳಿಸುತ್ತಿದ್ದ ಶಿವರಾಮು ಈಗ ಭಾರತಿಯನ್ನು ನೋಡಿದರೆ ನಾಚಿ ಕೆಂಪಗಾಗುತ್ತಿದ್ದ. ಒಂದು ಸಲ ಎಲ್ಲರೂ ಉತ್ಸಾಹದಿಂದ ಮಾತನಾಡುತ್ತಿದ್ದಾಗ ಭಾರತಿ ಒಳಗೆ ಬಂದೊಡನೆ ಶಿವರಾಮು ಮಾತು ನಿಲ್ಲಿಸಿದ. ವೆಂಕಟಸುಬ್ಬಯ್ಯ ಮಗನಿಗೆ 'ಶಿವೂ, ಈಗಲೂ ಮೊದಲಿನಂತೆ ಭಾರತಿ

ಯನ್ನು ಕೀಟಲೆ ಮಾಡಿ ಅಳಿಸಿದರೆ ಇನಾಮು ಕೊಡುತ್ತೇನೆ' ಎಂದರು. ಶಿವರಾಮು ಕಣ್ಣೆತ್ತಿ ಭಾರತಿಯನ್ನು ನೋಡಿದ.

ಅಂದಿನ ಅಳುಮೂಂಜಿ ಹುಡುಗಿ ಈ ರೂಪಸಿಯೇ? ಭಾರತಿಯನ್ನು ಮೊದಲು ತನಗೆ ಕೊಡುವ ಮಾತುಕತೆ ನಡೆದು, ತನ್ನ ತಂದೆ ಆ ಪ್ರಸ್ತಾಪ ಕೊನೆಗಾಣಿಸಿ ಅವಳಿಗೆ ಬೇರೆ ಕಡೆ ಮದುವೆ ಗೊತ್ತುಮಾಡಿದ ವಿಷಯ ಶಿವ ರಾಮೂಗೆ ತಿಳಿದಿತ್ತು. ಭಾರತಿಯನ್ನು ತನಗೆ ತಪ್ಪಿಸಿದುದಕ್ಕಾಗಿ ಶಿವ ರಾಮೂಗೆ ತಂದೆಯ ಮೇಲೆ ಅಸಮಾಧಾನವುಂಟಾಯಿತು. ಆ ದಿನದ ಅಳುಮೋರೆಯ ಹುಡುಗಿ ಲಾವಣ್ಯದ ಮೂರ್ತಿಯಾಗಿದ್ದಾಳೆ ಎನ್ನುವ ವಿಷಯ ತನಗಾದರೂ ಮೊದಲೇ ತಿಳಿದಿದ್ದರೆ, ಹಠಹಿಡಿದಾದರೂ ಭಾರತಿ ಯನ್ನು ಮದುವೆಯಾಗಬಹುದಾಗಿತ್ತು.

"ಛೀ, ಎಂತಹ ಯೋಚನೆ! ಈಗ ಭಾರತಿ ಪರಸ್ತ್ರೀ. ಅವಳ ವಿಷಯ ಹೀಗೆ ಯೋಚಿಸುವುದು ತಪ್ಪಲ್ಲವೇ? ಎಲ್ಲಕ್ಕಿಂತಲೂ ಮಿಗಿಲಾಗಿ ತನಗೂ, ಅವಳಿಗೂ ವರಸಾಮ್ಯ ಸ್ವಲ್ಪವೂ ಸರಿಹೋಗುವುದಿಲ್ಲ."

ಅಸಮಾಧಾನದಿಂದ ಕುಗ್ಗಿದ ಮನಸ್ಸನ್ನು ಶಿವರಾಮು ಸಮಾಧಾನ ಪಡಿಸಿದ. "ಹೋಗಲಿ, ಹುಡುಗಿಗೆ ತನಗಿಂತಲೂ ಶ್ರೇಷ್ಠವಾದ ಕಡೆ ಸಿಕ್ಕಿತು. ಎಲ್ಲಾದರೂ ಸುಖವಾಗಿರಲಿ" ಎಂದು ಮನಃಪೂರ್ವಕವಾಗಿ ಹಾರೈಸಿದ.

ಶಿವರಾಮು ನಗುಮುಖ ಮಾಡಿಕೊಂಡು ಎಲ್ಲರೊಡನೆಯೂ ಮಾತ ನಾಡಿದ. ಆದರೆ ಆ ನಗುಮುಖದ ಹಿಂದೆ ನಿರಾಶೆಯ ಕರಿನೆರಳು ಆಗಾಗ ಹಣಿಕಿ ನೋಡುತ್ತಿತ್ತು. ತನಗಾದ ನಿರಾಶೆಯನ್ನು ಮ ಯಲು ಎಲ್ಲರೊಡ ನೆಯೂ ಮಾತನಾಡಿ, ಭಾರತಿಯನ್ನು ಕೀಟಲೆ ಮಾಡಿ ನಗುವಿನಲ್ಲಿ ನಿರಾಶೆ ಯನ್ನು ಮರೆಯಲು ಅವನು ಯತ್ನಿಸುತ್ತಿದ್ದ.

ವಾಣಿ ಅವನ ಕೈಗೆ ಸಿಕ್ಕಿಬಿಟ್ಟರಂತೂ ಮುಗಿಯಿತು.

"ಲೇ ಹುಡುಗಿ, ನೀನಾದರೂ ನನ್ನ ಮದುವೆ ಮಾಡಿಕೊಳ್ಳೇ" ಎಂದು ಅಂಗಲಾಚುತ್ತಿದ್ದ. ಶಿವರಾಮುವಿನ ಆಕ್ರಮಣಕ್ಕೆ ಬೆದರಿದ ವಾಣಿ ಅವನ ಕಣ್ಣು ತಪ್ಪಿಸಿ ಓಡಾಡುತ್ತಿದ್ದಳು. ಒಂದು ಸಲ ಶಿವರಾಮು ತನ್ನ ಸ್ನೇಹಿತ ನೊಡನೆ ಮಾತನಾಡುತ್ತಿದ್ದಾಗ ವಾಣಿ ಸುಳಿಯಲು, ಶಿವರಾಮು ಅವಳನ್ನು ಹಿಡಿದು ನಿಲ್ಲಿಸಿ ಸ್ನೇಹಿತನಿಗೆ 'ಇವಳು ನನ್ನ ಮದುವೆ ಮಾಡಿಕೊಳ್ಳಲ್ಲ ಎನ್ನುತ್ತಾಳೆ. ನೀನಾದರೂ ಹೇಳಿ ಒಪ್ಪಿಸೋ' ಎಂದ.

ಅಂದಿನಿಂದ ಶಿವರಾಮೂನ ಕಂಡರೆ ವಾಣಿ ಒಳಗೋಡಿಬಿಡುತ್ತಿದ್ದಳು.

ಶಿವರಾಮು ಬಂದರೆ ಇತರರೂ ಅವನೊಡನೆ ಸೇರಿ ಅವಳನ್ನು ಕಿರುಗುಟ್ಟಿಸು ತ್ತಿದ್ದರು.

ಈ ಗಂಡಸರ ಭಂಡತನದಿಂದಾಗಿ ವಾಣಿಗೆ ಸ್ವತಂತ್ರವಾಗಿ ಓಡಾಡಲೂ ಆಸ್ಪದವಿರಲಿಲ್ಲ.

ಸೀತಾರಾಮಯ್ಯನವರು ಮಗಳಿಗಾಗಿ ಹಳದಿ ಮಿಶ್ರಿತ ಹಸಿರು ಸೀರೆ ಯೊಂದರ ಹೊರತು ಬೇರೇನೂ ತಂದಿರಲಿಲ್ಲ. ಯಾರಾದರೂ 'ಹುಡುಗೀಗೆ ಏನು ತಂದಿದೀರಿ' ಎಂದರೆ 'ಅವಳು ಒಳ್ಳೇ ಕಡೆ ಸೇರುತ್ತಾಳೆ. ಇನ್ನೇನು ತರಬೇಕಾಗಿದೆ' ಎಂದು ಜಾಣತನದಿಂದ ಉತ್ತರ ಕೊಡುತ್ತಿದ್ದರು.

ವೇದಮ್ಮ ಸೊಸೆಗಾಗಿ ವಜ್ರಸೋಲೆ, ಬಳೆ, ಸರಗಳನ್ನು ಮಾಡಿಸಿ ತಂದಿದ್ದರು. ಧಾರೆಗೆ ಮುಂಚೆ ಭಾರತಿ ವಜ್ರದೋಲೆ ಹಾಕಿಕೊಂಡು ದೇವರ ಮುಂದೆ ಕುಳಿತಿದ್ದಾಗ ಸರೋಜಮ್ಮ "ನಮ್ಮ ಪೈಕಿ ವಜ್ರದೋಲೆ ಹಾಕಿದವಳು ಭಾರತೀನೇ ಮೊದಲು" ಎಂದು ಹೆಮ್ಮೆಯಿಂದ ನೆಂಟರಲ್ಲಿ ಹೇಳಿಕೊಂಡರು.

'ಅವಳ ಮುಖಕ್ಕೆ ಓಲೆ ತುಂಬ ಚೆನ್ನಾಗಿ ಒಪ್ಪುತ್ತದೆ'

'ಒಪ್ಪದೇ ಏನಮ್ಮ? ಅವಳ ರೂಪು ನೋಡೇ ಹುಡುಗ ಮದುವೆಗೆ ಒಪ್ಪಿದ್ದು' ಎಂದು ಮತ್ತೊಬ್ಬರು ಉತ್ತರ ಕೊಟ್ಟರು.

ಶುಭ ಮುಹೂರ್ತದಲ್ಲಿ ಭಾರತಿ ಆನಂದನ ಪತ್ನಿಯಾದಳು. ಮದುವೆ ಅತ್ಯಂತ ಸರಳ ರೀತಿಯಲ್ಲಿ, ಆದಷ್ಟು ಕಡಿಮೆ ಖರ್ಚಿನಲ್ಲಿ ನಡೆದರೂ ವೇದಮ್ಮನವರಾಗಲಿ, ರಂಗಣ್ಣನವರಾಗಲಿ ಬೀಗರನ್ನು ಆಕ್ಷೇಪಿಸಲಿಲ್ಲ. ಬೀಗರು ಬಡವರು, ಹುಡುಗಿಯ ರೂಪಿಗಾಗಿ ತಾವು ಅವಳನ್ನು ಸೊಸೆಯಾಗಿ ಸ್ವೀಕರಿಸಿದ್ದೇವೆ, ಸೊಸೆಯ ಚೆಲುವು ಪರದೇಶದಲ್ಲಿ ಮಗನ ಮನಸ್ಸನ್ನು ಆಂಗ್ಲ ರಮಣಿಯರಿಂದ ಕಾಯುತ್ತದೆ ಎಂಬುದು ಅವರ ಅಚಲವಾದ ನಂಬಿಕೆ. ಸೊಸೆ ಬಡವಳಾದರೂ ಚಿಂತೆಯಿಲ್ಲ. ಮಗ ಯಾವ ಕೆಟ್ಟ ಕೆಲಸ ವನ್ನೂ ಮಾಡದೇ ಬಂದರೆ ಸಾಕು ಎಂದು ಅವರಿಗೆ ಎನಿಸಿತ್ತು. ಮದುವೆಗೆ ಬರುವಾಗಲೂ ಅವರು ತಮ್ಮ ಕಡೆಯಿಂದ ಬಹಳ ಜನರನ್ನು ಕರೆದುಕೊಂಡು ಬಂದಿರಲಿಲ್ಲ. ತಮಗೆ ಬೇಕಾದ ಕೆಲವು ಜನರನ್ನು ಮಾತ್ರ ಕರೆದು ತಂದಿ ದ್ದರು. ಧಾರೆಯಾದ ಮಧ್ಯಾಹ್ನವೇ ಬೀಗರಿಗೆ ಹೊರೆಯಾಗದಿರಲೆಂದು ತಮ್ಮ ಕಡೆಯವರನೇಕರನ್ನು ಊರಿಗೆ ಕಳುಹಿಸಿಯೂ ಬಿಟ್ಟರು.

ಮದುವೆಯ ವಿಚಾರದಲ್ಲಿ ಯಾವ ವಿಧವಾದ ಅತೃಪ್ತಿಯುಂಟಾಗದಿ ದ್ದರೂ ಆನಂದನ ಮದುವೆಗೆ ಚಂದು ಬಾರದಿದ್ದುದು ವೇದಮ್ಮನಿಗೆ ತುಂಬಾ ನಿರುತ್ಸಾಹವನ್ನುಂಟುಮಾಡಿತ್ತು.

ವೇದಮ್ಮನ ತಾಯಿಗೆ ವೇದಮ್ಮ, ಚಂದು ಇಬ್ಬರೇ ಮಕ್ಕಳು. ಚಂದು ಆನಂದನಿಗಿಂತಲೂ ಆರು ವರ್ಷ ದೊಡ್ಡವನು. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದ ತಮ್ಮನನ್ನು ವೇದಮ್ಮನೇ ಸಾಕಿ ಸಲಹಿದ್ದರು. ವೇದಮ್ಮ ಮದುವೆಯಾಗಿ ಗಂಡನ ಮನೆಗೆ ಬರುವ ವರೆವಿಗೂ ಚಂದು ಅಕ್ಕನ ಮಡಿಲಿನಲ್ಲಿಯೇ ಬೆಳೆದ. ಅಕ್ಕರೆಯ ತಮ್ಮ ಆನಂದನ ಮದುವೆಗೆ ಬರುವುದಾಗಿ ಕಾಗದ ಬರೆದಿದ್ದರೂ ಬಾರದಿರಲು ಏನು ಕಾರಣ? ಏನಾದರೂ ಖಾಯಿಲೆ ಮಲಗಿಬಿಟ್ಟಿದ್ದಾನೇನೋ ?

ತಮ್ಮನ ಚಿಂತೆಯಲ್ಲಿಯೇ ವೇದಮ್ಮ ಚಪ್ಪರದಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಸೋಫಾದ ಮೇಲೆ ಅಕ್ಕಪಕ್ಕದಲ್ಲಿ ಕುಳಿತಿದ್ದ ಮಗ ಸೊಸೆ ಯರನ್ನೇ ದಿಟ್ಟಿಸಿ ನೋಡುತ್ತಿದ್ದರು.

ಆನಂದ, ಭಾರತಿ ಸುತ್ತಲೂ ಇದ್ದ ಜನರನ್ನು ಮರೆತು ತಮ್ಮದೇ ಆದ ಒಂದು ಪ್ರಪಂಚವನ್ನು ನಿರ್ಮಿಸಿಕೊಂಡಿದ್ದರು.

ವೇದಮ್ಮ ದಂಪತಿಗಳನ್ನೇ ದಿಟ್ಟಿಸಿ ನೋಡಿದರು.

ಹಸಿರು ಸೀರೆಯುಟ್ಟು, ಹೆರಳು ಹಾಕಿ, ಕನಕಾಂಬರದ ಹೂ ಮುಡಿದ ಹುಡುಗಿಯೊಬ್ಬಳು ಭಾರತಿಯ ಹತ್ತಿರ ಬಂದು ಕೈಗೆ ಪುಸ್ತಕ ಕೊಟ್ಟು ನಗುತ್ತಾ ಅವಳನ್ನು ಮಾತನಾಡಿಸಿದಳು. ಭಾರತಿ ಆನಂದನ ಕಡೆ ತಿರುಗಿ ಏನೋ ಹೇಳಿದಳು. ಆನಂದ ಆ ಹುಡುಗಿಗೆ ಕೈ ಮುಗಿದ. ಆ ಹುಡುಗಿ ಹೊರಟುಹೋದನಂತರ ಆನಂದ ಭಾರತಿಗೆ ಏನೋ ಹೇಳಿದ. ಭಾರತಿ ತುಟಿ ಕಚ್ಚಿ, ನಗು ನುಂಗಿ ತಲೆ ತಗ್ಗಿಸಿದಳು. ನೋಡುವವರು ಏನು ಭಾವಿಸಿ ಯಾರೆಂಬ ಅರಿವಿಲ್ಲದೆ ಆನಂದ ಅವಳ ಮುಖವನ್ನು ಸ್ನೇಹದಿಂದ ನೋಡು ತಿದ್ದ.

ವೇದಮ್ಮನ ಕಣ್ಣು ರತಿ, ಮನ್ಮಥರಂತೆ ಕುಳಿತಿದ್ದ ಮಗ, ಸೊಸೆಯನ್ನು ನೋಡುತ್ತಿದ್ದರೂ ಮನಸ್ಸು ವ್ಯಾಕುಲದಿಂದ ಕುದಿಯುತ್ತಿತ್ತು. ಗಲ್ಲಕ್ಕೆ ಕೈ ಕೊಟ್ಟು ಕುಳಿತಿದ್ದ ವೇದಮ್ಮನ ಹತ್ತಿರ ಚಿಕ್ಕ ಹುಡುಗನೊಬ್ಬ ಉದ್ವೇಗ ದಿಂದ ಓಡಿ ಬಂದು 'ಚಿಕ್ಕಮ್ಮ, ಚಂದು ಬಂದ' ಎಂದ.

ವೇದಮ್ಮನ ಚಿಂತೆ ಮಾಯವಾಯಿತು. ಸಡಗರದಿಂದ ಎದ್ದು 'ಎಲ್ಲಿ' ಎಂದರು. ಹುಡುಗ ಅವರನ್ನು ಚಪ್ಪರದಿಂದ ಹೊರಕ್ಕೆ ಕರೆದುಕೊಂಡು ಹೋದ.

ಚಂದು ಕೈಯಲ್ಲೊಂದು ಚರ್ಮದ ಸೂಟ್‌ಕೇಸ್ ಹಿಡಿದು ಬಾಗಿಲಿ ನಲ್ಲಿ ತಲೆ ನರೆತವರೊಬ್ಬರೊಡನೆ ನಗುತ್ತಾ ಮಾತನಾಡುತ್ತಿದ್ದ. ವೇದಮ್ಮ

ಉತ್ಸಾಹದಿಂದ ತಮ್ಮನ ಬಳಿ ಧಾವಿಸಿ ಬಂದು ಅವನ ಬೆನ್ನು ಸವರಿ 'ಬಂದೆ ಯೇನೋ ಚಂದು. ನೀನು ಬರಲಿಲ್ಲಾಂತ ತುಂಬಾ ಯೋಚನೆಯಾಗಿತ್ತು. ಒಳಗೆ ಬಾ. ತಿಂಡಿ ತಿನ್ನುವಿಯಂತೆ' ಎಂದರು.

ಆರಡಿ ಎರಡಂಗುಲವಿದ್ದ ಚಂದು ಐದಡಿ ಎತ್ತರವಿದ್ದ ಅಕ್ಕನೊಡನೆ ತಲೆ ತಗ್ಗಿಸಿ ಮಾತನಾಡುತ್ತಾ ಒಳಗೆ ಹೋದ. ವೇದಮ್ಮ ತಮ್ಮ ಬಂದ ನೆಂಬ ಸಂಭ್ರಮದಲ್ಲಿ ತಾವೇ ಅಡಿಗೆ ಶಾಲೆಗೆ ಹೋಗಿ ಕಾಫಿ, ತಿಂಡಿ ತೆಗೆಸಿ ಕೊಂಡು ಬಂದು ತಮ್ಮನ ಮುಂದಿಟ್ಟರು.

"ಯಾಕೋ ಮಗು, ಬಡವಾಗಿದೀಯಲ್ಲಾ ?"

"ನಾನು ಬಡವಾಗುವುದಕ್ಕೆ ಸಾಧ್ಯವೇ ಅಕ್ಕ" ಚಂದು ನಗುತ್ತಾ ಕೇಳಿದ. ವೇದಮ್ಮ ತಮ್ಮನ ವಿಶಾಲವಾದ ಎದೆಯನ್ನೂ, ಮಾಂಸಖಂಡ ದಿಂದ ಉಬ್ಬಿದ ತೋಳನ್ನೂ ಹೆಮ್ಮೆಯಿಂದ ನೋಡಿದರು. ಕೈತೋಳುಗಳು ರೋಮದಿಂದ ತುಂಬಿ ಒರಟಾಗಿ, ಬಲಿಷ್ಠವಾಗಿದ್ದರೂ ಮುಖದಲ್ಲಿ ಮೃದುತ್ವ ವಿತ್ತು. ನೀಳವಾದ ತಲೆಗೂದಲನ್ನು ಬೈತಲೆ ತೆಗೆಯದೆ ಹಿಂದಕ್ಕೆ ಎತ್ತಿ ಬಾಚಿದ್ದ. ಕಣ್ಣಿಗೆ ಹಿತವಾದ ಕೆಂಪು ಮಿಶ್ರಿತ ಬಿಳಿಬಣ್ಣ, ನೇರವಾದ ಮೂಗು, ತೆಳುವಾದ ತುಟಿಗಳು, ಸ್ವಲ್ಪ ಚಿಕ್ಕವಾದರೂ ವಜ್ರದಂತೆ ಹೊಳೆ ಯುತ್ತಿದ್ದ ಕಣ್ಣುಗಳು,........ಹೆಚ್ಚು ನೋಡಿದರೆ ತಮ್ಮನಿಗೆ ದೃಷ್ಟಿಯಾ ದೀತೆಂಬ ಹೆದರಿಕೆಯಿಂದ ವೇದಮ್ಮ ಮುಖ ತಿರುಗಿಸಿದರು.

ಚಂದು, ವೇದಮ್ಮ ಕುಳಿತಿದ್ದ ರೂಮಿನ ಹೊರಗೆ ಅನೇಕ ಹೆಂಗಸರು ಗುಂಪುಕೂಡಿ ಮಾತನಾಡುತ್ತಿದ್ದರು.

"ಅವರು ಯಾರು ?"

"ಅವರು ವೇದಮ್ಮನ ತಮ್ಮನಂತೆ" ಮತ್ತೊಬ್ಬಾಕೆ ಪಿಸುಗುಟ್ಟಿದರು.

"ಮದುವೆ ಆಗಿದೆಯೇ ?"

"ಇನ್ನೂ ಇಲ್ಲ ಅಂತ ಯಾರೋ ಹೇಳಿದರು. ಬಿ. ಎಸ್‌ಸಿ. ಪಾಸು ಮಾಡಿ ಕೆಲಸದಲ್ಲಿದ್ದಾರಂತೆ, ಆದರೂ ಯಾಕೆ ಮಾಡಿಕೊಂಡಿಲ್ಲವೋ ?"

ಅವನಿಗೆ ಮದುವೆಯಾಗಿಲ್ಲವೆಂದು ಕೇಳಿ ಮದುವೆಗೆ ಬಂದ ಹೆಣ್ಣು ಮಗಳಿದ್ದ ತಾಯಿಯೊಬ್ಬಳ ಮುಖ ಅರಳಿತು.

"ಹಾಗಾದರೆ ನಮ್ಮ ಕಮಲೂನ ಈತನಿಗೆ ಯಾಕೆ ಕೊಡಬಾರದು? ವೇದಮ್ಮನವರನ್ನು ವಿಚಾರಿಸುತ್ತೇನಿ" ಎನ್ನುತ್ತಾ ಆಕೆ ಮತ್ತೊಮ್ಮೆ ಚಂದು ವಿನ ಕಡೆ ನೋಡಿ 'ಹುಡುಗ ತುಂಬಾ ಲಕ್ಷಣವಾಗಿದಾನೆ' ಎಂದರು.

ಚಂದು ತಿಂಡಿ ಮುಗಿಸಿ, ಮುಖ ತೊಳೆದು ಕ್ರಾಪು ತಿದ್ದಿ, ಕೈಲೊಂದು

ಕಾಗದದ ಸುರುಳಿ ಹಿಡಿದು ಚಪ್ಪರದೊಳಗೆ ಬಂದ. ಹೆಂಡತಿಯ ರೂಪ ಸಾಗರದಲ್ಲಿ ಮುಳುಗಿದ್ದ ಆನಂದ ಚಂದುವಿನ ಆಗಮನವನ್ನು ಗಮನಿಸಲಿಲ್ಲ. ಚಂದು ಅವನ ಹತ್ತಿರ ಬಂದು ಕೈಯನ್ನು ಆನಂದನ ಭುಜದ ಮೇಲಿರಿಸಿ,

"ಮದುವೆಯಾಯಿತು. ಇನ್ನು ನಮ್ಮ ಜ್ಞಾಪಕ ಉಳಿಯುವುದು ಕಷ್ಟ" ಎಂದ.

"ಓಹೋ, ನೀನೇ! ಯಾವಾಗ ಬಂದೆ" ಎನ್ನುತ್ತಾ ಆನಂದ ಬಳಿಯಲ್ಲಿಯೇ ಓಡಾಡುತ್ತಿದ್ದ ಹುಡುಗನಿಗೆ 'ಮಗೂ, ಆ ಕುರ್ಚಿ ತಂದು ಇಲ್ಲಿ ಹಾಕಪ್ಪಾ' ಎಂದ. ಹುಡುಗ ಕುರ್ಚಿ ತಂದು ಸೋಫಾದ ಬಳಿ ಇರಿಸಿದ.

"ಕುಳಿತುಕೊಳ್ಳಯ್ಯ, ನಿನ್ನ ನೋಡಿ ಬಹಳ ದಿನಗಳಾಯಿತು" ಎನ್ನುತ್ತಾ ಹೆಂಡತಿಯ ಕಡೆ ತಿರುಗಿ,

"ಭಾರತಿ, ಚಂದು ನನ್ನ ಸೋದರಮಾವ. ದೊಡ್ಡ ಕಲಾವಿದ...." ಎಂದ. ಭಾರತಿ ನಮ್ರತೆಯಿಂದ ಕೈ ಜೋಡಿಸಿದಳು. ಆನಂದನ 'ಕಲಾವಿದ' ಎಂಬ ಪದ ಕೇಳಿ ಚಂದು ನಗುತ್ತಾ ಭಾರತಿಯ ವಂದನೆಯನ್ನು ಹಿಂದಿರುಗಿಸಿದ.

ಭಾರತಿಯನ್ನು ನೋಡಿ ಚಂದುವಿನ ಹಾಸ್ಯವದನ ಗಂಭೀರವಾಯಿತು. ಚಂದು ಸೌಂದರ್ಯೋಪಾಸಕ· ಚೆಲುವಿನ ಭಕ್ತ. ಭಗವಂತನೆದುರಿನ ಭಕ್ತನಂತೆ ಅವನು ಅವಳ ಸೌಂದರ್ಯವನ್ನು ಕಣ್ಣು ತುಂಬಾ ನೋಡಿದ.

ಆನಂದನ ಹೆಂಡತಿ ಇಷ್ಟೊಂದು ಚೆಲುವೆಯಾಗಿರಬಹುದು ಎಂದು ಅವನು ಕನಸಿನಲ್ಲಿಯೂ ಎಣಿಸಿರಲಿಲ್ಲ.

ಆ ಕಣ್ಣುಗಳು—ಅವೆರಡೇ ಸಾಕು ಗಂಡಸರ ಹೃದಯವನ್ನು ನುಚ್ಚುನೂರು ಮಾಡಲಿಕ್ಕೆ. ಕಿವಿಯಲ್ಲಿದ್ದ ಓಲೆಯನ್ನೂ ಮೀರಿ ಮಿನುಗುತ್ತಿದ್ದ ನಯನಗಳು ಚಂದುವಿನ ಹೃದಯವನ್ನು ಮಂಕು ಮಾಡಿದವು. ರಂಗು ಬಳಿದಂತಿದ್ದ ತುಟಿ ನೋಟಕರ ಮನಸ್ಸನ್ನು ತನ್ನಲ್ಲಿಗೆ ಆಕರ್ಷಿಸುತ್ತಿತ್ತು. ಹಾಲಿಗೆ ಕೇಸರಿ ಬೆರಸಿದಂತಿದ್ದ ಬಣ್ಣ, ಹೂವಿನಂತೆ ನಯವಾದ ಕೆನ್ನೆ, ಪುಟ್ಟಗಲ್ಲ, ಕಪ್ಪು ಸಿಲ್ಕಿನ ಚೋಲಿಯಿಂದಾಗಿ ಮತ್ತಷ್ಟು ಅಂದವಾಗಿ ಕಾಣುತ್ತಿದ್ದ ದುಂಡು ತೋಳು ಅವನನ್ನು ಮರುಳುಗೊಳಿಸಿದವು. ತಿಳಿ ಹಳದಿಯ ಪೀತಾಂಬರ ಉಟ್ಟಿದ್ದ ಚೆಲುವೆಯನ್ನು ನೋಡಿ ಚಂದು ಮನಸ್ಸಿನಲ್ಲಿಯೇ ಆನಂದನ ಅಭಿರುಚಿಯನ್ನು ಮೆಚ್ಚಿದ.

"ಧಾರೆ ಸಮಯಕ್ಕೆ ಯಾಕೆ ಬರಲಿಲ್ಲ?" ಆನಂದ ಕೇಳಿದ. ಚಂದು ಭಾರತಿಯಿಂದ ಕಣ್ಣು ಕಿತ್ತು 'ಊಂ. ಟ್ರೈನು ತಪ್ಪಿಹೋಯಿತು. ಬಡ

ವನ ಉಡುಗೊರೆ ಸ್ವೀಕರಿಸಬೇಕು," ಎಂದು ತನ್ನ ಕೈಲಿ ಹಿಡಿದಿದ್ದ ಸುರುಳಿಯನ್ನು ಆನಂದನ ಕೈಗಿತ್ತ.

"ನೀನು ಬರೆದ ಚಿತ್ರವೋ" ಎನ್ನುತ್ತಾ ಆನಂದ ಸುರುಳಿಯನ್ನು ಬಿಚ್ಚಿದ. ಚಂದು ಬರೆದ ಚಿತ್ರ ಸುಂದರವಾಗಿತ್ತು.

ತಿಳಿನೀಲಿ ಹಿನ್ನೆಲೆ ಕೊಟ್ಟು ಚಂದು ಚಿತ್ರಿಸಿದ್ದ. ಸುಮಾರು ಹದಿನಾರು ವರ್ಷದ ಹುಡುಗಿಯೊಬ್ಬಳು ಹಾವಿನ ಪೊರೆಗಿಂತಲೂ ತೆಳುವಾಗಿದ್ದ ಬಿಳಿಯ ಬಟ್ಟೆಯೊಂದನ್ನು ದೇಹಕ್ಕೆ ಸುತ್ತಿಕೊಂಡಿದ್ದಳು. ತೆಳುವಾಗಿದ್ದ ಆ ಬಟ್ಟೆಯ ಮೂಲಕ ಅವಳ ಎಳೆಯ ಅಂಗಾಂಗಗಳು ಅಸ್ಪಷ್ಟವಾಗಿ ಗೋಚರವಾಗಿದ್ದವು. ಅವಳ ಕೊರಳನ್ನು ಮುತ್ತಿನ ಸರವೊಂದು ಬಳಸಿ ಮಲಗಿತ್ತು. ಬಿಚ್ಚಿದ ತಲೆಕೂದಲು ಅಲೆ ಅಲೆಯಾಗಿ ಗಾಳಿಯಲ್ಲಿ ಹಾರಾಡುತ್ತಿತ್ತು. ಆ ಮುಗುದೆ ನೆಟ್ಟ ನೋಟದಿಂದ ಯಾರನ್ನೋ ನಿರೀಕ್ಷಿಸುತ್ತಾ ತನ್ನ ಬಟ್ಟೆ ಜಾರಿ ಬೀಳುತ್ತಿರುವುದರ ಅರಿವು ಸಹ ಇಲ್ಲದೆ ಕನಸು ಕಾಣುತ್ತಿದ್ದಳು.

"ಚಿತ್ರ ಸೊಗಸಾಗಿದೆ ಚಂದು. ನೀನು ಹುಟ್ಟುಕಲಾವಿದ" ಎನ್ನುತ್ತಾ ಆನಂದ ಭಾರತಿಯ ಕೈಗೆ ಚಿತ್ರವನ್ನು ಕೊಟ್ಟ.

ಅರೆನಗ್ನೆಯಾಗಿರುವ ಹುಡುಗಿಯ ಚಿತ್ರ ಭಾರತಿಯ ಕೆನ್ನೆಗಳಿಗೆ ಕೆಂಪು ತರಿಸಿತು. ಗಂಡಸರೆದುರಿಗೆ, ಅದರಲ್ಲೂ ಅಪರಿಚಿತ ಚಂದುವಿನೆದುರಿಗೆ ನಗ್ನ ಚಿತ್ರ ನೋಡಲು ಅವಳಿಗೆ ಸಂಕೋಚವಾಯಿತು. ಚಿತ್ರ ಮನಸೆಳೆಯುವಂತಿದ್ದರೂ ಒಂದುಗಳಿಗೆ ನೋಡಿ,

"ಇವಳು ಯಾರನ್ನು ನಿರೀಕ್ಷಿಸುತ್ತಿದ್ದಾಳೆ" ಎಂದು ಕೇಳಿದಳು.

"ಬಹುಶಃ ಪ್ರಿಯತಮನನ್ನಿರಬೇಕು" ಚಂದುವೇ ಉತ್ತರಕೊಟ್ಟ.

"ಹೇಗಿದೆ ?" ಆನಂದ ಪ್ರಶ್ನಿಸಿದ. ಚಂದುವಿನ ಕಣ್ಣು ತನ್ನ ಮೇಲೆ ನಾಟಿರುವುದನ್ನರಿತು ಭಾರತಿ ತಗ್ಗಿದ ದನಿಯಲ್ಲಿ,

"ಚೆನ್ನಾಗಿದೆ" ಎಂದಳು.

"ಕಲಾವಿದನ ಕನಸಿವಳು" ಚಂದು ಮನಸ್ಸಿನಲ್ಲಿಯೇ ಹೇಳಿಕೊಂಡ.

"ಆನಂದ, ಈ ಚಿತ್ರ ನನ್ನ ಕಾಣಿಕೆ."

"ತುಂಬಾ ಸಂತೋಷಾಪ್ಪಾ" ಆನಂದ ಮತ್ತೊಮ್ಮೆ ಚಿತ್ರದ ಕಡೆ ನೋಡಿ ಸುರುಳಿಮಾಡಿದ.

"ಇದು ನಿನ್ನ ಹುಡುಗಿಗೆ........" ಎನ್ನುತ್ತಾ ಚಂದು ಮಕಮಲ್ಲಿನ ಪೆಟ್ಟಿಗೆಯೊಂದನ್ನು ಭಾರತಿಯ ಕೈಗೆ ಕೊಟ್ಟ. ಭಾರತಿ ಪೆಟ್ಟಿಗೆ ತೆಗೆದು

ಪಕ್ಕದಲ್ಲಿಟ್ಟಳು. ಆನಂದ ಕುತೂಹಲದಿಂದ "ಎಲ್ಲಿ ಕೊಡು. ಏನಿದೆ ನೋಡೋಣ" ಎನ್ನುತ್ತಾ ಪೆಟ್ಟಿಗೆಯ ಮುಚ್ಚಳ ತೆಗೆದ.

ಮೂರೆಳೆಯ ಮುತ್ತಿನ ಸರ ಪೆಟ್ಟಿಗೆಯಲ್ಲಿ ಮಲಗಿತ್ತು.

"ತುಂಬಾ ಚೆನ್ನಾಗಿದೆ ಚಂದು. ಇದಕ್ಕೆಲ್ಲಾ ಯಾಕೆ ಇಷ್ಟೊಂದು ದುಡ್ಡು ಹಾಕಿ ತಂದೆ?"

"ನಾನೇನು ಬಹುಮಾನ ದಿನಾ ಕೊಡಬೇಕಾಗಿದೆಯೇ? ಈಗ ಈ ಮುತ್ತಿನ ಹಾರ ತಂದಿದ್ದರಿಂದ ನನಗೇ ನಾಚಿಕೆಯಾಗುತ್ತಿದೆ."

"ಯಾಕೆ? ವಜ್ರದ ಹಾರ ತರಬೇಕಾಗಿತ್ತೇನು?" ಆನಂದ ತಮಾಷೆ ಯಾಗಿ ಕೇಳಿದ.

"ಯಾವ ಹಾರವಾದರೂ ಯಾಕೆ? ಚೆಲುವೆಯರಿಗೆ ಆಭರಣಗಳನ್ನು ತರುವುದೆಂದರೆ ಅಪಹಾಸ್ಯ" ಎನ್ನುತ್ತಾ ಚಂದು ಮೆಚ್ಚುಗೆಯಿಂದ ಭಾರತಿಯ ಕಡೆ ನೋಡಿದ. ತನ್ನ ನೂತನ ವಧುವಿನ ಸೊಬಗಿನ ಹೊಗಳಿಕೆ ಕೇಳಿ ಆನಂದ ಹಿಗ್ಗಿ ಹೋದ. ಅವನಿಗೆ ತನ್ನನ್ನೇ ಹೊಗಳಿದಷ್ಟು ಸಂತೋಷ ವಾಯಿತು.

"ಕಲಾವಿದರು ಹಾಸ್ಯ ಮಾಡುತ್ತಿಲ್ಲವಷ್ಟೆ?"

"ಛೇ, ದೈವದತ್ತವಾದ ಲಾವಣ್ಯವನ್ನು ಹಾಸ್ಯಮಾಡುವ ಎದೆ ಯಾರಿಗಿದೆ?"

ಆನಂದ ಉಬ್ಬಿಹೋದ. ಭಾರತಿ ಆನಂದನ ಮಾತುಗಳಿಂದ ಲಜ್ಜಿತ ಳಾದಳು. ಅವಳನ್ನು ಇದುವರೆವಿಗೆ ಯಾರೂ ಚಲುವೆ ಎಂದು ಹೊಗಳಿರ ಲಿಲ್ಲ. ಅಪರಿಚಿತ ಗಂಡಸಿನಿಂದ ತನ್ನ ಸೌಂದರ್ಯದ ಹೊಗಳಿಕೆ ಕೇಳಿದಾಗ ಅವಳಿಗೆ ಹೇಗೆ ಹೇಗೋ ಆಯಿತು.

## ೬

ಚಂದುವಿನ ಆಗಮನ ಅನೇಕ ಹೆಣ್ಣುಮಕ್ಕಳ ತಾಯಿಯರಲ್ಲಿ ಕುತೂ ಹಲ, ಆಸಕ್ತಿಯನ್ನು ಹುಟ್ಟಿಸಿತು. ಕಮಲುವಿನ ತಾಯಿ ವೆಂಕಮ್ಮನವರು ಆ ಗಳಿಗೆಯಿಂದಲೇ ವೇದಮ್ಮನವರನ್ನು ಆಶ್ರಯಮಾಡತೊಡಗಿದರು.

"ನಿಮ್ಮ ತಮ್ಮನ ಜಾತಕ ಕೊಡಿ ವೇದಮ್ಮ."

"ಅವನು ಮದುವೇನೆ ಬೇಡಾಂತಾನೆ. ನಾನೇನು ಮಾಡಲಿ? ಅವನು ಆನಂದನಿಗಿಂತ ಆರುವರ್ಷ ದೊಡ್ಡವನು. ನಾನೂ, ಅವರೂ ಅವನಿಗೆ

ಕೆಲಸವಾದಾಗಿನಿಂದ ಒಂದೇ ಸಮ ಹೇಳಿದೆವು ಮದುವೆಮಾಡಿಕೋ ಅಂತ. ಅವನು ನಮ್ಮ ಮಾತಿಗೆ ಕಿವಿಗೊಡಲಿಲ್ಲ."

"ಅವರು ಮಾಡಿಕೊಳ್ಳದಿರಲು ಕಾರಣವೇನು?"

"ಅವನಿಗೆ ಮದುವೆಯ ಆವಶ್ಯಕತೆ ಇಲ್ಲವಂತೆ. ಮದುವೆಮಾಡಿಕೊಳ್ಳೋ ಎಂದರೆ 'ನನಗೇಕಕ್ಕ ಮದುವೆ? ನನ್ನ ಕೈ ಹಿಡಿದವಳು ಎಂದಿಗೂ ಸುಖವಾಗಿರುವುದಿಲ್ಲ' ಎಂದು ಬಿಡುತ್ತಾನೆ. ನನಗೂ ಹೇಳಿ ಹೇಳಿ ಬೇಜಾರಾಗಿದೆ. ನೀವೇ ಬೇಕಾದರೆ ವಿಚಾರಿಸಿ"

"ನೀವೂ ಸ್ವಲ್ಪ ಸಹಾಯ ಮಾಡಬೇಕು."

"ನನ್ನ ಕೈಲಾದ ಸಹಾಯ ನಾನು ಮಾಡುತ್ತೇನೆ" ಎಂದು ವೇದಮ್ಮ ಮಾತುಕೊಟ್ಟರು.

ವೆಂಕಮ್ಮನವರು ವೇದಮ್ಮನ ಮಾತುಗಳಿಂದ ಎದೆಗುಂದಲಿಲ್ಲ. ರಾತ್ರಿ ಊಟವಾದ ಮೇಲೆ ಗಂಡಸರೆಲ್ಲರೂ ಮಾತನಾಡುತ್ತಾ ಕುಳಿತಿದ್ದಾಗ ತಮ್ಮ ಯಜಮಾನರಿಂದ ಚಂದುವಿಗೆ ಹೇಳಿಸಿದರು.

"ನೋಡಪ್ಪ ಮನಸ್ಸು ಮಾಡಿ ನನ್ನ ಮಗಳನ್ನು ಮದುವೆಯಾಗಿ ಬಿಡು."

ಆನಂದನ ಮದುವೆಯ ಸಮಯದಲ್ಲಿ ತನ್ನ ಮದುವೆಯ ಪ್ರಸ್ತಾಪ ಬರಬಹುದೆಂದು ಚಂದು ನಿರೀಕ್ಷಿಸಿರಲಿಲ್ಲ. ಇದ್ದಕ್ಕಿದ್ದಂತೆ ಮದುವೆಯ ಪ್ರಶ್ನೆ ಏಳಲು ಚಂದು ಅಪ್ರತಿಭನಾದ. 'ನಾನಿನ್ನೂ ಮದುವೆಯಾಗುವ ಯೋಚನೆ ಇಟ್ಟುಕೊಂಡಿಲ್ಲ.'

"ಹಾಗೆಂದರೇನು ಸ್ವಾಮಿ. ಕೊನೆಯವರೆಗೂ ಬ್ರಹ್ಮಚಾರಿಯಾಗಿಯೇ ಉಳಿಯುವಿರೇನು? ಅನ್ನ ಬಟ್ಟೆಗೇನು ಕೊರತೆಯಿಲ್ಲ ..."

ಚಂದುವಿನ ಪಕ್ಕದಲ್ಲಿಯೇ ಕುಳಿತಿದ್ದ ಆನಂದ ಚಂದುವಿನ ಬೆನ್ನು ತಟ್ಟಿ,

"ನೀನೂ ಗೃಹಸ್ಥನಾಗಿಬಿಡು ಚಂದು. ದೊಡ್ಡ ಮನಸ್ಸು ಮಾಡು" ಎಂದ.

ಆನಂದನೂ ತಮ್ಮ ಪರವಾಗಿ ಮಾತನಾಡಲು ವೆಂಕಮ್ಮನವರಿಗೆ ಚತುರ್ಭುಜ ಬಂದಂತಾಯಿತು. ಮದುವೆ ಮನೆಯಲ್ಲಿ ಸಡಗರದಿಂದ ಓಡಾಡುತ್ತಿದ್ದ ತಮ್ಮ ಮಗಳು ಕಮಲೂನ ಕೂಗಿದರು.

"ಕಮಲೂ, ಸ್ವಲ್ಪ ಬಾ ಇಲ್ಲಿ."

ಕಮಲೂಗೆ ಯಾವ ವಿಷಯವೂ ತಿಳಿದಿರಲಿಲ್ಲ. ತನ್ನನ್ನು ಚಂದು

ವಿಗೆ ತೋರಿಸಲು ಕರೆಯುತ್ತಾರೆಂದು ತಿಳಿದಿದ್ದರೆ ಓಡಿ ಹೋಗುತ್ತಿದ್ದಳೋ ಏನೋ !

"ಏನಮ್ಮ."

"ಏನಿಲ್ಲ. ಇಲ್ಲೇ ಕುಳಿತುಕೋ ಬಾ ಎಂತ ಕರೆದೆ."

ಕಮಲ ಸಮಯ ಸಂದರ್ಭ ಗ್ರಹಿಸದೆ ಭಾರತಿಯ ಪಕ್ಕದಲ್ಲಿ ಕುಳಿತಳು. ಕಮಲು ಬಂದು ಕುಳಿತಕೂಡಲೆ ಆನಂದ ಎತ್ತಲೋ ನೋಡುತ್ತಿದ್ದ ಚಂದುವನ್ನು ತಿವಿದು,

"ಹುಡುಗೀನ ನೋಡು ಚಂದು. ಭಾರತಿಯ ಪಕ್ಕದಲ್ಲಿ ಕುಳಿತಿದ್ದಾಳೆ" ಎಂದು ಎಚ್ಚರಿಸಿದ. ಚಂದು ತಲೆ ಎತ್ತಿ ನೋಡಿದ. ಅವನ ಕಣ್ಣು ನೋಡಿದುದು ಕಮಲುವನ್ನಲ್ಲ. ಚಿತ್ರದಲ್ಲಿ ಕೊರೆದ ರೂಪಸಿಯಂತಿದ್ದ ಭಾರತಿ ಅವನ ಕಣ್ಣಿಗೆ ಬಿದ್ದಳು. ಆದರೆ ಭಾರತಿಯ ನೋಟ ಚಂದುವಿನ ಮೇಲಿರಲಿಲ್ಲ. ಅವಳ ನೋಟ ಆನಂದನ ಮೇಲಿರುವುದನ್ನು ಕಂಡು ಚಂದುವಿನ ಮನಸ್ಸು ಮತ್ಸರದಿಂದ ಕುದಿಯಿತು. ಚಂದು ತಟ್ಟನೆ ಕತ್ತು ತಿರುಗಿಸಿ ಎದ್ದು ಹೋದ.

ಅವನ ವರ್ತನೆ ವೆಂಕಮ್ಮನವರಿಗಿಂತಲೂ ವೇದಮ್ಮನವರಿಗೆ ಹೆಚ್ಚು ಬೇಸರವನ್ನುಂಟುಮಾಡಿತು. ಚಂದು ನೋಡಲೆಂದು ಕಮಲುವನ್ನು ಕೂಗಿ ಕರೆದರೆ ಮುಖಕ್ಕೆ ಹೊಡೆದ ಹಾಗೆ ಚಂದು ಎದ್ದು ಹೋದುದು ಅವರಿಗೆ ಬೇಸರವನ್ನುಂಟುಮಾಡಿತು. ಕಮಲು ಅಪ್ರತಿಮ ಸುಂದರಿಯಲ್ಲದಿದ್ದರೂ ಕುರೂಪಿಯಾಗಿರಲಿಲ್ಲ. ಚಂದು ಅಸಹ್ಯ ದೃಶ್ಯ ನೋಡಿದವನಂತೆ ಎದ್ದು ಹೋದುದು ಅವರ ಮನಸ್ಸಿಗೆ ತುಂಬಾ ನೋವನ್ನುಂಟುಮಾಡಿತು. ವೇದಮ್ಮ ವೆಂಕಮ್ಮನವರ ಬಳಿ ಬಂದು ಸಂತೈಸುವ ದನಿಯಿಂದ,

"ನಾನಾಗಲೇ ಹೇಳಲಿಲ್ಲವೇ ವೆಂಕಮ್ಮನವರೇ, ಅವನು ತುಂಬಾ ವಕ್ರ ಹುಡುಗ. ಅವನ ಮನಸ್ಸಿನ ರೀತಿಯೇ ತಿಳಿಯುವುದಿಲ್ಲ. ಕೆಲವು ಬಾರಿ ನನ್ನ ಜೊತೆ ಅಷ್ಟು ಸಲಿಗೆಯಾಗಿರುತ್ತಾನೆ. ಕೆಲವು ಸಲ ಎದುರಿಗೆ ಕಂಡರೂ ಹಾಗೇ ಹೋಗುತ್ತಾನೆ. ಅವನ ಮನಸ್ಸಿನ ಆಳವೇ ತಿಳಿಯುವುದಿಲ್ಲ. ಅಂತಹವನಿಗೆ ಹೆಣ್ಣು ಕೊಡುವುದಕ್ಕಿಂತ ಸುಮ್ಮನಿರುವುದು ಮೇಲು" ಎಂದರು. ಕಮಲೂಗೆ ಯಾವ ವಿಷಯವೂ ತಿಳಿಯದೇ ಇದ್ದುದರಿಂದ ಅವಳು ನಗುತ್ತಾ ಸಲಿಗೆಯಿಂದ ಭಾರತಿಯೊಡನೆ ಮಾತನಾಡತೊಡಗಿದಳು. ಆದರೆ ಭಾರತಿಗೆ ಅವಳೊಡನೆ ಮಾತನಾಡುವ ಉತ್ಸಾಹವಿರಲಿಲ್ಲ. ಚಂದು ಮುಖ ದಪ್ಪಗೆ ಮಾಡಿಕೊಂಡು ಎದ್ದು ಹೋದೊಡನೆ ಆನಂದನೂ ಅವನ

ನೆ ಎದ್ದು ಹೋದ.

ಚಂದುವಿನೊಡನೆ ಆನಂದ ಕಾಂಪೌಂಡಿನಲ್ಲಿ ಕುಳಿತು ಕೇಳಿದ.

"ಯಾಕೋ ಚಂದು ಎದ್ದು ಬಂದುಬಿಟ್ಟೆ ?"

"ಹುಡುಗಿಯನ್ನು ನೋಡುವ ಮನಸ್ಸಿರಲಿಲ್ಲ. ಆದುದರಿಂದ ಬಂದು ಬಿಟ್ಟೆ."

"ಛೀ, ಹಾಗೆ ಮಾಡಬಾರದಾಗಿತ್ತು. ಅವರೇನು ತಿಳಿದುಕೊಳ್ಳು ತ್ತಾರೆ ಹೇಳು. ಹುಡುಗಿಯೂ ಲಕ್ಷಣವಾಗಿದಾಳೆ ......."

"ಸುಮ್ಮನಿರು ಆನಂದ ನನಗೆ ಬೇಕಾದ ಹುಡುಗಿ ಈ ಪ್ರಪಂಚ ದಲ್ಲಿಲ್ಲ."

ಆನಂದ ನಗುತ್ತಾ "ದೇವಲೋಕದ ರಂಭೆ ನಿನಗೆ ಹಾರ ಹಾಕೋಕೆ ಬರಬೇಕೇನು ?" ಎಂದ.

"ಈಗ ನಾನು ಹಾಗೆ ಹೇಳಿದೆನೇ ?"

"ನೀವೆಲ್ಲಾ ಕಲೋಪಾಸಕರು. ಅಪೂರ್ವ ಸೌಂದರ್ಯ ಹುಡುಕು ತ್ತೀರಿ. ಆದರ ನಾನು ನಿನ್ನ ಹಾಗಲ್ಲ. ಪಾಲಿಗೆ ಬಂದದ್ದು ಪರಮಾನ್ನ ಅಂತ ತಿಳಿಯುತ್ತೇನೆ."

"ನಿಜವಾಗಿಯೂ ಪರಮಾನ್ನವೇ ಸಿಕ್ಕಿರುವುದರಿಂದ ಈ ಮಾತು ಧೈರ್ಯವಾಗಿ ಆಡುತ್ತೀಯಲ್ಲವೇ" ಎಂದು ಚಂದು ಹೇಳಿದಾಗ ಅವನ ದನಿ ಅಸೂಯೆಯಿಂದ ಕೂಡಿತ್ತು

"ಹಾಗಲ್ಲ ಚಂದು........"

"ನನಗೆ ನಿದ್ದೆ ಬರುತ್ತಿದೆ. ಇನ್ನು ಮಲಗಿಕೊಳ್ಳೋಣ" ಎಂದು ಚಂದು ಮುಂದೆ ಆನಂದನಿಗೆ ಮಾತನಾಡಲು ಅವಕಾಶ ಕೊಡಲಿಲ್ಲ.

ಮಾರನೆಯ ದಿನವೇ ಚಂದು ಊರಿಗೆ ಹೊರಟುನಿಂತ. ಸರೋಜಮ್ಮ ನವರಿಂದ ಮೊದಲಾಗಿ ಆನಂದ, ವೇದಮ್ಮ ಎಲ್ಲರೂ ಅವನಿಗೆ ಅಮೊಂದು ದಿನವಿದ್ದು ಹೋಗಲು ಹೇಳಿದರೂ ಚಂದು ಒಪ್ಪಲಿಲ್ಲ.

"ಸ್ಕೂಲಿಗೆ ರಜವಿಲ್ಲ. ಇನ್ನಾವಾಗಲಾದರೂ ಬರುತ್ತೇನೆ" ಎಂದು ಹೇಳಿದ. ಅವನು ಊರಿಗೆ ಹೊರಟಾಗ ಭಾರತಿ ಒಳಗಿದ್ದಳು. ಚಂದು ಸುತ್ತಲೂ ನೋಡಿ ಭಾರತಿ ಕಾಣದಿರಲು ಆನಂದನಿಗೆ,

"ನಿನ್ನವಳಿಗೆ ಹೇಳಿಬಿಡಪ್ಪಾ. ನಾನು ಹೊರಡುತ್ತೇನೆ" ಎಂದ.

"ತಾಳು, ಅವಳನ್ನೇ ಕರೆಯುತ್ತೇನೆ."

"ಬೇಡ, ಆನಂದ. ನನ್ನ ಪರವಾಗಿ ನೀನೇ ಹೇಳಿಬಿಡು" ಎಂದು

ಚಂದು ಹೇಳಿದರೂ ಕೇಳದೆ ಆನಂದ ಒಳಗಿದ್ದ ಹೆಂಡತಿಯನ್ನು
ಕೊಂಡು ಬಂದ. ಚಂದು ಭಾರತಿಗೆ ಕೈಮುಗಿದು,

"ಹೊರಡುತ್ತೇನಮ್ಮ" ಎಂದ.

"ನೀವು ಬಂದಿದ್ದು ತುಂಬಾ ಸಂತೋಷವಾಯಿತು."

"ಆನಂದನ ಮದುವೆಗೆ ನಾನು ಬರದಿದ್ದರಾಗುತ್ತದೆಯೇ" ಎಂ
ಔಪಚಾರಿಕವಾಗಿ ನುಡಿದ ಚಂದು. ಆ ಬಳಿಕ ಅಲ್ಲಿಂದ ಹೊರಟುಬಿಟ್ಟ.

## ೭

ಸಂಜೆ ಆನಂದ ಭಾರತಿಯೊಡನೆ ಚಿತ್ರ ನೋಡಲು ಬಯಸಿದ. ಅವನ ಬಯಕೆಯನ್ನು ಹಿರಿಯರು ಪ್ರೋತ್ಸಾಹಿಸಿದರು. ಆನಂದನೇನೋ ತಾಯಿ, ತಂದೆ, ಅತ್ತೆ, ಮಾವ ಎಲ್ಲರನ್ನೂ ಕರೆದ. ಹೊಸ ಗಂಡ ಹೆಂಡಿರ ನಡುವೆ ಹೋಗಲು ಮನಸ್ಸೊಪ್ಪದೇ ಎಲ್ಲರೂ ಒಂದೊಂದು ನೆವ ಹೇಳಿ ತಪ್ಪಿಸಿಕೊಂಡರು. ವಾಣಿ, ರಾಜಾರಾಮರೇನೋ ಅಕ್ಕ, ಭಾವನೊಡನೆ ಹೊರಡಲು ತುದಿಗಾಲಿನಲ್ಲಿ ನಿಂತಿದ್ದರು. ಸರೋಜಮ್ಮ ಅವರಿಬ್ಬರನ್ನೂ ತಡೆದು ನಿಲ್ಲಿಸಿದರು. ಕೊನೆಗೆ ಮನೆ ಬಿಟ್ಟು ಹೊರಟವರು ಆನಂದ, ಭಾರತಿ ಮಾತ್ರ.

"ಅಂತೂ ನಾವಿಬ್ಬರೇ ಹೊರಡಬೇಕಾಯಿತು."

"ಅವರು ಯಾರೂ ಬರುವುದಿಲ್ಲ ಎಂದಮೇಲೆ ಏನು ಮಾಡುವುದು ?"

"ನಮ್ಮಿಬ್ಬರೊಡನೆ ಅವರೂ ಬರಲಿ ಎಂದು ನಿನ್ನ ಮನಸ್ಸಿನಲ್ಲಿತ್ತೇ ?"

ಭಾರತಿ ಉತ್ತರ ಹೇಳದೇ ನಕ್ಕಳು.

"ನನಗೇನೋ ನಾವಿಬ್ಬರೇ ಹೋಗಬೇಕೆನಿಸಿದ್ದರೂ ಅವರನ್ನೂ ಸುಮ್ಮನೆ ಕರೆದೆ. ನನ್ನ ಮನಸ್ಸು ತಿಳಿದು ಅವರು ಯಾರೂ ಬರುವುದಿಲ್ಲ ಎಂದರು."

"ಈಗ ಎಲ್ಲಿಗೆ ಹೋಗೋಣ ?" ಭಾರತಿ ಕೇಳಿದಳು.

"ಎಲ್ಲಿಗಾದರೂ ಹೋಗಲೇಬೇಕೆ ?"

"ಮತ್ತೆ ಮನೆಯಲ್ಲಿ ಚಿತ್ರಕ್ಕೆ ಎಂದು ಹೇಳಿ ಹೊರಟಿದ್ದೀವಲ್ಲ."

"ಸಿನೀಮಾಗೆ ಬೇಡ."

"ಯಾಕೆ ?"

"ಗುಂಪು ಬಹಳವಿರುತ್ತದೆ."

"ಇಬ್ಬರಿಗೋಸ್ಕರ ಯಾರೂ ಸಿನಿಮಾ ಬಿಡುವುದಿಲ್ಲ."

"ನಾವಿಬ್ಬರೇ ಬೇರೆಲ್ಲಿಗಾದರೂ ಈ ಜನಗಳ ಗುಂಪಿನಿಂದ ದೂರವಾಗಿ ಹೋಗಬಹುದಲ್ಲವೇ ?"

"ಮನೆಯಲ್ಲಿ ಯಾವ ಚಿತ್ರಕ್ಕೆ ಹೋಗಿದ್ದಿರಿ ಎಂದು ಕೇಳಿದರೆ ?"

"ಸುಳ್ಳು ಹೇಳಿದರಾಯಿತು."

ಮಾತನಾಡುತ್ತಾ ಇಬ್ಬರೂ ಚಾಮುಂಡಿ ಬೆಟ್ಟದ ಹತ್ತಿರ ಬಂದರು. ಊರು ದೂರವಾದಂತೆ ಜನಸಂಚಾರ ಕಡಿಮೆಯಾಗಿತ್ತು. ಭಾರತಿ ಸೋಲು ದನಿಯಲ್ಲಿ 'ಇನ್ನು ನಾನು ನಡೆಯಲಾರೆ. ಇಲ್ಲೇ ಕುಳಿತುಕೊಳ್ಳೋಣ' ಎಂದಳು.

'ಅಪ್ಪಣೆ' ಎನ್ನುತ್ತಾ ಆನಂದ ಅಲ್ಲಿಯೇ ಉರುಳಿ ಬಿದ್ದಿದ್ದ ದೊಡ್ಡ ಕಲ್ಲು ಬಂಡೆಯ ಮೇಲಿದ್ದ ಧೂಳನ್ನು ಕರ್‌ಚೀಫಿನಿಂದ ಒರಸಿ,

"ಈ ಪೀಠವನ್ನಲಂಕರಿಸಿ" ಎಂದ.

ಭಾರತಿ ನಿರಿಗಳನ್ನು ಮುದುರಿ ಬಂಡೆಯ ಮೇಲೆ ಕುಳಿತು 'ನೀವು?' ಎಂದಳು.

"ನಾನು ರಾಣಿಯವರ ಹತ್ತಿರ ನಿಂತಿರುತ್ತೇನೆ. ಇದು ಎಷ್ಟೇ ಆಗಲಿ ಊರಿನಿಂದ ದೂರವಾದ ಪ್ರದೇಶ. ಯಾವನಾದರೂ ರಾಕ್ಷಸ ನನ್ನ ಹುಡುಗಿಯನ್ನು ನೋಡಿ ಮೋಹಿನಿ ಎಂದು ತಿಳಿದು ಅಪಹರಿಸದಂತೆ ನಾನು ಕಾವಲಿರುತ್ತೇನೆ."

ಭಾರತಿ ಕೋಪದಿಂದ ಹುಬ್ಬುಗಂಟಿಕ್ಕಿ 'ಶುರುವಾಯಿತು' ಎಂದಳು.

"ನೀನೆಷ್ಟು ಚೆಲುವೆ ಗೊತ್ತೆ ?"

"ಸರಿ. ಇದು ಹೇಳೋಕೆ ಮನೆಯಿಂದ ಇಷ್ಟು ದೂರ ಕರೆದುಕೊಂಡು ಬಂದಿರೇನೋ? ನಿಮಗೆ ಯಾವಾಗಲೂ ನನ್ನ ಹೊಗಳುತ್ತಿರುವುದನ್ನು ಬಿಟ್ಟರೆ ಬೇರೆ ಕೆಲಸವಿಲ್ಲವೇ ?"

"ನನ್ನ ಈ ದುರ್ಬಲತೆಗೆ ನೀನೇ ಕಾರಣ. ನೀನೇಕೆ ಇಷ್ಟೊಂದು ಚೆನ್ನಾಗಿದೇಯೆ ?"

"ನಾನು ಚೆನ್ನಾಗಿಲ್ಲ ಎಂದುಕೊಂಡು ಬಿಡಿ."

"ಚೆನ್ನಾನ ಹಿತ್ತಾಳೆ ಎಂದು ಎಸೆಯಲು ಸಾಧ್ಯವೇ ?"

ಸೂರ್ಯ ಮುಳುಗುತ್ತಿದ್ದ. ಹಕ್ಕಿಗಳು ಗೂಡು ಸೇರುತ್ತಿದ್ದವು. ಬೆಟ್ಟದ ಮೇಲಿನಿಂದ ಬೀಸಿ ಬರುವ ತಂಗಾಳಿಗೆ ಭಾರತಿ ಮೈಯೊಡ್ಡಿ ಕುಳಿತಳು. ಆನಂದ ಸುತ್ತಲೂ ತಿರುಗಿ ಸಿಂಹಾವಲೋಕನ ಮಾಡಿದ.

"ಅದೇನು ಹಾಗೆ ಸುತ್ತಲೂ ನೋಡ್ತಿದೀರ ?"

"ಯಾರಾದರೂ ಬರುತ್ತಿದಾರೋ ಇಲ್ಲವೋ ಅಂತ ನೋಡಿದೆ"

"ಯಾರೂ ಬಾರದಿರುವುದಕ್ಕೆ ಇವೇನು ನಮ್ಮ ಉದ್ಯಾನವನವೇ...."

ಆನಂದ ಭಾರತಿಗೆ ವಾಕ್ಯ ಪೂರ್ತಿಮಾಡಲು ಅವಕಾಶ ಕೊಡಲಿಲ್ಲ. ಎಲೆಗಳ ಮರ್ಮರ ಸದ್ದಿಗೆ ಭಾರತಿ ಬೆಚ್ಚಿ ಆನಂದನನ್ನು ದೂರ ತಳ್ಳಿದಳು. ಆನಂದ ಎರಡು ಹೆಜ್ಜೆ ಹಿಂದೆ ನಿಂತು ಹೆಂಡತಿಯ ಕಡೆ ನೋಡಿದ. ಭಾರತಿಯ ಮುಖ ರಕ್ತದ ಹೊಂಡದಲ್ಲಿ ಅದ್ದಿ ತೆಗೆದಂತಾಗಿತ್ತು. ಉದ್ವೇಗ ದಿಂದ ಕಣ್ಣುಗಳು ನಕ್ಷತ್ರಗಳಂತೆ ಹೊಳೆಯುತ್ತಿದ್ದವು.

ತಾನು ಕಾದಂಬರಿಗಳಲ್ಲಿ ಓದಿ ಊಹಿಸಿದ್ದುದಕ್ಕಿಂತಲೂ, ಈ ಒಂದು ಅನುಭವ ಅವಳಿಗೆ ಹೆಚ್ಚು ಕಲಿಸಿತು. ಏನೋ ಒಂದು ವಿಧವಾದ ಅತೃಪ್ತಿ ಯಿಂದ ಮನಸ್ಸು ಕುದಿಯಿತು.

"ಇದೇನಿದು, ಇಲ್ಲೆಲ್ಲಾ ಹುಡುಗಾಟ ಆಡ್ತೀರಿ ?"

"ಹಾಗಾದರೆ ನಾವು ಮುದುಕರಾಟ ಆಡಬೇಕೇನು? ಕದ್ದಮಾಲಿಗೆ ಬೆಲೆಯೂ ಹೆಚ್ಚು, ರುಚಿಯೂ ಉಂಟು."

"ಕದ್ದಮಾಲು ಎಲ್ಲಿಂದ ಬಂತು? ನಾನು ನಿಮ್ಮವಳೇ ಅಲ್ಲವೇ ?"

"ನೀನು ನನ್ನವಳು ನಿಜ. ಆದರೂ ಇದು ಬಯಲು ಸ್ಥಳ. ಸುತ್ತಲೂ ನೋಡಿ ಯಾರಾದರೂ ಬರಬಹುದು ಎಂದಂಜಿ ತಟ್ಟನೆ ಮುತ್ತು ಕದಿಯು ವುದರಲ್ಲಿ ಹೆಚ್ಚು ಸ್ವಾರಸ್ಯವಿದೆ."

ಕತ್ತಲಾಗುತ್ತಾ ಬಂದು ಒಬ್ಬರ ಮುಖ ಒಬ್ಬರಿಗೆ ಕಾಣಿಸದಂತಾಗಲು ಭಾರತಿ ಎದ್ದು ನಿಂತು 'ಹೊರಡೋಣವೇ' ಎಂದಳು.

"ಅಷ್ಟೊಂದು ಆತುರ ಯಾಕೆ ?"

"ಆತುರವೇನಿಲ್ಲ. ಆದರೆ ಮನೆಯಲ್ಲಿ ಅವರೆಲ್ಲಾ ನಮಗಾಗಿ ಕಾಯು ತ್ತಿರುತ್ತಾರೆ"

ಇಬ್ಬರೂ ಮನೆಯ ಕಡೆ ಹೊರಟರು. ಆನಂದ ಭಾರತಿಯ ಕೈ ಹಿಡಿದುಕೊಂಡ. ಭಾರತಿ ಕೈ ಕೊಸರಿ "ಯಾರಾದರೂ ನೋಡಿದರೆ" ಎಂದಳು.

"ಇಲ್ಲಿ ಯಾರಿದಾರೆ. ಜನಸಂಚಾರ ಬಂದ ಮೇಲೆ ಕೈ ಬಿಡುತ್ತೇನೆ. ಅದುವರೆವಿಗೂ ನಿನ್ನ ಕೈ ನನ್ನ ಕೈಲಿರಲಿ"

ಇದ್ದಕ್ಕಿದ್ದಂತೆಯೇ ಭಾರತಿ ಹೇಳಿದಳು 'ನಿಮ್ಮ ಚಂದು ವಿಚಿತ್ರ ಮನುಷ್ಯ."

"ಅವನ ವಿಚಿತ್ರಾನ ನೀನು ಏನು ನೋಡಿದೆ?"

"ಆ ಮನುಷ್ಯ ಎಲ್ಲರ ಹಾಗಲ್ಲ ಎನಿಸಿತು. ನೋಡಬೇಕಾದರೂ ಅಷ್ಟೇ; ಕಣ್ಣಿನಿಂದಲೇ ನುಂಗಿಬಿಡುವ ಹಾಗೆ ನೋಡುತ್ತಾರೆ."

ಆನಂದ ನಗುತ್ತಾ 'ಚಂದು ಸೌಂದರ್ಯದ ದಾಸ. ಮೇಲಾಗಿ ಕಲಾವಿದ. ನೀನು ಅನುಪಮ ಸುಂದರಿ. ಸುಂದರವಾದ ವಸ್ತುಗಳನ್ನೆಲ್ಲಾ ಆವನು ಹಾಗೆಯೇ ನೋಡುತ್ತಾನೆ. ಒಂದಲ್ಲ ಒಂದು ದಿನ ನಿನ್ನ ಚಿತ್ರ ಅವನ ಕುಂಚದಿಂದ ಶಕುಂತಲೆಯಾಗಿಯೋ, ಪಾರ್ವತಿಯಾಗಿಯೋ ಹೊರ ಬೀಳಬಹುದು. ಹಾಗೆ ನೋಡಿದರೆ ತಪ್ಪೇನು?' ಎಂದ.

"ತಪ್ಪೇನಿಲ್ಲ ಅವರೇಕೆ ಮದುವೆ ಮಾಡಿಕೊಂಡಿಲ್ಲ?"

"ಅವನ ಮನಸ್ಸೊಪ್ಪುವ ಹೆಣ್ಣು ಇನ್ನೂ ಸಿಕ್ಕಿಲ್ಲವಂತೆ."

"ಚಿತ್ರವೇನೋ ತುಂಬಾ ಚೆನ್ನಾಗಿ ಬರೆಯುತ್ತಾರೆ. ಆದರೂ ಆ ನಗ್ನ ಚಿತ್ರ........"

ಹೆಂಡತಿಯ ಮಾತು ಕೇಳಿ ಆನಂದನಿಗೆ ನಗು ಬಂದಿತು.

'ಅದರಲ್ಲಿ ತಪ್ಪೇನು? ಸುಂದರವಾದ ವಸ್ತುಗಳನ್ನು ಆರಿಸಿ ಬರೆಯುವುದು ಕಲಾವಿದರ ಹುಟ್ಟುಗುಣ. ಸುಂದರವಾದ ಹೂವು ಚಿತ್ರಿಸಿದರೆ ತಪ್ಪಿಲ್ಲ. ಬೆದರಿದ ಹರಿಣಿ ಬರೆದರೆ ತಪ್ಪಿಲ್ಲ. ಹಾಗೆಯೇ ಸುಂದರವಾದ ದೇಹ ಚಿತ್ರಿಸಿದರೆ ತಪ್ಪೇನು?'

"ನನಗೇನೋ ಅದು ಸರಿಯಾಗಿ ತೋರಲಿಲ್ಲ."

"ಹಾಗೆ ಹೇಳಬೇಡ ಭಾರತಿ. ವಿಶಾಲ ದೃಷ್ಟಿಯಿಂದ ಆ ಚಿತ್ರ ನೋಡು. ನನಗೇನೋ ಆ ಚಿತ್ರ ತುಂಬಾ ಇಷ್ಟವಾಯಿತು. ಅವನು ತಂದಿದ್ದ ಮುತ್ತಿನ ಹಾರ ನಿನಗೆ ಒಪ್ಪಿಗೆಯಾಯಿತೇ?"

"ಹೂಂ. ನಾನು ಹಾಕಿಕೊಂಡಿದೀನಿ. ನೀವು ನೋಡಲಿಲ್ಲವೇ?"

"ನಾನು ನೋಡಲಿಲ್ಲ. ಎಲ್ಲಿ ತೋರಿಸು?"

"ಈಗ ಬೇಡ. ಮನೆಯಲ್ಲಿ ತೋರಿಸುತ್ತೇನೆ."

"ಮನೆಗೆ ಹೋದ ಮೇಲೆ ನೀನು ನನ್ನ ಕೈಗೆ ಸಿಗುತ್ತೀಯೋ, ಇಲ್ಲವೋ?"

"ಖಂಡಿತ ಬಂದು ತೋರಿಸುತ್ತೇನೆ" ಎಂದು ಭಾರತಿ ಪ್ರಮಾಣ ಮಾಡಿದ ಮೇಲೆ ಆನಂದ ಸುಮ್ಮನಾದ.

ಮನೆಯವರೆಲ್ಲ ದಂಪತಿಗಳನ್ನು ಕಾದುಕೊಂಡು ಊಟಮಾಡದೇ ಕುಳಿತಿದ್ದರು. ಸೀತಾರಾಮಯ್ಯನವರು ಮಗಳು, ಅಳಿಯ ಬಂದೊಡನೆ,

"ಪಿಕ್ಚರ್ ಹೇಗಿತ್ತು ?" ಎಂದರು.

"ಸುಮಾರಾಗಿತ್ತು" ಎಂದು ಹೇಳಿ ಆನಂದ ಭಾರತಿಯ ಕಡೆ ನೋಡಿ ನಕ್ಕ.

ಊಟವಾದ ಮೇಲೆ ಆನಂದನಿಗೆ ಎಲೆ, ಅಡಿಕೆ ಮಡಿಸಿಕೊಡುವ ನೆಪದಲ್ಲಿ ಭಾರತಿ ರೂಮಿಗೆ ಬಂದಳು. ಆನಂದ ಕುರ್ಚಿಯ ಮೇಲೆ ಕಣ್ಣು ಮುಚ್ಚಿ ಕುಳಿತಿದ್ದ.

"ಎಲೆ ಅಡಿಕೆ ತಂದಿದೀನಿ."

ಆನಂದ ಕಣ್ಣು ಬಿಟ್ಟ.

"ನನ್ನ ಸರ ನೋಡಿ. ಬೇಗ...ಯಾರಾದರೂ ಬಂದುಬಿಡಬಹುದು."

"ಬಂದರೆ ಬರಲಿ. ಹೆದರಿಕೆಯೇನು? ಇನ್ನೂ ಹತ್ತಿರ ಬಾ " ಆನಂದ ಭಾರತಿಯ ಕೈ ಹಿಡಿದು ಹತ್ತಿರಕ್ಕೆಳೆದುಕೊಂಡು ಅವಳ ಕೊರಳಿನ ಕಡೆ ನೋಡಿದ. ದುಂಡಾದ, ಮೃದುವಾದ ಬಿಳಿಗೊರಳಿಗೆ ಸರ ಹೇಳಿ ಮಾಡಿಸಿ ದಂತಿತ್ತು.

"ಮುತ್ತಿನ ಸರ ಚೆನ್ನಾಗಿಲ್ಲವೇ ?" ಭಾರತಿ ಗಂಡನನ್ನು ಕೇಳಿದಳು.

"ಸಂಜೆ ನಾನು ಕೊಟ್ಟ........" ಆನಂದ ಅರ್ಥಪೂರ್ಣವಾಗಿ ಅವಳ ಕಡೆ ನೋಡಿದ.

"ಅದಕ್ಕೂ, ಇದಕ್ಕೂ ಹೋಲಿಸಲೇ ಬೇಡಿ........"

ಹೊರಗೆ ಹೆಜ್ಜೆಯ ಸದ್ದಾಯಿತು. ಭಾರತಿ ಹೆದರಿ 'ನಿಮ್ಮ ದಮ್ಮಯ್ಯ. ಕೈಬಿಡಿ.. ನಾನು ಹೋಗಬೇಕು' ಎಂದಳು. ,ಆನಂದ ಕೊಂಚ ಅಸಮಾಧಾನದಿಂದಲೇ ಅವಳ ಕೈ ಬಿಟ್ಟ.

ಮರುದಿವಸ ಆನಂದ, ವೇದಮ್ಮ, ರಂಗಣ್ಣನವರು ಬೆಂಗಳೂರಿಗೆ ಹೊರಟರು. ಹೊರಡುವುದಕ್ಕೆ ಮುಂಚೆ ವೇದಮ್ಮನವರು ಭಾರತಿಯನ್ನು ಕರೆದು ಹತ್ತಿರ ಕೂರಿಸಿಕೊಂಡು ತಲೆ ನೇವರಿಸಿ,

"ನಮ್ಮ ಮನೆಗೆ ಬೇಗ ಬಂದುಬಿಡು ತಾಯಿ. ಬಹಳ ದಿನ ನಮ್ಮನ್ನು ಬಿಟ್ಟಿರಬೇಡ" ಎಂದರು.

ಆನಂದನಿಗೆ ಹೆಂಡತಿಯನ್ನು ಬಿಟ್ಟು ಹೊರಡುವ ಮನಸ್ಸಿರಲಿಲ್ಲ. ಹೆಚ್ಚು ದಿನ ರಜವಿಲ್ಲದುದರಿಂದ ಅವನು ಊರಿಗೆ ಹೊರಡಲೇಬೇಕಾಗಿತ್ತು. ತನ್ನ ಮಡದಿಯನ್ನೂ ಜೊತೆಯಲ್ಲಿಯೇ ಕರೆದೊಯ್ಯಬಾರದೇಕೆ? ಹಾಗೆಂದು ತಾಯಿಗೆ ಹೇಳುವವರು ಯಾರು? ತಾನೇ ಹೇಳಬೇಕು. 'ಹೆಂಡತಿಯನ್ನು ಬಿಟ್ಟಿರಲಾರೆ. ಅವಳೂ ನಮ್ಮೊಡನೆ ಬರಲಿ' ಎಂದು ಹೇಳಲು ಅವನಿಗೆ

ಸಂಕೋಚವಾಯಿತು. ಹೆಂಡತಿಯ ಮರುಳುಗೊಳಿಸುವ ಮುಖ ಕಣ್ಣೆದುರಿಗೆ ತೇಲಿ ಬಂತು. ಆನಂದ ಧೈರ್ಯತಾಳಿ ತಾಯಿಯ ಹತ್ತಿರ ಬಂದ. ವೇದಮ್ಮ ಭಾರತಿಗೆ ಗುಲಾಬಿ ಹೂ ಮುಡಿಸುತ್ತಿದ್ದರು.

"ಅಮ್ಮ, ಈಗ ಊರಿಗೆ ಹೊರಡುವವರು ಯಾರು ?"

ಅವನ ಮಾತಿನ ಜಾಡು ತಿಳಿಯದೇ ವೇದಮ್ಮ 'ನಾನು, ನೀನು, ಅವರು' ಎಂದರು.

"ಭಾರತಿ ಬರುವುದಿಲ್ಲವೇ" ಆನಂದ ಧೈರ್ಯವಾಗಿ ಕೇಳಿದ. ಭಾರತಿ ಕೃತಜ್ಞತೆಯಿಂದ ಗಂಡನ ಕಡೆ ನೋಡಿದಳು. ಗಂಡನನ್ನಗಲಿರುವುದೆಂದರೆ ಅವಳಿಗೂ ಆನಂದನಷ್ಟೇ ದುಃಖವನ್ನುಂಟುಮಾಡಿತ್ತು. ವೇದಮ್ಮ ಮಗನ ಮನಸ್ಸರಿತು ನಗು ನುಂಗಿ,

"ಮಗೂ, ಭಾರತಿ ಈಗ ಬೇಡ. ಇನ್ನು ಹದಿನೈದು ದಿನಕ್ಕೆ ಒಳ್ಳೇ ಲಗ್ನವಿದೆ. ಆಗ ಬಂದು ಕರೆದುಕೊಂಡು ಹೋಗೋಣ" ಎಂದರು.

"ಈಗ ಒಳ್ಳೇ ಲಗ್ನವಿಲ್ಲವೇನಮ್ಮ?"

ಮಗ ಹೆಂಡತಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗಲು ಆತುರ ಪಡುತ್ತಿರುವುದು ಅವರಿಗೆ ತಿಳಿಯಿತು. ಚಿಕ್ಕ ವಯಸ್ಸಿನ ಗಂಡ, ಹೆಂಡತಿ ಜೊತೆಯಲ್ಲಿರಲು ಬಯಸುವುದು ಸಹಜ. ಆದರೆ ಸಂಪ್ರದಾಯಕ್ಕೆ ಕಟ್ಟು ಬಿದ್ದ ಮನಸ್ಸು ಆನಂದನ ಸೂಚನೆಯನ್ನು ಪ್ರತಿಭಟಿಸಿತು. ಮಗನಿಗೆ ಏನು ಹೇಳಲೂ ತೋರದೆ ಸೊಸೆಯ ಕಡೆ ನೋಡಿದರು. ಭಾರತಿ ಗಂಡನ ಕಡೆ ಬೇಡುಗಣ್ಣುಗಳಿಂದ ನೋಡುತ್ತಿದ್ದಳು. ಗಂಡನೊಡನೆ ಹೋಗುವ ಆತುರ, ಕಾತುರ, ಆಸೆ ಅವಳ ಮುಖದಲ್ಲಿ ಸ್ಪಷ್ಟವಾಗಿ ಮೂಡಿತ್ತು. ಅದನ್ನು ನೋಡಿ ವೇದಮ್ಮನಿಗೆ ಮಗ, ಸೊಸೆಗಿಂತಲೂ ಹೆಚ್ಚು ವ್ಯಥೆಯಾಯಿತು. ಆದರೆ ಮಾಡುವುದೇನು? ಹದಿನೈದು ದಿನಕ್ಕೆ ಮುಂಚೆ ಒಳ್ಳೆಯ ದಿನವಿರಲಿಲ್ಲ. ವೇದಮ್ಮ ಕುಗ್ಗಿದ ದನಿಯಲ್ಲಿ

'ನಾನೇನು ಮಾಡಲಿ ಮಗು ? ಜೋಯಿಸರನ್ನು ವಿಚಾರಿಸಿದೆ. ಇನ್ನು ಹದಿನೈದು ದಿನ................' ತಾಯಿ ಮಾತು ಮುಗಿಸುವುದಕ್ಕೆ ಮುಂಚೆ ಆನಂದ ಆ ಜಾಗದಿಂದ ಸರಿದುಹೋದ.

## ೮

ಆನಂದ ಊರಿಗೆ ಹೊರಟುಹೋದ ಮೇಲೆ ಭಾರತಿಗೆ ಮನೆಯೇ ಬರಿದಾದಂತೆ ತೋರಿತು. ಆನಂದನ ಪ್ರೀತಿಯ ನುಡಿಗಳು, ಸವಿಯಾದ

ಸ್ನೇಹ ಇವುಗಳಿಂದ ದೂರವಿರುವುದು ಅವಳಿಗೆ ಖೇದವನ್ನುಂಟುಮಾಡಿತ್ತು. ಮಧುರ ಸನ್ನಿವೇಶಗಳನ್ನು ನೆನೆದು ಕನಸು ಕಟ್ಟುವುದೇ ಅವಳ ಕೆಲಸ ವಾಯಿತು. ಆನಂದ ಊರಿಗೆ ಸೇರಿದ ಮಾರನೆಯ ದಿನವೇ ಭಾರತಿಗೆ ಕಾಗದ ಬರೆದಿದ್ದ. ಕಾಗದ ಬಂದೊಡನೆ ಭಾರತಿ ಕಾಗದ ತೆಗೆದುಕೊಂಡು ರೂಮಿಗೆ ಹೋಗಿ ರೂಮಿನ ಬಾಗಿಲನ್ನು ಹಾಕಿಕೊಂಡು, ನಾಲ್ಕು ಪುಟದ ಕಾಗದವನ್ನು ನಲವತ್ತು ಬಾರಿ ಓದಿದಳು. ಆದರೂ ಅವಳಿಗೆ ತೃಪ್ತಿಯಾಗ ಲಿಲ್ಲ. ರೂಮಿನಿಂದ ಹೊರಗೆ ಬರುತ್ತಲೇ ಸರೋಜಮ್ಮ

"ಏನು ಬರೆದಿದಾರೆ" ಎಂದರು.

"ಆಂ....ಊಂ....ಏನೂ ಇಲ್ಲ." ಅಷ್ಟು ದೊಡ್ಡ ಕಾಗದದಲ್ಲಿ ತಾಯಿಗೆ ಹೇಳತಕ್ಕ ವಿಷಯ ಏನೂ ಇಲ್ಲದಿದ್ದುದು ಭಾರತಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿತು. ಹದಿನೈದು ದಿನಗಳಲ್ಲಿ ಆನಂದ ಭಾರತಿಗೆ ಎಂಟು ಕಾಗದ ಗಳನ್ನು ಬರೆದಿದ್ದ. ಮನಸ್ಸಿಗೆ ಬೇಸರವಾದಾಗಲೆಲ್ಲ ಆ ಕಾಗದಗಳನ್ನು ತೆಗೆದು ಓದಿ ಬೇಜಾರು ಪರಿಹಾರ ಮಾಡಿಕೊಳ್ಳುತ್ತಿದ್ದಳು.

ಅತ್ತ, ಮಾವ ನಾಳೆ ಬರುತ್ತಾರೆ ಎನ್ನುವಾಗ ಸೀತಾರಾಮಯ್ಯ ನವರಿಗೆ ರಂಗಣ್ಣನವರಿಂದ ಕಾಗದ ಬಂತು. ಆ ಕಾಗದ ಕೈಲಿ ಹಿಡಿದೇ ಸೀತಾರಾಮಯ್ಯನವರು ಅಡಿಗೆ ಮನೆಯ ಬಾಗಿಲಿಗೆ ಬಂದು,

"ರಂಗಣ್ಣನವರಿಂದ ಕಾಗದ ಬಂದಿದೆ. ಅವರು ನಾಳೆ ಬರುತ್ತಾರೆ. ನಾಡಿದ್ದು ಭಾರತೀನ ಕರೆದುಕೊಂಡು ಹೋಗ್ತೀವಿ ಅಂತ ಬರೆದಿದಾರೆ" ಎಂದರು.

"ಯಾವಾಗ ಬರ್ತಾರಂತೆ ?"

"ಬೆಳಗಿನ ಟ್ರೈನಿಗೆ ಬರುತ್ತಾರೆ. ಈಗ ಮಾರ್ಕೆಟ್ಟಿಗೆ ಹೋಗುತ್ತೇನೆ. ನಾಳೆಗೆ ಏನೇನು ತರಬೇಕು ಅಂತ ಗುರುತು ಹಾಕಿಕೊಡು."

ಸರೋಜಮ್ಮ ತಮಗೆ ಬೇಕಾದ ಸಾಮಾನುಗಳನ್ನು ಒಂದು ಚೀಟಿ ಯಲ್ಲಿ ಗುರುತು ಹಾಕಿಕೊಟ್ಟರು. ಸೀತಾರಾಮಯ್ಯನವರು ಕೋಟು ಹಾಕಿ ಕೊಂಡು ತಲೆಗೆ ಬೂದುಬಣ್ಣದ ಟೋಪಿಯಿಟ್ಟು ಹೊರಟರು.

ತಾಯಿ, ತಂದೆಯ ಮಾತುಗಳನ್ನು ಮರೆಯಲ್ಲಿ ನಿಂತು ಕೇಳಿದ ಭಾರತಿ ಅವರ ಮಾತು ಮುಗಿದೊಡನೆ ರೂಮಿಗೆ ಓಡಿ ಹೋದಳು. ಅವಳ ಹೃದಯ ವಸಂತಕಾಲದ ನವಿಲಿನಂತೆ ಕುಣಿಯಿತು.

"ನಾಳೆ ಅವರು ಬರ್ತಾರೆ! ಆಗಲೇ ನೋಡಿ ಎಷ್ಟು ದಿನಗಳಾದವು. ಅಬ್ಬ! ಒಂದೊಂದು ಕಾಗದವನ್ನೂ ಪ್ರೇಮದಲ್ಲಿ ಮುಳುಗಿಸಿದ್ದರು! ನನ್ನನ್ನು

ಕಂಡರೆ ಅವರಿಗೆ ಅದೆಷ್ಟು ಪ್ರೀತಿ! ನಾನು ನಿಜವಾಗಿಯೂ ಆ ಪ್ರೀತಿಗೆ ಅರ್ಹಳೆ? ಸ್ವರ್ಗಲೋಕದ ಕಿನ್ನರ ನನ್ನ ರಾಜ....." ಭಾರತಿ ಕನಸು ಹೆಣೆಯ ತೊಡಗಿದಳು. ಆನಂದ ಬಂದಂತೆ, ತಾನು ಅವನ ತೋಳುಗಳಲ್ಲಿ ಬಂಧಿತಳಾದಂತೆ ಭಾವಿಸಿಕೊಂಡಳು. ಅವಳ ಚೆಲುವು ಮೊಗ ಕೆಂಬಣ್ಣದಿಂದಬಾಗಿತು.

"ಭಾರತೀ ... ಭಾರತೀ ..." ತಾಯಿ ಕೂಗುತ್ತಿದ್ದರು.

ಭಾರತಿಯ ಕನಸೊಡೆಯಿತು. ಸರೋಜಮ್ಮ ಮಗಳನ್ನು ನೋಡಿ

'ನಾಳೆ ನಿನ್ನ ಗಂಡ, ಅತ್ತೆ, ಮಾವ ಬರ್ತಾರೆ. ರೂಮನ್ನ ಓರಣವಾಗಿರಿಸಿ, ಕಿಟಕಿ ಬಾಗಿಲುಗಳಿಗೆ ಫರದೆ ಹಾಕಿ....'

"ತಿಳಿಯಿತಮ್ಮ" ಎನ್ನುತ್ತಾ ಭಾರತಿ ಹೊರಡಲನುವಾದಳು.

"ಇಲ್ಲಿ ಸ್ವಲ್ಪ ಕೇಳೇ....ರೂಮಲ್ಲಿರುವ ಮೇಜು ಕುರ್ಚಿ ಹಾಲಿಗೆ ಸಾಗಿಸಿ ರೂಮಿನಲ್ಲಿ ಮಂಚ ಹಾಕುವುದಕ್ಕೆ..."

"ಗೊತ್ತಾಯಿತಮ್ಮ" ಎಂದು ಭಾರತಿ ಮಾಯವಾದಳು.

ಭಾರತಿ ಆ ದಿನವೆಲ್ಲಾ ಕನಸು ಕಾಣುವುದರಲ್ಲಿ ಕಳೆದಳು. ರಾಜಾರಾಮು, ವಾಣಿಯರ ಕೀಟಲೆಯಾಗಲಿ, ತಾಯಿ ತಂದೆಯರ ಸಂಭ್ರಮವಾಗಲಿ ಅವಳ ಕಿವಿಗೆ ಬೀಳಲಿಲ್ಲ.

ಬೆಳಗಿನ ಜಾವಕ್ಕೇ ಮಗಳನ್ನೆಬ್ಬಿಸಿ ಸರೋಜಮ್ಮ ಎಣ್ಣೆ ನೀರು ಹಾಕಿದರು. ಭಾರತಿ ನೀರು ಹಾಕಿಕೊಂಡು ತಲೆಗೆ ಸುತ್ತಿದ ಟವಲನ್ನು ಬಿಚ್ಚಿ ಒರಸಿಕೊಳ್ಳುತ್ತಿದ್ದಂತೆಯೇ ವಾಣಿ, ರಾಜಾರಾಮು 'ಭಾವ, ಭಾವ' ಎಂದು ಕೂಗಾಡುವುದು ಕೇಳಿಸಿತು. ಭಾರತಿ ತಲೆ ಒರೆಸಿಕೊಳ್ಳುತ್ತಾ ಅಡಿಗೆ ಮನೆಯೊಳಗೆ ಅವಿತುಕೊಂಡಳು.

ಆನಂದ ರೈಲ್ವೆ ಸ್ಟೇಷನ್ನಿನಲ್ಲೇ ತನ್ನ ಹೆಂಡತಿಯನ್ನು ನಿರೀಕ್ಷಿಸಿದ್ದ. ಆದರೆ ತನ್ನನ್ನು ಎದುರುಗೊಳ್ಳಲು ಮಾವನವರು ಮಾತ್ರ ಬಂದಿರುವುದನ್ನು ನೋಡಿ ಅವನಿಗೆ ನಿರಾಶೆಯಾಯಿತು.

ವೇದಮ್ಮ, ರಂಗಣ್ಣನವರು ಎಂದಿನಂತೆಯೇ ಬೀಗರೊಡನೆ ಮಾತನಾಡುತ್ತಾ ನಡೆದರು. ಆನಂದ ಮಾತ್ರ 'ಭಾರತಿ ಏಕೆ ಬರಲಿಲ್ಲ' ಎಂದು ಯೋಚಿಸುತ್ತಿದ್ದ. ಮನೆ ದೂರದಲ್ಲಿ ಕಾಣಿಸಿದೊಡನೆ ಅವನ ಮನಸ್ಸು ಮತ್ತೆ ಉಲ್ಲಾಸಗೊಂಡಿತು. ಮುಂಬಾಗಿಲಿನಲ್ಲಿ ನಿಂತಿದ್ದ ಅತ್ತೆ, ಮೈದುನ, ನಾದಿನಿಯನ್ನು ನೋಡಿ ಅವನ ಮುಖ ಮತ್ತೆ ಬಾಡಿತು. ಆಮೇಲಾದರೂ ಅವಳನ್ನು ನೋಡುತ್ತೇನಲ್ಲ ಎಂದು ಸಮಾಧಾನ ಮಾಡಿಕೊಂಡ. ಭಾವನನ್ನು ದೂರದಲ್ಲಿ ನೋಡಿದೊಡನೆ ರಾಜಾರಾಮು 'ಭಾವ' ಎನ್ನುತ್ತಾ ಓಡಿ

ಹೋಗಿ ಕೈಹಿಡಿದುಕೊಂಡ. ಆನಂದ ಗೆಲವು ತಂದುಕೊಂಡು ಮೈದುನ ನೊಡನೆ ಭಾರತೀಯ ಕ್ರಿಕೆಟ್ ಆಟಗಾರರನ್ನು ಹಳಿಯುತ್ತಾ ಒಳಗೆ ಬಂದ. ರಾಜಾರಾಮನಿಗೆ ಕ್ರಿಕೆಟ್ ಆಟಗಾರರೆಂದರೆ ಪ್ರಾಣ. ಅವರನ್ನು ಯಾರಾದರೂ ನಿಂದಿಸಿದರೆ ಅವನು ಕೆರಳುತ್ತಿದ್ದ. ಅದನ್ನರಿತೇ ಮೈದುನನನ್ನು ರೇಗಿಸುವ ಸಲುವಾಗಿ ಆನಂದ,

"ರಾಜಾರಾಮ್, ನೋಡಿದೆಯೋ ನಿನ್ನ ಆಟಗಾರರು ಹೇಗೆ ಆಡಿದ್ದಾರೆ. ಈ ವೀರರು ಇಂಗ್ಲೆಂಡಿಗೆ ಯಾಕಾದರೂ ಹೋದರೋ...." ಎನ್ನುವಷ್ಟರಲ್ಲಿ ರಾಜಾರಾಮು,

"ಭಾವ, 'ವೆಟ್ ಪಿಚ್'ನಲ್ಲಿ ಆಟ ಆಡುವುದು ಕಷ್ಟ" ಎಂದು ಭಾರತೀಯರನ್ನು ವಹಿಸಿ ಮಾತನಾಡಿದ.

"ಅದೆಲ್ಲಾ ಕಟ್ಟುಡು. ಪಾಪ! ರಾಯ್‌ಗೆ ರಸಗುಲ್ಲಾ, ಗೋಪಿನಾಥ್‌ಗೆ ಇಡ್ಲಿ ಸಾಂಬಾರ್ ಇಂಗ್ಲೆಂಡಿನಲ್ಲಿ ಎಲ್ಲಿಂದ ಬರಬೇಕು ?"

"ಸುಮ್ಮನಿರಿ ಭಾವ........"

ವಾಣಿ ರೂಮನ್ನು ಪ್ರವೇಶಿಸಿ ಭಾವನ ಗಮನವನ್ನು ಸೆಳೆದಳು. ಒಳಗೆ ಬಂದೊಡನೆ ಆನಂದನ ಕಣ್ಣುಗಳು ಅವನ ಪ್ರೇಯಸಿಯನ್ನು ಹುಡುಕಿದವು. ಅವಳೆಲ್ಲಿಯೂ ಕಾಣದಿರಲು ಆನಂದ ಕುಗ್ಗಿದ ಮನಸ್ಸಿನಿಂದ ತನಗಾಗಿ ಸಿದ್ಧಗೊಳಿಸಲ್ಪಟ್ಟಿದ್ದ ರೂಮು ಸೇರಿದ. ನಾದಿನಿ, ಮೈದುನ, ಭಾವನನ್ನು ಹಿಂಬಾಲಿಸಿದರು.

ಚಾಕೊಲೇಟ್, ಬಿಸ್ಕತ್ ಕೈಗೆ ಬಿದ್ದೊಡನೆ ವಾಣಿ ರೂಮಿನಿಂದ ಹೊರಗೆ ಬಂದಳು. ಸರೋಜಮ್ಮ ರಾಜಾರಾಮನನ್ನು ಕೂಗಿ ಅವನೊಡನೆ ಕಾಫಿ ಕಳುಹಿಸಿದರು. ಆನಂದನಿಗೆ ತಡೆಯದಂತಾಯಿತು.

"ನಿಮ್ಮ ಅಕ್ಕ ಎಲ್ಲೋ ?"

"ಅಡಿಗೆ ಮನೆ ಸೇರಿಬಿಟ್ಟಿದ್ದಾಳೆ. ಇವತ್ತು ಅವಳು ನಿಮ್ಮ ಕಣ್ಣಿಗೆ ಬೀಳಬಾರದು."

"ಹಾಗೆ ಯಾರು ಹೇಳಿದರು ?"

"ಅಮ್ಮ."

"ಸರಿಯಪ್ಪ" ಎಂದು ಮಾತು ಮುಗಿಸಿದ ಆನಂದ. ಸಂಜೆಯೂ ಭಾರತಿ ಕಣ್ಣಿಗೆ ಬೀಳದಿರಲು ಆನಂದನಿಗೆ ಮನೆಯಲ್ಲಿರಲು ಬೇಸರವಾಯಿತು. ತಿರುಗಾಡಿಕೊಂಡು ಬರಲು ಹೊರಗೆ ಹೋದ.

ಆನಂದ ರೂಮಿನಲ್ಲಿಲ್ಲವೆಂದು ದೃಢ ಮಾಡಿಕೊಂಡು ಭಾರತಿ ಮೆಲ್ಲನೆ

ರೂಮಿಗೆ ಬಂದಳು. ಒಂದೊಂದು ದಿಕ್ಕಿಗೆ ಎಸೆದಿದ್ದ ಬೂಡ್ಸುಗಳನ್ನು ಜೋಡಿಸಿ ಮಂಚದ ಕೆಳಗೆ ತಳ್ಳಿದಳು. ನೆಲದ ಮೇಲೆ ಮುದುರಿ ಅಸ್ತವ್ಯಸ್ತ ವಾಗಿ ಬಿದ್ದಿದ ಪಂಚೆಯನ್ನು ಮಡಿಸಿಟ್ಟಳು. ರೂಮಿನ ವಿಲಕ್ಷಣ ವಾತಾ ವರಣ ಆನಂದನಿಗೆ ಆಗಿದ್ದ ಬೇಸರವನ್ನು ಸಾರಿ ಹೇಳುತ್ತಿತ್ತು. ರಾಜಾರಾಮು ತೆಗೆದುಕೊಂಡು ಹೋಗಿ ಕೊಟ್ಟಿದ್ದ ಎಲೆ, ಅಡಿಕೆ ತಟ್ಟೆಯಲ್ಲಿಯೇ ಒಣಗು ತ್ತಿತ್ತು.

ಆನಂದ ಮರಳಿ ಮನೆಗೆ ಬಂದಾಗ ರಾತ್ರಿ ಒಂಭತ್ತು ಗಂಟೆಯಾಗಿತ್ತು. ಊಟ ಮುಗಿಸಿ ರೂಮು ಸೇರಿ 'ಸರಿ, ಇನ್ನೂ ದೇವಿಯವರಿಗೆ ದಯೆ ಬರು ತ್ತದೋ ಇಲ್ಲವೋ' ಎಂಬ ಯೋಚನೆಯಲ್ಲಿರುವಾಗಲೇ ಕೈಯಲ್ಲಿ ಹಾಲಿನ ಬಟ್ಟಲು ಹಿಡಿದು ಭಾರತಿ ಒಳಗೆ ಬಂದಳು. ಆನಂದ ಪ್ರಸನ್ನಗೊಂಡು,

"ದೇವಿಯವರಿಗೆ ಭಕ್ತನ ಮೇಲೆ ದಯೆ ಬಂತು. ಬೆಳಿಗ್ಗೆ ಎಲ್ಲಾ ಎಲ್ಲಿ ಅವಿತುಕೊಂಡಿದ್ದೆ ?" ಎಂದ.

ಭಾರತಿ ಮುಗುಳುನಗೆ ಬೀರುತ್ತಾ 'ನಿಮ್ಮೆದೆಯಲ್ಲಿ ಅವಿತು ಕೊಂಡಿದ್ದೆ' ಎಂದಳು. ಆನಂದ ತನ್ನೆದೆ ಮುಟ್ಟಿ ನೋಡಿಕೊಳ್ಳುತ್ತಾ 'ಇರಬಹುದು. ಅದಕ್ಕೇ ಏನೋ ಬೆಳಿಗ್ಗೆ ನನ್ನೆದೆ ತುಂಬಾ ಭಾರವಾ ಗಿತ್ತು' ಎಂದು ಹೇಳಿ ಅವಳ ಕೈ ಹಿಡಿದುಕೊಂಡ. ಹಾಲು ಸ್ವಲ್ಪ ತುಳುಕಿ ನೆಲದ ಮೇಲೆ ಬಿತ್ತು.

"ಕೈ ಬಿಡಿ. ಹಾಲು ಚೆಲ್ಲಿಹೋಗುತ್ತದೆ."

"ಹಾಲು ಹೋದರೆ ಹೋಗಲಿ. ನನಗದು ಬೇಕಾಗಿಲ್ಲ." ಆನಂದ ಹೆಂಡತಿಯ ಕೈಲಿದ್ದ ಬಟ್ಟಲು ಕಸಿದು ಕಿಟಕಿಯಲ್ಲಿಟ್ಟ.

"ಕುಡಿದುಬಿಡಿ. ಆರಿಹೋಗುತ್ತದೆ."

"ನಿಧಾನವಾಗಿ ಕುಡಿದರಾಯಿತು."

ಭಾರತಿ ಒಣಗಿದ್ದ ವೀಳೆಯದೆಲೆ ನೆನೆದು "ಬೆಳಿಗ್ಗೆ ಎಲೆ ಅಡಿಕೆ ಏಕೆ ಹಾಕಿಕೊಳ್ಳಲಿಲ್ಲ ?" ಎಂದಳು.

"ನೀನು ಬಂದು ಮಡಿಸಿ ಕೊಟ್ಟಿದ್ದರೆ ಹಾಕಿಕೊಳ್ಳುತ್ತಿದ್ದೆ. ನಾಳೆ ನನ್ನೊಡನೆ ಬರುತ್ತೀಯಾ ?"

ಭಾರತಿ ಆನಂದನ ಕಡೆ ನೋಡಿದಳು. ಈ ಪ್ರಶ್ನೆ ಕೇಳಲು ನಿಮಗೆ ಮನಸ್ಸಾದರೂ ಹೇಗೆ ಬಂತು ಎಂದು ಕೇಳಿದವು ಕಣ್ಣುಗಳು. ದೀಪದ ಬೆಳಕಿನಲ್ಲಿ ಕಾಂತಿಯೇರಿದ್ದ ಕಣ್ಣುಗಳನ್ನು, ಎಲೆ ಅಡಿಕೆಯಿಂದ ಕೆಂಪಾದ ತುಟಿಗಳನ್ನು ನೋಡಿ ಆನಂದ ತಣಿಯದಾದ. ಮೊದಲನೆಯ ದಿನ

ತಾನು ಅವಳನ್ನು ನೋಡಿದಾಗ ಉಟ್ಟಿದ್ದ ಮೆರೂನ್ ಬಣ್ಣದ ಸೀರೆ ದೇಹಕಾಂತಿಗೆ ಮೆರಗು ಕೊಟ್ಟಿತ್ತು. ಭಾರತಿಯ ಕೆನ್ನೆಯ ಬೆರಳಾಡಿಸುತ್ತಾ ಆನಂದ ಹೇಳಿದ.

"ಭಾರತಿ, ನೀನೆಷ್ಟು ಚೆನ್ನಾಗಿದೀಯ! ನಾನು ಚಿತ್ರಕಾರ ಆಗಿದ್ದ

ಅಪಶಕುನದ ನುಡಿ ಕೇಳಿದಂತೆ ಭಾರತಿಯ ಎದೆ ಹೊ ಕೊಂಡಿತು. ಚಿತ್ರಗಾರ ಎಂದೊಡನೆ ಅವಳ ಮನಸ್ಸು ಚಂದುವ ನೆನೆಯಿತು.

"ಈಗ ಆ ಮಾತೇಕೆ ?"

"ನಾನು ನಿನ್ನನ್ನು ಆದರ್ಶವಾಗಿಟ್ಟುಕೊಂಡು ಚಿತ್ರ ಬರೆ ತ್ತಿದ್ದೆ. ಚಂದು........"

"ನೀವು ಈಗಿರುವಂತೆಯೇ ಇರಿ. ನನಗೆ ಸಾಕು. ನೀ ಆಗಬೇಕಾಗಿಲ್ಲ!" ಮುತ್ತಿನ ಹಾರ ಕೊಟ್ಟಾಗ ಚಂದು ತನ್ನನ್ನು ನೆ ರೀತಿಯನ್ನು ಭಾರತಿ ಮರೆತಿರಲಿಲ್ಲ.

"ಚಂದು ಯಾವಾಗಲಾದರೂ ಬಂದಾಗ ನಿನ್ನ ಚಿತ್ರ ಬರಿ ಹೇಳ್ತೀನಿ"

"ಊಹೂಂ. ಖಂಡಿತ ಬೇಡಿ. ನನ್ನ ಚಿತ್ರ ಅವರು ಬರೆಯ ಬೇಕಾಗಿಲ್ಲ." ಚಂದುವಿನ ವಿಷಯ ಭಾರತಿಗೆ ಅದೇಕೋ ಪ್ರಿಯವಾಗಿ ಲಿಲ್ಲ. ಚಂದು. ಚಂದು! ಈ ಸಮಯದಲ್ಲೂ ಅವನ ವಿಷಯವೇಕೆ ?

ಗಂಡನಿಂದ ಆ ಮಾತು ಮರೆಸಲು, ಭಾರತಿ ತನ್ನ ಕೆನ್ನೆಯನ್ನು ಆನಂದನ ಕೆನ್ನೆಯ ಮೇಲಿಟ್ಟಳು.

ಹಾಲು ಕಿಟಕಿಯಲ್ಲೇ ಆರಿ ತಣ್ಣಗಾಯಿತು.

ಮಾರನೆಯ ದಿನ ಭಾರತಿ ಅತ್ತೆ, ಮಾವ, ಗಂಡನೊಡನೆ ಬೆಂಗಳೂ ರಿಗೆ ಹೊರಟಳು. ಸರೋಜಮ್ಮ ಮಗಳನ್ನು ಸಂತೋಷದಿಂದಲೇ ಕಳು ಹಿಸಿಕೊಟ್ಟರು. ಹೆಂಡತಿಯೊಡನೆ ಬೆಂಗಳೂರಿನ ಟ್ರೈನು ಹತ್ತಿದಾಗ ಆನಂದನ ಹೃದಯ ಗರಿಗಿಂತಲೂ ಹಗುರವಾಗಿತ್ತು. ಅವನು ಗಾಡಿ ಯಲ್ಲಿ ಕುಳಿತು ನಗುಮುಖದಿಂದ ಹೆಂಡತಿಯ ಕಡೆ ನೋಡಿದಾಗ ಭಾರ ತಿಯ ಮುಖ ಸ್ವಲ್ಪ ಕಳೆಗುಂದಿತ್ತು.

"ಅಮ್ಮನನ್ನು ಬಿಟ್ಟಿರುವುದು ಕಷ್ಟವೇ ?"

"ಎಷ್ಟಾಗಲಿ ಹುಟ್ಟಿ ಬೆಳೆದ ಮನೆ ಬಿಟ್ಟು ಬರುವಾಗ ಮನಸ್ಸಿಗೆ ಏನೋ ಒಂದು ತರಹ ಆಗುವುದು ಸಹಜ"

"ನಿನ್ನ ಆ ತರಹವನ್ನು ನಾನು ಮರೆಸುತ್ತೇನೆ" ಎನ್ನುವಂತೆ ಆನಂದ ಹೆಂಡತಿಯ ಕಡೆ ನೋಡಿದ.

## ೯

ಭಾರತಿ ಚಿಕ್ಕವಳಾಗಿದ್ದಾಗ ಅತ್ತೆಯ ಮನೆ ಎಂದರೆ ಅದೊಂದು ನರಕ ಎಂದು ಭಾವಿಸಿದ್ದಳು. ಅನೇಕರ ಬಾಯಿಂದ ಅವಳು 'ಅತ್ತೆ ಸೊಸೆ ಜಗಳ ವಾಡದ ದಿನವಿಲ್ಲ' ಎಂದು ಕೇಳಿದ್ದಳು. ಆದರೆ ಅತ್ತೆಯ ಮನೆಗೆ ಬಂದ ಮೇಲೆ ಭಾರತಿಗೆ ತನ್ನ ಮಟ್ಟಿಗಾದರೂ ಈ ಕಲ್ಪನೆ ಸುಳ್ಳು ಎನಿಸಿತು. ವೇದಮ್ಮನಿಗೆ ಹೆಣ್ಣು ಮಕ್ಕಳಿರಲಿಲ್ಲ. ಭಾರತಿಯನ್ನು ಸೊಸೆ ಎಂದು ಭಾವಿ ಸುವುದಕ್ಕಿಂತಲೂ ಮಗಳು ಎಂದು ಅವರು ತಿಳಿದಿದ್ದರು. ಹಬ್ಬ ಹರಿದಿನ ಗಳಲ್ಲಿ ಬಣ್ಣದ ಸೀರೆಯುಟ್ಟುಕೊಂಡು ಓಡಾಡುವ ಹೆಣ್ಣು ಮಕ್ಕಳಿಲ್ಲದ ಕೊರತೆಯನ್ನು ಭಾರತಿ ದೂರ ಮಾಡಿದಳು. ಆನಂದನ ಮೋಹದ ಹುಡುಗಿ ವೇದಮ್ಮನಿಗೆ ಮೆಚ್ಚಿನ ಸೊಸೆಯಾಗಿದ್ದಳು. ಮನೆಗೆ ಬಂದ ತಮ್ಮ ಗೆಳತಿ ಯರೆದುರಿಗೆ ಭಾರತಿಯನ್ನು ಕೂಗಿ

"ನನ್ನ ಸೊಸೆ" ಎಂದು ಹೆಮ್ಮೆಯಿಂದ ಅವರು ಹೇಳಿಕೊಳ್ಳುತ್ತಿದ್ದರು. ಬಂದವರು ಹಿರಿಯರಾಗಿದ್ದರೆ ಸೊಸೆಗೆ 'ಕಾಲು ಮುಟ್ಟಿ ನಮಸ್ಕಾರ ಮಾಡಮ್ಮ, ಅಂಥವರ ಆಶೀರ್ವಾದ ನಿಮ್ಮನ್ನು ಚೆನ್ನಾಗಿ ಕಾಪಾಡಲಿ' ಎಂದು ಹೇಳಿ ಸೊಸೆಯ ಕೈಯಲ್ಲಿ ನಮಸ್ಕಾರ ಮಾಡಿಸುತ್ತಿದ್ದರು.

"ನಿಮ್ಮ ಸೊಸೆ ಸಾಕ್ಷಾತ್ ಲಕ್ಷ್ಮಿಯ ಹಾಗಿದಾಳಮ್ಮ" ಎಂದವರು ಹೇಳಿದಾಗಲಂತೂ ವೇದಮ್ಮನ ಮುಖ ಊರಗಲವಾಗುತ್ತಿತ್ತು.

"ಏನೋ ನಿಮ್ಮ ವಿಶ್ವಾಸ" ಎಂದು ಅವರ ಮಾತಿಗೆ ವೇದಮ್ಮ ಉತ್ತರಿ ಸುತ್ತಿದ್ದರು. ಸೊಸೆಯನ್ನು ಯಾವ ಕೆಲಸ ಮಾಡಲೂ ಬಿಡುತ್ತಿರಲಿಲ್ಲ. ಭಾರತಿ ಅತ್ತೆ ಒಬ್ಬರೇ ಕೆಲಸ ಮಾಡುವುದನ್ನು ನೋಡಿ ತಾನಾಗಿ ಕೆಲಸ ಗಳನ್ನು ವಹಿಸಿಕೊಂಡು ಮಾಡಲು ಹೋದರೂ ವೇದಮ್ಮ ಅಕ್ಕರೆಯಿಂದ ಸೊಸೆಯನ್ನು ಗದರಿಸಿ ಕಳುಹಿಸಿಬಿಡುತ್ತಿದ್ದರು.

"ಮುಂದೆ ಕೆಲಸ, ಸಂಸಾರ ಇದ್ದೇ ಇದೆ. ಈಗೊಂದೆರಡು ದಿನ ಹುಡುಗಿಯ ಹಾಗೆ ಆಟವಾಡಿಕೊಂಡು ಹಾಯಾಗಿರು" ಎಂದು ಹೇಳುತ್ತಿ ದ್ದರು.

ರಂಗಣ್ಣನವರು ಸೊಸೆಯನ್ನು ಚಿಕ್ಕ ಹುಡುಗಿ ಎಂದು ಭಾವಿ

'ಮಗೂ' ಎಂದೇ ಕರೆಯುತ್ತಿದ್ದರು. ಸೊಸೆಯ ಮೇಲೆ ಅಮಿತ ವಿಶ್ವಾಸ. ಆದರೆ ಯಾವುದನ್ನೂ ಬಾಯಿಬಿಟ್ಟು ಹೇಳುತ್ತಿರಲಿಲ್ಲ. ಅದು ಅವರ ಸ್ವಭಾವ.

ಅತ್ತೆ, ಮಾವ, ಗಂಡನ ಮಮತೆಯ ನೆರಳಿನಲ್ಲಿ ಭಾರತಿಯ ಬದುಕಿನ ಬಳ್ಳಿ ಸೊಂಪಾಗಿ ಬೆಳೆಯತೊಡಗಿತು.

ಒಂದು ದಿನ ಆನಂದ ಫ್ಯಾಕ್ಟರಿಯಿಂದ ಐದು ಗಂಟೆಗೆ ವಾಪಸ್ಸು ಮನೆಗೆ ಬಂದೊಡನೆ ಭಾರತಿ ಅವನ ಕಾಲಿನ ಬೂಡ್ಸಿನ ಲೇಸು ಬಿಚ್ಚಲು ಬಾಗಿದಾಗ ಆನಂದ

"ನನಗೂ ಕೈಗಳಿವೆ ಎಂಬುದನ್ನು ತಮ್ಮ ಗಮನಕ್ಕೆ ತರಲು ಅಪೇಕ್ಷಿಸುತ್ತೇನೆ" ಎಂದ.

"ಅದು ನನಗೂ ಗೊತ್ತು. ಪಾಪ! ತುಂಬಾ ಬಳಲಿ ಬಂದಿರುತ್ತೀರಿ..."

"ಬಳಲಿ ಬಂದವರಿಗೆ ಬೂಡ್ಸು ಬಿಚ್ಚಿದರೆ ಆಯಾಸ ಪರಿಹಾರವಾಗುವುದಿಲ್ಲ"

"ಮತ್ತೆ........?" ಭಾರತಿ ದೊಡ್ಡದಾಗಿ ಕಣ್ಣು ಬಿಟ್ಟು ಕೇಳಿದಳು.

"ಬಳಲಿಕೆ ಹೋಗಲು ಒಂದೇ ಮಾರ್ಗವಿದೆ" ಎನ್ನುತ್ತಾ ಆನಂದ ಅವಳ ಮುಖದ ಕಡೆ ನೋಡಿ ನಕ್ಕ.

"ನಿಮಗೆ ಯಾವಾಗಲೂ ಕುಚೇಷ್ಟೆ" ಎನ್ನುತ್ತಾ ಭಾರತಿ ಒಳಗೆ ಹೋಗಿ ತಿಂಡಿ ತಟ್ಟೆಯನ್ನು ತಂದು ಮೇಜಿನ ಮೇಲಿಟ್ಟಳು.

"ರಾಣಿಯರೂ ಸ್ವೀಕರಿಸಬೇಕು"

"ನಾನು ತಿಂದಾಯಿತು. ನೀವು ತೆಗೆದುಕೊಳ್ಳಿ."

"ನನ್ನ ಜೊತೆ ಸ್ವಲ್ಪ ......." ಎನ್ನುತ್ತಾ ಆನಂದ ಕೈಲಿ ಉಪ್ಪಿಟ್ಟು ತೆಗೆದು ಕೊಡಲು ಹೋದ.

"ಬೇಡ್ರೀ"

"ತಿನ್ರೀ" ಎನ್ನುತ್ತಾ ಆನಂದ ಬಲವಂತ ಮಾಡಿ ಉಪ್ಪಿಟ್ಟನ್ನು ಅವಳ ಬಾಯಿಗೆ ತುರುಕಿದ. ಕದನದಲ್ಲಿ ಉಪ್ಪಿಟ್ಟು ಅವಳ ಕೆನ್ನೆಗೆ ಬಳಿದುಕೊಂಡಿತು. ಭಾರತಿ ಟವಲಿನಿಂದ ಕೆನ್ನೆ ಉಜ್ಜಿ ಒರೆಸಿ

"ನೀವು ಹೀಗೆಲ್ಲಾ ಆಡಿದರೆ ನಾನು ರೂಮು ಬಿಟ್ಟು ಹೊರಟು ಹೋಗುತ್ತೇನೆ" ಎಂದಳು.

"ಹೋಗು. ನಾನು ತಿಂಡಿ ತಿನ್ನುವುದೇ ಇಲ್ಲ."

"ನಿಮ್ಮ ದಮ್ಮಯ್ಯ ಬೇಗ ತಿಂದು ಮುಗಿಸಿ. ಎಲ್ಲಾದರೂ ಸುತ್ತಾಡಿ

ಕೊಂಡು ಬರೋಣ"

ಆನಂದ ತಿಂಡಿ ತಿಂದು ಮುಗಿಸಿ, ಕೈ ತೊಳೆದುಕೊಂಡು ಬರುವಷ್ಟರಲ್ಲಿ ಭಾರತಿ ಜಡೆ ಹೆಣೆದು ಮುಗಿಸಿದ್ದಳು. ಆನಂದ ಹಿಂದಿನಿಂದ ಬಂದು ಅವಳ ಜಡೆ ಹಿಡಿದೆಳೆದು ತನ್ನ ಕೊರಳಿಗೆ ಜಡೆ ಸುತ್ತಿಕೊಳ್ಳುತ್ತಾ "ಇದೇನು ಒಂದೇ ಜಡೆ ಹಾಕಿಕೊಂಡಿದೀಯ" ಎಂದ.

"ಮತ್ತೆ ನಾಲ್ಕು ಜಡೆ ಹಾಕಿಕೊಳ್ಳಬೇಕಾಗಿತ್ತೇನು ?"

"ನಾಲ್ಕು ಬೇಡ. ಎರಡು ಜಡೆ ಸಾಕು"

"ಊಹೂಂ. ಅಮ್ಮ ಏನು ತಿಳಿದುಕೊಳ್ಳುತ್ತಾರೆ ?" ಆನಂದ ತಾಯಿಯನ್ನು 'ಅಮ್ಮ' ಎಂದು ಕೂಗುತ್ತಿದ್ದ. ಆದುದರಿಂದ ಭಾರತಿಯೂ ಅತ್ತೆಯನ್ನು 'ಅಮ್ಮ' ಎಂದು ಸಂಬೋಧಿಸುತ್ತಿದ್ದಳು.

"ಅಮ್ಮ ಏನು ತಿಳಿದುಕೊಳ್ಳುವುದಿಲ್ಲ. 'ಎಲ್ಲಾ ಅವರವರ ಇಷ್ಟ' ಎಂದುಕೊಳ್ಳುತ್ತಾರೆ. ನೀನು ಎರಡು ಜಡೆ ಹಾಕಿಕೊಂಡರೆ ಹೇಗೆ ಕಾಣಿಸುತ್ತೀಯೋ ನಾನು ನೋಡಬೇಕು"

'ನನ್ನ ಹೇಗೆ ನೋಡಿದರೂ ನಿಮಗೆ ತೃಪ್ತಿಯಿಲ್ಲ. ನಾನು ಎಷ್ಟು ವಿವಿಧ ಭಂಗಿಯಲ್ಲಿ ಕುಳಿತರೂ ನಿಮಗೆ ಸಾಲದಲ್ಲವೇ ?"

"ನಿಜ ಭಾರತಿ. ನೋಡಿದಷ್ಟೂ ಅತೃಪ್ತಿ ಹೆಚ್ಚಾಗುವುದೇ ಹೊರತು ಕಡಿಮೆಯಾಗುವುದಿಲ್ಲ. ಎರಡು ಜಡೆ ಹಾಕಿಕೊಳ್ಳುತ್ತೀ ತಾನೆ ?"

"ಊಹೂಂ"

"ನನಗಾಗಿ ?"

"ಆಗಲಿ" ಎಂದು ಭಾರತಿ ಒಪ್ಪಿಕೊಂಡಳು. ಮೊದಲಿಂದಲೂ ತಾನು ರೂಪವತಿ ಎಂಬುದು ಭಾರತಿಗೆ ತಿಳಿದಿತ್ತು. ಆದರೂ ಅದನ್ನು ಆಕೆ ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಆದರೆ ಮದುವೆಯಾದ ಮೇಲೆ ಸಹಜ ಚೆಲುವೆಯಾದ ಅವಳು ಕೃತಕ ಸಾಧನಗಳಿಂದ ತನ್ನ ಸೌಂದರ್ಯವನ್ನು ಹೆಚ್ಚಿಸಿಕೊಂಡು ಆನಂದನ ಮುಂದೆ ಸುಳಿಯುತ್ತಿದ್ದಳು. ಬಣ್ಣದ ಬೊಂಬೆಯಂತಹವಳು ಸಿಂಗರಿಸಿಕೊಂಡು ಬಂದರೆ ಆನಂದನಿಗೆ ಬರಿಯ ನೋಟದಿಂದ ತೃಪ್ತಿಯಿಲ್ಲ. ದೂರದಿಂದ ನೋಡಿ ಮೆಚ್ಚಿ, ಹತ್ತಿರಕ್ಕೆಳೆದು ಅವಳ ಶೃಂಗಾರವನ್ನೆಲ್ಲಾ ಹಾಳು ಮಾಡಿದರೇ ಅವನಿಗೆ ತೃಪ್ತಿ ಸಿಗುತ್ತಿತ್ತು. ಮುಖಕ್ಕೆ ಬಳಿದಿದ್ದ ಪೌಡರನ್ನು ತುಟಿಯಿಂದೊರಸಿ ಓರಣವಾಗಿ ಬಾಚಿದ್ದ ಮುಂಗುರುಳುಗಳನ್ನು ಬೆರಳುಗಳಿಂದ ಕೆಡಿಸಿ, ಕಣ್ಣಿಗೆ ಹಚ್ಚಿಕೊಂಡಿದ್ದ ಕಾಡಿಗೆ ಕೆನ್ನೆಗೆ ಬಳಿದುಕೊಳ್ಳುವಂತೆ ಮಾಡಿ, ಹಣೆಯಲ್ಲಿದ್ದ ಕುಂಕುಮ ತನ್ನ ಕೆನ್ನೆಗೋ ಗಲ್ಲಕ್ಕೋ ಮೆತ್ತಿ

ಕೊಳ್ಳುವಂತೆ ಮಾಡುವವರೆವಿಗೆ ಅವನಿಗೆ ತೃಪ್ತಿ ಇರಲಿಲ್ಲ. ಅವಳು ಮುಡಿದ ಮಲ್ಲಿಗೆ ಅವನ ತೋಳ ಬಿಗಿತದಲ್ಲಿ ಮಂಕಾಗಿ, ಬಾಡಿ ಕೆಳಗೆ ಉದುರುತ್ತಿತ್ತು.

"ಥೂ, ನನ್ನ ಅಲಂಕಾರವೆಲ್ಲಾ ಕೆಡಿಸಿಬಿಟ್ಟಿರಿ" ಎಂದು ಇಲ್ಲದ ಕೋಪ ತಂದುಕೊಂಡು ಹೇಳಿದರೂ ಅವನ ವರ್ತನೆ ಅವಳಿಗೆ ತುಂಬಾ ಪ್ರಿಯವಾಗಿತ್ತು.

ಆನಂದ 'ನೀನು ಎರಡು ಜಡೆ ಹಾಕಿಕೋ ಎನ್ನಲು "ನೀವು ಅಲಂಕಾರ ಕೆಡಿಸುವ ಹಾಗಿದ್ದರೆ ಹಾಕಿಕೊಳ್ಳುವುದಿಲ್ಲ" ಎಂದಳು.

"ಅಪ್ಪಣೆ"

ಭಾರತಿ ವೇದಮ್ಮನವರ ಮುಂದೆ ಹೋಗಿ,

"ಅಮ್ಮ, ಈ ಜಡೆ ಏನಾಗಿದೆ?" ಎಂದಳು.

"ಯಾಕೆ ಮಗು?"

"ಮತ್ತೆ ಇದು ಅವರಿಗೆ ಚೆನ್ನಾಗಿಲ್ಲವಂತೆ. ಎರಡು ಜಡೆ ಹಾಕಿಕೋ ಎನ್ನುತ್ತಾರೆ. ಈ ಜಡೆ ಏನಾಗಿದೆ" ಎನ್ನುತ್ತಾ ಭಾರತಿ ಭಾರದಿಂದ ಜಗ್ಗುತ್ತಿದ್ದ ತನ್ನ ಜಡೆಯನ್ನು ಕೈಯಿಂದ ಮುಂದಕ್ಕೆಳೆದು ಅದರ ತುದಿಯನ್ನು ಕೈಯಲ್ಲಿ ಹಿಡಿದು ಕುಣಿಸಿದಳು.

"ಅವನಿಗೆ ಹೇಗಿಷ್ಟವೋ ಹಾಗೆ ಮಾಡು."

"ನನಗೆ ಎರಡು ಜಡೆ ಹಾಕಿಕೊಂಡು ಅಭ್ಯಾಸವಿಲ್ಲ."

"ಅವನ ಮನಸ್ಸಿಗೆ ನೋವು ಮಾಡಬೇಡ. ಈಗ ಎರಡು ಜಡೆ ಅಭ್ಯಾಸ ಮಾಡಿಕೊಂಡರಾಯಿತು"

ಭಾರತಿ ಅತ್ತೆಯ ಅಪ್ಪಣೆ ಪಡೆದು ರೂಮಿಗೆ ಬಂದಳು. ಜಡೆಯನ್ನು ಬಿಚ್ಚಿ, ಗಂಡನ ಕೈಗೆ ಬಾಚಣಿಗೆ ಕೊಟ್ಟು,

"ಎಲ್ಲಿ, ಈ ಕೂದಲನ್ನು ಸರಿಯಾಗಿ ಅರ್ಧಭಾಗ ಮಾಡಿ" ಎಂದಳು. ಆನಂದ ಬಾಚಣಿಗೆಯಿಂದ ಅವಳ ಕೇಶರಾಶಿಯನ್ನು ವಿಭಾಗಿಸಿದ. ಭಾರತಿ ಎರಡು ಜಡೆ ಹಾಕಿಕೊಂಡು, ಗುಲಾಬಿ ಹೂ ಮುಡಿದು ತನ್ನ ಪೆಟ್ಟಿಗೆ ತೆಗೆದು 'ಯಾವ ಸೀರೆ ಉಡಲಿ'? ಎಂದಳು.

"ಪ್ರಿಂಟೆಡ್ ನಿನಾನ್."

"ಊಹೂಂ ಅದು ಮೊನ್ನೆ ತಾನೆ ಉಟ್ಟಿದ್ದೆ."

"ಹಳದೀ........"

"ಥೂ, ಅದು ಬೇಡ."

"ಹಾಗಾದರೆ ನಿನ್ನಿಷ್ಟ."

"ಅಯ್ಯೋ, ನೀವೇ ಹೇಳಿ."

"ನಾನು ಹೇಳಿದ್ದು ನೀನು ಒಪ್ಪುವುದಿಲ್ಲವಲ್ಲ!"

"ಇಲ್ಲ, ಒಪ್ಪುತ್ತೇನೆ."

"ನೇರಿಳೆ ಬಣ್ಣದ ಸೀರೆ."

"ಆಗಲಿ. ಬೌಸ್ಲು."

"ಬಿಳಿ ಸಿಲ್ಕಿನದು."

ಭಾರತಿ ಮುಖಕ್ಕೆ ಪೌಡರ್ ಹಚ್ಚಿಕೊಳ್ಳುತ್ತಿದ್ದಂತೆಯೇ ಆನಂದ ಒಂದು ಗಳಿಗೆಯಲ್ಲಿ ಸಿದ್ಧನಾದ. ಭಾರತಿ ಹೊರಡಲನುವಾದಳು. ಆನಂದ ಅವಳನ್ನು ದೂರದಿಂದಲೇ ನೋಡಿ ನಕ್ಕು ಸುಮ್ಮನಾದ. ತನ್ನ ಅಲಂಕಾರ ನೋಡಿಯೂ ದೂರದಲ್ಲಿಯೇ ಕೈಕಟ್ಟಿ ನಿಂತಿರುವುದನ್ನು ನೋಡಿ ಭಾರತಿಗೆ ಹೇಗೆ ಹೇಗೋ ಆಯಿತು. ಗಂಡನ ಮುಖ ನೋಡಿ ಸ್ವಾಗತಿಸುವಂತೆ ನಕ್ಕಳು. ಕೆನ್ನೆಯಲ್ಲಿನ ಗುಳಿ ಆಳವಾಗಿ ಮೂಡಿದರೂ ಆನಂದ ನಿಂತಿದ್ದ ಜಾಗದಿಂದ ಕದಲಲಿಲ್ಲ.

"ಇದೇನು, ರಾಜ ಬಹಳ ಗಂಭೀರವಾಗಿರುವ ಹಾಗಿದೆ?"

"ಗಂಭೀರವಾಗಿರಬೇಕೆಂದು ದೇವಿಯವರ ಅಪ್ಪಣೆಯಾಗಿದೆ."

ಇಬ್ಬರೂ ತಿರುಗಾಡಿಕೊಂಡು ಮನೆಗೆ ಬಂದಾಗ ರಾತ್ರಿ ಒಂಭತ್ತು ಗಂಟೆಯಾಗಿತ್ತು. ಆನಂದ ಒಳಗೆ ಬಂದು ಕೇಳಿದ—

"ಈಗ ನಾನು ನಿನ್ನ ಅಲಂಕಾರಕ್ಕೆ ಕೈ ಹಚ್ಚಲೇ?"

"ನಿಮ್ಮಿಷ್ಟ."

ನಿಮಿಷದಲ್ಲಿ ಭಾರತಿಯ ಶೃಂಗಾರ ಸೂರೆಯಾಯಿತು. ಮುಡಿದಿದ್ದ ಗುಲಾಬಿ ದಳಗಳು ಒಂದೊಂದಾಗಿ ಉದುರಿದವು. ತಲೆಗೂದಲು ಕೆದರಿ ಹಾರಾಡತೊಡಗಿತು.

"ಈಗ ತೃಪ್ತಿಯಾಯಿತು."

"ಸಾರ್ಥಕವಾಯಿತು!" ಭಾರತಿ ಕೂದಲು ಸರಿಪಡಿಸುತ್ತಾ ಹೇಳಿದಳು.

## ೧೦

ಭಾರತಿ ಗಂಡನ ಮನೆಗೆ ಬಂದು ಹದಿನೈದು ದಿನಗಳಾದವು.

ಶನಿವಾರ ಎಂದಿನಂತೆಯೇ ಆನಂದ ಸಂಜೆ ಐದು ಗಂಟೆಗೆ ಮನೆಗೆ

ಬಂದ. ದಿನದಂತೆ ಆವನ ಮುಖ ಉಲ್ಲಾಸವಾಗಿರಲಿಲ್ಲ. ಯಾವುದೋ ಯೋಚನೆಯಿಂದ ಮುಖ ಮಂಕಾಗಿತ್ತು. ಭಾರತಿ

"ಎಲ್ಲಾದರೂ ಹೋಗೋಣವೇ" ಎಂದಳು.

"ಬೇಡ."

"ಯಾಕೆ ಏನೋ ಒಂದು ತರಹ ಇದೀರಲ್ಲ."

"ಇಲ್ಲವಲ್ಲ" ಆನಂದ ಬಲವಂತದಿಂದ ನಕ್ಕು ಹೇಳಿದ.

"ನನಗೂ ಹೇಳಬಾರದೆಂದು ಮನಸ್ಸು ಮಾಡಿದೀರಾ ?"

"ಈಗ ಕೇಳಬೇಡ ಭಾರತಿ. ರಾತ್ರಿ ಹೇಳುತ್ತೇನೆ."

ಭಾರತಿ ಸುಮ್ಮನಾದಳು. ರಾತ್ರಿ ಆನಂದ ಅವಳ ಮುಖ ನೋಡುತ್ತಾ ಹೇಳಿದ. 'ನಿನ್ನ ಬಿಟ್ಟು ಹೋಗುವುದೆಂದರೆ ತುಂಬಾ ಬೇಜಾರಾಗುತ್ತಿದೆ.' ಭಾರತಿ ಅವನ ಬಳಿ ಸರಿದು 'ನನ್ನೇಕೆ ಬಿಟ್ಟು ಹೋಗಬೇಕು' ಎಂದಳು.

"ಇನ್ನು ಹದಿನೈದು ದಿನಕ್ಕೆ ನಾನು ಇಂಗ್ಲೆಂಡಿಗೆ ಹೊರಡಬೇಕು. ಮುಂದಿನ ತಿಂಗಳು ಮೂರನೇ ತಾರೀಖು ಹಡಗು ಬೊಂಬಾಯಿನಿಂದ ಹೊರಡುತ್ತದೆ."

"ಬರುವುದು ಎಷ್ಟು ದಿನವಾಗುತ್ತದೆ?"

"ಎರಡು ವರ್ಷವಾಗುತ್ತದೆ."

ಭಾರತಿ ಬಹಳ ಹೊತ್ತು ಮಾತನಾಡಲಿಲ್ಲ. ಕೊನೆಗೆ ಹಟದಿಂದ ಹೇಳಿದಳು 'ನಾನೂ ಬರುತ್ತೇನೆ. ನನ್ನನ್ನೂ ಕರೆದುಕೊಂಡು ಹೋಗಿ.'

ಅವಳ ಮಾತಿಗೆ, ಹೇಳಿದ ರೀತಿಗೆ ಆನಂದ ನಕ್ಕುಬಿಟ್ಟ.

"ಯಾಕೆ ನಗುತ್ತೀರಿ. ನಾನೂ ಬರುತ್ತೇನೆ."

"ನೀನು ಅಲ್ಲಿಗೆ ಬರುವುದು ಸಾಧ್ಯವೇ ?"

"ಯಾಕಾಗಬಾರದು ?"

"ನೀನು ಅಲ್ಲಿಗೆ ಬಂದರೆ ನಿನ್ನ ಮುದ್ದು ಮುಖ ನನ್ನ ಹೆಚ್ಚಿನ ಶಿಕ್ಷಣದ ನಡುವೆ ಬಂದು ಮರುಳುಗೊಳಿಸುತ್ತದೆ."

"ಹಾಗಾದರೆ ಎರಡು ವರ್ಷ ನಾನು ನಿಮ್ಮನ್ನು ಬಿಟ್ಟಿರಬೇಕೆ? "

"ಹಾಗೆ ಮಾಡದೇ ವಿಧಿಯಿಲ್ಲ."

ಭಾರತಿ ಮಗುವಿನಂತೆ ಹಟ ಮಾಡತೊಡಗಿದಳು.

"ನಾನೂ ಬರುತ್ತೇನೆ. ನನ್ನನ್ನೂ ಕರೆದುಕೊಂಡು ಹೋಗಿ. ಇಲ್ಲ ದಿದ್ದರೆ ನೀವೂ ಹೋಗಬೇಡಿ. ನಿಮಗೆ ನನ್ನ ಕಂಡರೆ ಪ್ರೀತಿಯಿಲ್ಲ. ಆದು

ದರಿಂದಲೇ ಬಿಟ್ಟು........"

"ಭಾರತಿ, ನಾನು ಹೇಳುವುದನ್ನು ಕೇಳು"

"ನೀವು ಹೇಳುವುದೂ ಬೇಡ. ನಾನು ಕೇಳುವುದೂ ಇಲ್ಲ. ನಾನೂ ಬರುತ್ತೇನೆ. ಎರಡು ವರ್ಷ ನಿಮ್ಮನ್ನು ಬಿಟ್ಟು ನಾನಿರಲಾರೆ. ನನ್ನನ್ನೂ ಕರೆದುಕೊಂಡು ಹೋಗುವುದಾದರೆ ಹೋಗಿ. ಇಲ್ಲದಿದ್ದರೆ ನೀವೂ ಹೋಗಬೇಡಿ"

"ಭಾರತಿ........"

"ನೀವು ನನಗೇನೂ ಹೇಳಬೇಡಿ. ನಿಮಗೆ ನನ್ನ ಕಂಡರೆ ಆಗು ವುದಿಲ್ಲ...." ಆನಂದ ನಿರುಪಾಯನಾಗಿ ಅವಳ ಗಲ್ಲ ಹಿಡಿದೆತ್ತಿ "ಎಲ್ಲಿ, ನನ್ನ ಮುಖ ನೋಡಿ ಆ ಮಾತನಾಡು" ಎಂದ. ಭಾರತಿ ಅವನ ಕೈ ದೂರ ತಳ್ಳಿದಳು.

"ನಿನಗಿಷ್ಟು ಬೇಜಾರಾಗುವ ಹಾಗಿದ್ದರೆ ನಾನು ಹೋಗುವುದಿಲ್ಲ. ಹಾಗೆಂದು ನಾಳೆಯೇ ಬರೆದುಬಿಡುತ್ತೇನೆ." ಆನಂದ ನಿಶ್ಚಯದ ಸ್ವರದಲ್ಲಿ ನುಡಿದ.

ಆನಂದ ಬುದ್ಧಿವಂತನೆಂದು ಕಾರ್ಖಾನೆಯವರು ತಾವಾಗಿ ಖರ್ಚು ಮಾಡಿ ಕಳುಹಿಸುವಾಗ ತಾನು ಬೇಡವೆನ್ನುವುದು ಸರಿಯೆ? ಈ ಅವಕಾಶ ವನ್ನು ಕಳೆದುಕೊಳ್ಳಬಾರದಲ್ಲವೇ? ಆ ರೀತಿ ಮಾಡಿದರೆ ತಾನಾಗಿ ಆನಂದನ ಪ್ರಗತಿಗೆ ಕಲ್ಲು ಹಾಕಿದಂತಾಗುವುದಿಲ್ಲವೇ? ತಾನು ಅವನಿಗಿರುವ ಭವ್ಯ ಭವಿಷ್ಯವನ್ನು ಹಾಳುಮಾಡಬೇಕೇ?

"ಊಹೂಂ. ಹಾಗೆ ಮಾತ್ರ ಬರೆಯಬೇಡಿ. ನೀವು ಹೋಗಿ."

"ನೀನು?"

"ನಾನು ರಾಮಾ, ಕೃಷ್ಣಾ ಅಂತ ದೇವರ ಸ್ಮರಣೆ ಮಾಡಿ ಕಾಲ ಹಾಕುತ್ತೇನೆ."

ಈ ಬಾರಿ ಆನಂದ ಅಧೀರನಾದ.

"ನಿನ್ನ ಬಿಟ್ಟು ಹೇಗೆ ಹೋಗಲಿ?" ಆನಂದ ಬೆಂಕಿಗೆ ಬಿದ್ದ ಹುಳುವಿ ನಂತೆ ಒದ್ದಾಡತೊಡಗಿದ.

"ನನ್ನನ್ನು ಬಿಟ್ಟಿರುವುದೆಂದರೆ ನಿಮಗೆ ಅಷ್ಟೊಂದು ಕಷ್ಟವೆ?"

"ನಿನ್ನಂತಹ ಹುಡುಗಿಯನ್ನು ಬಿಟ್ಟು ಸಮುದ್ರದಾಚೆ ಹೋಗುವು ದೆಂದರೆ...." ಆನಂದ ಮುಖ ಮುಚ್ಚಿಕೊಂಡ.

ಭಾರತಿ ಅವನನ್ನು ಸಂತೈಸಿದಳು. "ನನ್ನ ರಾಜ ಮನಸ್ಸಿಗೆ ನೋವು

ಮಾಡಿಕೊಂಡರೆ ನನಗೂ ದುಃಖವಾಗುತ್ತದೆ. ಇನ್ನೂ ಹದಿನೈದು ದಿನ ನಮ್ಮ ಮನ ಬಂದಂತೆ ಕಳೆಯಬಹುದಲ್ಲ. ಈಗಿನಿಂದ ಅದರ ಯೋಚನೆ ಯಾಕೆ? ಈ ರಾತ್ರಿ ನಮ್ಮದಾಗಿರುವಾಗ ನಾಳಿನ ಮಾತೇಕೆ?" ಎಂದಳು. ಅವಳ ಒಲುಮೆಯ ಮಾತುಗಳು ಆನಂದನ ಮನಸ್ಸನ್ನು ಸಮಾಧಾನ ಗೊಳಿಸಿದವು.

ಆನಂದ ಸದ್ಯದಲ್ಲಿಯೇ ಇಂಗ್ಲೆಂಡಿಗೆ ಹೋಗುವನೆಂಬ ಸುದ್ದಿ ಅವನ ತಾಯಿ ತಂದೆಗೂ ಪ್ರಿಯವಾಗಿರಲಿಲ್ಲ. ಜೀವನದ ಸಂಧ್ಯೆಯಲ್ಲಿ ತಮ್ಮ ಏಕ ಮಾತ್ರ ಪುತ್ರನನ್ನು ಎರಡು ವರ್ಷಗಳ ಕಾಲ ಅಗಲಿರುವುದೆಂದರೆ ಅವರಿಗೆ ಕಷ್ಟದ ಮಾತಾಗಿತ್ತು.

ಮನಸ್ಸಿಗೆ ಸಂತೋಷವಾಗಲಿ, ದುಃಖವಾಗಲಿ ಅದನ್ನು ಆಡಿ ತೋರಿ ಸುವ ಸ್ವಭಾವ ರಂಗಣ್ಣನವರದಲ್ಲ. ದುಃಖವಾದರೆ ಒಂದು ನಿಟ್ಟುಸಿರು ; ಸಂತೋಷವಾದರೆ ಒಂದು ಮುಗುಳು ನಗೆ-ಇದಿಷ್ಟರಲ್ಲಿ ಅವರ ಸುಖ, ದುಃಖ ಪರರಿಗೆ ಗೊತ್ತಾಗುತ್ತಿತ್ತು. ಅಂತಹವರೂ ಆನಂದನ ಪ್ರಯಾಣ ಕೇಳಿ,

"ಇನ್ನೆರಡು ವರ್ಷ ನಾವು ನಿನ್ನನ್ನು ಬಿಟ್ಟು ಹೇಗಿರುವುದೋ ಆನಂದ" ಎಂದು ಕೇಳಿದರು. ಮಗನ ಪ್ರಯಾಣದ ಸುದ್ದಿ ಕೇಳಿ ವೇದಮ್ಮ ನವರಂತೂ ಭೂಮಿಗಿಳಿದು ಹೋದರು. ಆನಂದ ಹುಟ್ಟಿದಾಗಿನಿಂದ ತಾಯಿ ಯನ್ನು ಒಂದು ದಿನವೂ ಬಿಟ್ಟಿರಲಿಲ್ಲ. ಅವರ ವಾತ್ಸಲ್ಯದ ನೆರಳಿನಲ್ಲಿ ಅವನು ಸದಾ ಸುಖಿಯಾಗಿದ್ದ. ಪರದೇಶದಲ್ಲಿ ಕಾಲಕಾಲಕ್ಕೆ ಎಣ್ಣೆ ನೀರು, ಊಟ, ತಿಂಡಿ ಇವುಗಳನ್ನು ನೋಡಿಕೊಳ್ಳುವವರು ಯಾರು? ಆದರೆ ಈಗ ಕಷ್ಟಪಟ್ಟರೆ ಮುಂದೆ ಫಲವಿದ್ದೇ ಇದೆ ಎಂಬ ವಿಷಯ ಅವರನ್ನು ಸಮಾ ಧಾನಪಡಿಸಿತು.

ಆನಂದನೇ ತಾಯಿ, ತಂದೆಯನ್ನು ಸಮಾಧಾನ ಮಾಡಿದ. ತಂದೆಗೆ "ನಿಮಗೆ ಹೆಚ್ಚಿಗೆ ಹೇಳುವುದೇನಿದೆ? ಎಲ್ಲ ನೀವೇ ತಿಳಿದುಕೊಳ್ಳಬಲ್ಲಿರಿ" ಎಂದ. ತಾಯಿಗೆ "ನಾನೇನು ಇನ್ನೂ ಮಗುವೇನಮ್ಮ? ಎಣ್ಣೆ ನೀರು, ಊಟ, ತಿಂಡಿ, ಜೋಗುಳ ಅಂತ ಸದಾ ಹೇಳುವುದಕ್ಕೆ. ನಿನ್ನ ಮಗುವಿ ಗಾಗಲೇ ಮಗುವಾಗುವ ವಯಸ್ಸಾಯಿತು" ಎನ್ನುತ್ತಾ ಭಾರತಿಯ ಕಡೆ ನೋಡಿ ನಕ್ಕ.

ಸಂತಸ ತುಂಬಿ ಹರಿಯುತ್ತಿದ್ದ ಮನೆಯಲ್ಲಿ ಮಂಕು ವಾತಾವ ರಣ ಕವಿಯಿತು. ಮೂಲೆ ಮೂಲೆಯಲ್ಲಿಯೂ ಮಿನುಗುತ್ತಿದ್ದ ನಗುವಿನ ಜೆ ಈಗ ಮಸುಕಾಗಿತ್ತು.

ಎಲ್ಲರಿಗಿಂತಲೂ ಹೆಚ್ಚು ಮಂಕಾಗಿದ್ದವಳು ಭಾರತಿ. ಆನಂದ ಒಂದು ದಿನ ಆಫೀಸಿನಿಂದ ಮನೆಗೆ ಬರುವುದು ತಡವಾದರೆ ಮುಂಬಾಗಿಲಿಗೆ ಬಂದು ನಿಲ್ಲುತ್ತಿದ್ದಳು. ಅಂತಹವಳಿಗೆ ಎರಡು ವರ್ಷ ಗಂಡನನ್ನು ಅಗಲಿರುವುದೆಂದರೆ ಅಸಾಧ್ಯದ ಮಾತಾಗಿತ್ತು. ಅದರ ಕಲ್ಪನೆಯೇ ಅವಳ ಮುಖದ ಮೇಲಿನ ಸಂತಸವನ್ನು ಮಲಿನಗೊಳಿಸಿತ್ತು.

ಆನಂದ ಹೆಂಡತಿಯ ಬಾಡಿದ ಮೋರೆಯನ್ನು ಗಮನಿಸಿದ್ದ. ಅವಳ ಸರಸ ಸಲ್ಲಾಪದಲ್ಲಿ ಮೊದಲಿನಂತೆ ಉತ್ಸಾಹವಿರಲಿಲ್ಲ. ಆನಂದ ಅವಳ ಮುಖದ ಮೇಲೆ ನಗು ತರಿಸಲು ಸರ್ವಪ್ರಯತ್ನ ಮಾಡುತ್ತಿದ್ದ. ಒಂದೆಡೆ ಕುಳಿತು ಯೋಚನೆ ಮಾಡಲು ಅವಕಾಶ ಕೊಡದೆ ಅವಳನ್ನು ಕರೆದುಕೊಂಡು ಸುತ್ತಾಡಿ ಬರುತ್ತಿದ್ದ. ಅವರು ನೋಡದ ಸಿನೀಮಾಗಳಿರಲಿಲ್ಲ. ಭೇಟಿ ಕೊಡದ ಪಾರ್ಕುಗಳಿರಲಿಲ್ಲ. ಬೆಂಗಳೂರಿನಲ್ಲಿ ಎಲ್ಲೆಲ್ಲಿ ನೋಡಿದರೂ ಆನಂದ, ಭಾರತಿ ಕಾಣಿಸುತ್ತಿದ್ದರು. ಗಂಡನಿಗೆ ಬೇಸರ ಮಾಡಬಾರದೆಂದು ಭಾರತಿ ನಗುಮುಖ ಮಾಡಿಕೊಂಡು ಅವನೊಡನೆ ಓಡಾಡಿದರೂ, ಸದ್ಯ ದಲ್ಲಿಯೇ ಆತ ತನ್ನನ್ನು ಬಿಟ್ಟು ದೂರ ಹೊರಟುಹೋಗಲಿರುವನೆಂಬ ಸಂಗತಿ ಅವಳ ಮನಸ್ಸನ್ನು ಒಂದೇಸಮನಾಗಿ ಕೊರೆಯುತ್ತಿತ್ತು. ಒಂದೊಂದು ದಿನ ಕಳೆದಂತೆ ಭಾರತಿ ಉಳಿದ ದಿನಗಳನ್ನು ಎಣಿಸುತ್ತಿದ್ದಳು.

"ಒಂದು ದಿನ ಕಳೆಯಿತು. ಇನ್ನು ಹದಿನಾಲ್ಕು ದಿನವಿದೆ....... ಹದಿಮೂರು ದಿನ ...."

ತಾನೆಷ್ಟು ರಮಿಸಿದರೂ ಹೆಂಡತಿಯ ಮನಸ್ಸು ಭಾರವಾಗಿರುವುದನ್ನು ಆನಂದ ಗಮನಿಸಿದ್ದ. ಹಗುರ ಮಾಡಲು ಮಾರ್ಗ ಕಾಣದೇ ನಿರುಪಾಯ ನಾಗಿದ್ದ.

ಬೊಂಬಾಯಿಗೆ ಹೊರಡುವುದು ಎರಡು ದಿನ ಮಾತ್ರ ಉಳಿಯಿತು. ಭಾರತಿಯ ಮುಖ ಮೋಡ ಕವಿದ ಚಂದ್ರನಂತಾಯಿತು.

ಆ ರಾತ್ರಿ ಆನಂದ ಅವಳನ್ನು ಸಮಾಧಾನ ಪಡಿಸತೊಡಗಿದ.

" ಭಾರತಿ, ನೀನು ಹೀಗೆ ಮುಖ ಬಾಡಿಸಿಕೊಂಡು ಕುಳಿತರೆ ನಾನು ಹೇಗೆ ಹೋಗಲಿ! ಎರಡು ವರ್ಷ ನಿನ್ನಿಂದ ದೂರವಿರುವಾಗ ಈ ಅಳುಮುಖ ನೆನಪಿನಲ್ಲಿಟ್ಟುಕೊಂಡಿರಬೇಕೆ? ಹೀಗಾದರೆ ಹೇಗೆ?"

"ನೀವು ಹೋಗಲೇ ಬೇಡಿ" ಭಾರತಿ ಒಂದೇ ಮಾತಿನಲ್ಲಿ ಉತ್ತರ ಕೊಟ್ಟಳು.

"ನೋಡು, ನಾನು ಇಂಗ್ಲೆಂಡಿಗೆ ಹೋಗಿ ಬಂದರೆ ದೊಡ್ಡ ಕೆಲಸ,

ಸೊಗಸಾದ ಮನೆ ........"

"ನನಗೆ ಕಾರು, ಮನೆ ಯಾವುದೂ ಬೇಡ."

"ಹಾಗಾದರೆ ನಿನಗೇನು ಬೇಕು" ಆನಂದ ಉತ್ಸಾಹದಿಂದ ಕೇಳಿದ.

ಭಾರತಿ ಆನಂದನ ಕೊರಳ ಸುತ್ತ ಕೈಹಾಕಿ 'ನನಗೆ ನೀವು ಬೇಕು' ಎಂದಳು.

ಅವಳ ಮಾತು ಕೇಳಿ ಆನಂದನಿಗೆ ಒಂದು ಗಳಿಗೆ ಮಾತು ಹೊರಡಲಿಲ್ಲ.

"ಭಾರತಿ ........"

"ನನಗೇನೂ ಬೇಡ. ನೀವೊಬ್ಬರಿದ್ದರೆ ಸಾಕು. ನಿಮಗೆ ಬರುವ ಸಂಬಳ ನಮಗೆ ಸಾಕು. ನಾವೇನೂ ಚಿನ್ನ ತಿನ್ನಬೇಕಾಗಿಲ್ಲ."

"ಈಗ ನನಗೆ ಬರುವ ಸಂಬಳ ನಮ್ಮಿಬ್ಬರಿಗೆ ಸಾಕು. ನಾಲ್ಕು ಮಕ್ಕಳಾದರೆ?"

"ನಮಗಿಂತ ಬಡವರಿಗೆ ಮಕ್ಕಳಾಗಿಲ್ಲವೇ? ಹೇಗೋ ಆಗುತ್ತದೆ. ನೀವು ಹೊರಟುಹೋದರೆ ನಾನಿಲ್ಲಿ ದಿನ ಹೇಗೆ ಕಳೆಯಲಿ?"

"ಕಾಲೇಜಿಗೆ ಸೇರಿಕೋ."

"ಕಾಲೇಜಿಗೆ ಸೇರಿಕೊಂಡರೆ ಬಿ. ಎ. ಮುಗಿಸುವುದಕ್ಕಾಗುವುದಿಲ್ಲ. ಅದೂ ಅಲ್ಲದೆ ವಿದ್ಯೆಯಲ್ಲಿ ನನಗೆ ಆಸಕ್ತಿಯೂ ಇಲ್ಲ. ಮೊದಲಿನಿಂದಲೂ ನನಗೆ ವಿದ್ಯೆ, ಪರೀಕ್ಷೆ ಎಂದರೆ ತಲೆನೋವು."

"ಸಮಾಜಕ್ಕೆ ಸೇರಿಕೊಂಡು ಹಿಂದಿ, ಹೊಲಿಗೆ, ಸಂಗೀತ ಯಾವುದಾದರೂ ಕಲಿಯಬಹುದಲ್ಲಾ?"

"ನನಗೆ ಯಾವುದೂ ಬೇಡ. ನಾನು ಯಾವುದನ್ನೂ ಕಲಿಯುವುದಿಲ್ಲ. ಸಂಗೀತಕ್ಕೂ ನನಗೂ ಯಾವಾಗಲೂ ವೈರ."

"ಚಿತ್ರಕಲೆ ಇವೆ. ಅದನ್ನು ಕಲಿಯಬಹುದು."

'ಚಿತ್ರಕಲೆ' ಎಂದೊಡನೆ ಹೊಳಪುಗಣ್ಣುಗಳೆರಡು ಅವಳನ್ನು ಬಗೆದು ತಿನ್ನುವಂತೆ ನೋಡಿದ ಹಾಗೆ ಭಾಸವಾಯಿತು.

'ಉಹೂಂ. ಅದಂತೂ ಖಂಡಿತ ಬೇಡ' ಎಂದಾಗ ಭಾರತಿಯ ದನಿಯಲ್ಲಿ ಹೆದರಿಕೆಯಿತ್ತು.

"ಹೇಗಾದರೂ ಎರಡು ವರ್ಷ ಕಳೆದು ಬಿಡು, ಮಗು. ಆಮೇಲೆ ನಾನು ನಿನ್ನನ್ನು ಬಿಟ್ಟು ಒಂದು ದಿನವೂ ದೂರ ಹೋಗುವುದಿಲ್ಲ. ನಿನಗೆ ಇಂಗ್ಲೆಂಡಿನಿಂದ ಬರುವಾಗ ಏನು ತರಲಿ?"

"ನನಗೇನೂ ಬೇಡ."

"ಏನೂ ಬೇಡವೇ ?"

"ನಿಮ್ಮ ಪ್ರೀತಿ ತಂದರೆ ಸಾಕು. ಅಲ್ಲಿ ನಿಮ್ಮ ಪ್ರೀತಿಯನ್ನು ಯಾರಿಗೂ ಕೊಡಬೇಡಿ."

"ನನ್ನ ಹೃದಯವನ್ನು ಇಲ್ಲೇ ಬಿಟ್ಟು ಹೋಗುವಾಗ ಅಲ್ಲಿ ಪ್ರೀತಿಯನ್ನು ಇತರರಿಗೆ ಹೇಗೆ ಕೊಡಲಿ?"

"ನನ್ನಾಣೆಯಾಗಿ ?"

"ನಿನ್ನಾಣೆಗೂ ನಾನು ಎಂದೆಂದಿಗೂ ನಿನ್ನವನು. ಈಗಲಾದರೂ ಸಮಾಧಾನವಾಯಿತೇ ?"

ಭಾರತಿ ತಲೆ ಅಲುಗಿಸಿದಳು.

"ನೀನೂ ನನ್ನೊಡನೆ ಬೊಂಬಾಯಿನವರೆವಿಗೆ ಬರಬಾರದೇಕೆ? ಹೇಗಿದ್ದರೂ ಅಣ್ಣ ನನ್ನೊಡನೆ ಬೊಂಬಾಯಿಗೆ ಬರುತ್ತಾರೆ. ಅವರೊಡನೆ ಹಿಂದಿರುಗಿ ಹೋಗಬಹುದು."

ಆನಂದನ ಸಲಹೆ ಭಾರತಿಗೆ ಸಂತೋಷವನ್ನುಂಟುಮಾಡಿತು.

"ಹಾಗಾದರೆ ನಾವು ಇನ್ನೂ ಎರಡು ದಿನ ಜೊತೆಯಲ್ಲಿದ್ದ ಹಾಗಾಗುತ್ತದಲ್ಲವೇ ?"

"ಹೌದು. ನಾನೇ ಅಣ್ಣನನ್ನು ಕೇಳುತ್ತೇನೆ" ಎನ್ನುತ್ತಾ ಆನಂದ ಎದ್ದು ಹೊರಗೆ ಹೋದ. ರಂಗಣ್ಣನವರ ಮುಂದೆ ನಿಂತು,

"ಅಣ್ಣ, ಭಾರತೀನೂ ನನ್ನೊಡನೆ ಬೊಂಬಾಯಿನವರೆವಿಗೆ ಬರುತ್ತಾಳೆ" ಎಂದ.

"ಅಗತ್ಯವಾಗಿ ಆಗಲಿ. ನಾವಿಬ್ಬರೇ ಆದರೆ ಹೋಟಲಿನಲ್ಲಿಳಿದುಕೊಳ್ಳಬಹುದು. ಭಾರತಿ ಬಂದರೆ ಹಾಗಾಗಲು ಸಾಧ್ಯವಿಲ್ಲ"

"ನಾವಾದರೂ ಹೋಟಲಿನಲ್ಲಿ ಏಕೆ ಇಳಿದುಕೊಳ್ಳಬೇಕಣ್ಣ ? ರಾಮು, ಪದ್ಮ ಕಾಗದ ಬರೆದಿವಾರೆ ಬೊಂಬಾಯಿನಲ್ಲಿ ಅವರ ಮನೆಯಲ್ಲೇ ಇಳಿದುಕೊಳ್ಳಬೇಕು ಅಂತ. ಆದುದರಿಂದ ಕಷ್ಟವೇನಿಲ್ಲ !"

"ಹಾಗಾದರೆ ನನ್ನಡ್ಡಿಯೇನಿಲ್ಲ" ಎಂದರು ರಂಗಣ್ಣ.

ಗಂಡನೊಡನೆ ತಾನು ಬೊಂಬಾಯಿಗೆ ಹೋಗಬಹುದೆಂದು ಕೇಳಿ ಭಾರತಿ ಹಿಗ್ಗಿದಳು.

# ೧೧

ಬೊಂಬಾಯಿಗೆ ಹೊರಡುವ ದಿನ ಬಂತು. ಆನಂದನ ಗೆಳೆಯರು ರೈಲ್ವೆ ನಿಲ್ದಾಣಕ್ಕೆ ಬಂದು ಹಾರಗಳನ್ನು ಹಾಕಿ, ಕೈ ಕುಲುಕಿ ಅವನಿಗೆ ಶುಭ ಕೋರಿದರು. ಆನಂದ ಎಲ್ಲರಿಗೂ 'ಬೈ ಬೈ' ಹೇಳಿ ಹೆಂಡತಿ, ತಂದೆಯೊಡನೆ ಗಾಡಿ ಹತ್ತಿದ.

ಟ್ರೈನು ವಿಕ್ಟೋರಿಯಾ ಟರ್ಮಿನಸ್ ಸೇರಿದಾಗ ಭಾರತಿ ಚಕಿತಳಾಗಿ ಜನಸಮುದ್ರವನ್ನು ತೆರೆದ ಕಣ್ಣಿನಿಂದ ನೋಡಿದಳು. ಅವಳು ಬೆಂಗಳೂರಿ ಗಿಂತಲೂ ದೊಡ್ಡ ನಗರವನ್ನು ನೋಡಿರಲಿಲ್ಲ. ಆ ಜನಸಮುದ್ರ ಅವಳನ್ನು ಬೆರಗುಗೊಳಿಸಿತು. ಟ್ರಾಮನ್ನು ಅವಳು ಚಿತ್ರದಲ್ಲಿ ಸಹ ನೋಡಿರಲಿಲ್ಲ.

ಗಂಡನಿಗೆ ಟ್ರಾಮು ತೋರಿಸಿ 'ಅದು ತುಂಬಾ ಚೆನ್ನಾಗಿದೆ. ಅದರಲ್ಲಿ ಕುಳಿತುಕೊಳ್ಳೋಣ' ಎಂದಳು.

ಹೆಂಡತಿಯ ಮುಗ್ಧ ಮಾತಿಗೆ ಆನಂದ ನಕ್ಕುಬಿಟ್ಟ. ಜನಸಂದಣಿ ಯಲ್ಲಿ ಆನಂದ ಹೆಂಡತಿಯ ತೋಳು ಹಿಡಿದು 'ನಡಿ' ಎಂದ. ಅಷ್ಟು ಜನರ ನಡುವೆ ಗಂಡ ತನ್ನ ತೋಳು ಹಿಡಿದುದನ್ನು ನೋಡಿ ಯಾರೇನು ತಿಳಿದು ಕೊಳ್ಳುವರೋ, ಯಾರು ತಮ್ಮನ್ನು ನೋಡಿ ನಗುವರೋ ಎಂದಂಜಿ ಭಾರತಿ ಸುತ್ತಲೂ ನೋಡಿದಳು. ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿ, ಇವರನ್ನು ಕಣ್ಣೆತ್ತಿ ಸಹ ನೋಡದಿದ್ದುದು ಭಾರತಿಗೆ ಅತ್ಯಾಶ್ಚರ್ಯವನ್ನುಂಟು ಮಾಡಿತು. ಬೆಂಗಳೂರಿನಲ್ಲಾಗಲಿ, ಮೈಸೂರಿನಲ್ಲಾಗಲಿ ಗಂಡ ಈಗಿನ ಹಾಗೆ ನಿಲ್ದಾಣದಲ್ಲಿ ತೋಳು ಹಿಡಿದಿದ್ದರೆ ಜನ ಹೇಗೆ ನೋಡುತ್ತಿದ್ದರು! ತೋಳು ಹಿಡಿಯುವುದೂ ಬೇಡ; ಕೊನೆಗೆ ಹುಡುಗ, ಹುಡುಗಿ ಮಾತ ನಾಡುತ್ತಾ ನಿಂತಿದ್ದರೆ ಅದೆಷ್ಟು ವಕ್ರ ನೋಟಗಳು ಅವರನ್ನು ಚುಚ್ಚಿ ನೋಡುತ್ತಿದ್ದವು!

ಭಾರತಿ, ಆನಂದ ಎರಡು ಹೆಜ್ಜೆ ಮುಂದೆ ಇಟ್ಟಂತೆ ಹಿಂದಿನಿಂದ 'ಹಲೋ....ಆನಂದ' ಎಂದು ಕೂಗುತ್ತಾ ರಾಮು ಧಾವಿಸಿ ಬಂದ.

'ರಾಮು! ಈಕೆ ನನ್ನ ಹೆಂಡತಿ ಭಾರತಿ'

'ನಮಸ್ಕಾರ'

ರಾಮು ನಗುತ್ತಾ ಮಾತನಾಡುತ್ತಾ ಮೂವರೊಡನೆ ಹೆಜ್ಜೆ ಹಾಕಿದ. ನಿಲ್ದಾಣದಿಂದ ಹೊರಗೆ ಬಂದ ಕೂಡಲೇ ರಾಮು ಕೇಳಿದ 'ಟ್ಯಾಕ್ಸಿ

ಯಲ್ಲಿ ಹೊರಟುಹೋಗೋಣ.'

'ಟ್ರಾಮಿನಲ್ಲಿ ಹೋದರಾಗದೇ?' ಹೆಂಡತಿಯ ಆಸೆ ಪೂರಯಿಸುವ ಸಲುವಾಗಿ ಆನಂದ ಕೇಳಿದ.

'ಟ್ಯಾಕ್ಸಿಯಾದರೆ ಅನುಕೂಲ'.

ಸಾಮಾನುಗಳನ್ನು ಟ್ಯಾಕ್ಸಿಗೆ ತುಂಬಿ ರಾಮು 'ಮಾತುಂಗ' ಎಂದ. ಭಾರತಿ ಕಾರಿನ ಬಾಗಿಲ ಹತ್ತಿರ ಕುಳಿತು ಓಡುತ್ತಿದ್ದ ಟ್ರಾಮುಗಳನ್ನು ನೋಡುತ್ತಿದ್ದಳು. ಮುಕ್ಕಾಲು ಗಂಟೆಯ ನಂತರ ದೊಡ್ಡ ಬಂಗಲೆ ಯೊಂದರ ಮುಂದೆ ಕಾರು ನಿಂತಿತು.

ಎರಡನೇ ಮಹಡಿಯ ಮೇಲೆ ಎರಡು ರೂಮುಗಳಿದ್ದ ಇಕ್ಕಟ್ಟಾದ ಸ್ಥಳವೊಂದರಲ್ಲಿ ರಾಮುವಿನ ಸಂಸಾರ ಸಾಗಿತ್ತು. ಇಷ್ಟು ಪುಟ್ಟ ಜಾಗದಲ್ಲಿ ಇವರು ಹೇಗೆ ಸಂಸಾರ ಮಾಡುವರೋ ಎಂದು ಭಾರತಿ ಆಶ್ಚರ್ಯಪಟ್ಟಳು. ಬಾಗಿಲಿನಲ್ಲಿ ರಾಮುವಿನ ಹೆಂಡತಿ ಪದ್ಮ ನಗುಮೊಗದಿಂದ ಭಾರತಿಯನ್ನು ಸ್ವಾಗತಿಸಿದಳು

ಪದ್ಮ ಸ್ವಲ್ಪ ಕುಳ್ಳು ವ್ಯಕ್ತಿ. ಕಪ್ಪಗಿದ್ದರೂ ಲಕ್ಷಣವಾದ ಹುಡುಗಿ. ಅಲೆ ಅಲೆಯಾದ ಒರಟು ಕೂದಲು, ದಪ್ಪ ಮೋಟು ಜಡೆ, ಸ್ನೇಹ ತುಂಬಿದ ಕಣ್ಣುಗಳು. ಅವಳ ಸ್ನೇಹಕ್ಕೆ ಭಾರತಿ ಮನಸೋತಳು. ಒಂದು ಗಳಿಗೆ ಯಲ್ಲಿ ಪದ್ಮ, ಭಾರತಿ ಗೆಳತಿಯರಾದರು.

'ಇಷ್ಟು ಚಿಕ್ಕ ಜಾಗದಲ್ಲಿ ಹೇಗಿದೀರಿ?' ಭಾರತಿ ಕೇಳಿದಳು.

'ಇಷ್ಟು ಸಿಕ್ಕಿರುವುದು ನಮ್ಮ ಪುಣ್ಯ' ಎಂದುತ್ತರ ಕೊಟ್ಟಳು ಪದ್ಮ.

'ಇಲ್ಲಿರಲು ಮೊದಲು ಮುಜುಗರವಾಗಲಿಲ್ಲವೇ?'

'ಹುಂ. ಕಾಡಿನಲ್ಲಿ ಸ್ವೇಚ್ಛೆಯಾಗಿದ್ದ ಪ್ರಾಣಿಗಳನ್ನು ತಂದು ಪಂಜರದಲ್ಲಿಟ್ಟ ಹಾಗಾಯಿತು. ಈಗ ಇವೇ ಸರಿಹೋಗಿದೆ.'

ಮನೆ ಪುಟ್ಟದಾಗಿದ್ದರೂ ಪದ್ಮಳ ಜಾಣ್ಮೆ, ಶುಭ್ರತೆ, ಅಚ್ಚುಕಟ್ಟು ಭಾರತಿಯನ್ನು ಅಚ್ಚರಿಗೊಳಿಸಿದವು. ಕನ್ನಡಿಯಂತಹ ನೆಲದಮೇಲೆ ಜಮು ಖಾನ ಹಾಸಿತ್ತು. ಕಿಟಕಿ, ಬಾಗಿಲುಗಳಿಗೆ ಸ್ವಚ್ಛವಾದ ಬಿಳಿಯ ತೆರೆ ಗಳು. ಅಡಿಗೆ ಮನೆಯಲ್ಲಿ ಸ್ವಲ್ಪವೂ ಮಸಿಯಿರಲಿಲ್ಲ.

ಅಡಿಗೆಮನೆ ಸಹ ಎಷ್ಟು ಚೊಕ್ಕಟವಾಗಿದೆ' ಎಂದು ಭಾರತಿ ಉದ್ಗಾರ ತೆಗೆದಾಗ ಪದ್ಮ 'ಇಲ್ಲಿ ಇದ್ದಲಿನ ಆವಶ್ಯಕತೆಯಿಲ್ಲ. ಎಲ್ಲ ವಿದ್ಯುತ್‌ಚ್ಛಕ್ತಿಯ ಸಹಾಯದಿಂದ ಮಾಡುತ್ತೇನೆ' ಎಂದಳು.

ಆನಂದನ ಸಲುವಾಗಿ ರಾಮು ಎರಡು ದಿನ ಆಫೀಸಿಗೆ ರಜ ತೆಗೆದು

ಕೊಂಡಿದ್ದ. ಮಧ್ಯಾಹ್ನದ ತಿಂಡಿ ಕಾಫಿ ಮುಗಿದೊಡನೆ ಆನಂದ ಹೇಳಿದ

"ಡ್ರೆಸ್ ಮಾಡಿಕೋ. ಜುಹೂ ಬೀಚಿಗೆ ಹೋಗೋಣ"

ಭಾರತಿ ಎಳೆಯ ಮಗುವಿನಂತೆ 'ಹೌದು. ನಾನು ಸಮುದ್ರ ನೋಡಿಲ್ಲ' ಎಂದಳು. ಅವಳ ಮಾತು ಕೇಳಿ ಪದ್ಮಳಿಗೆ ಆಶ್ಚರ್ಯವಾಯಿತು.

"ಏನ್ರೀ, ನೀವು ಸಮುದ್ರಾನೇ ನೋಡಿಲ್ಲವೇ?"

"ಸಮುದ್ರ ನೋಡೋಕೆ ಅವಕಾಶವೇ ಸಿಕ್ಕಿಲ್ಲ. ಬೆಂಗಳೂರು, ಮೈಸೂರು ಬಿಟ್ಟರೆ ನಾನು ಹೊರಗಿನ ಪ್ರದೇಶಗಳನ್ನು ನೋಡಿಯೇ ಇಲ್ಲ. ನೀವೂ ಬೀಚಿಗೆ ಬನ್ನಿ." ಭಾರತಿ ಪದ್ಮಳನ್ನು ಕರೆದಳು. ಪದ್ಮ ರಾಮುವಿನ ಕಡೆ ನೋಡಿದಳು. ರಾಮು ಅದೇನು ಸನ್ನೆ ಮಾಡಿದನೋ ಪದ್ಮ 'ನನಗೆ ಬರೋಕಾಗೋದಿಲ್ಲ ಕಣ್ರೀ. ರಾತ್ರಿಗೆ ಅಡಿಗೆ ಮಾಡಬೇಕು. ಸಮುದ್ರ ನನಗೇನೂ ಹೊಸದಲ್ಲ. ನೀವಿಬ್ಬರೂ ಹೋಗಿ ಬನ್ನಿ' ಎಂದಳು.

ನಾಲ್ಕು ಗಂಟೆಯ ಹೊತ್ತಿಗೆ ಭಾರತಿ ಹಳದೀ ಸಿಲ್ಕಿನ ಮೇಲೆ ಕಪ್ಪು ಚುಕ್ಕೆಗಳಿದ್ದ ಚಿರತೆ ಚರ್ಮದ ಸೀರೆಯುಟ್ಟು, ನವಿಲು ಬಣ್ಣದ ಬ್ಲೌಸು ತೊಟ್ಟು ಹೊರಡಲು ಸಿದ್ಧಳಾದಳು. ರಂಗಣ್ಣನವರು ಬೀಚಿಗೆ ಬರುವುದಿಲ್ಲವೆಂದು ಮೊದಲೇ ಹೇಳಿಬಿಟ್ಟಿದ್ದರು.

ಬೀಚು ಸೇರುವ ಹೊತ್ತಿಗೆ ನಾಲ್ಕೂ ಮುಕ್ಕಾಲು ಗಂಟೆಯಾಗಿತ್ತು. ಸಮುದ್ರತೀರದಲ್ಲಿ ಜನರ ಗುಂಪು ಅಧಿಕವಾಗಿತ್ತು. ಭಾರತಿ ಅಲ್ಲಿಗೆ ಬಂದಿದ್ದ ದಂಪತಿಗಳ ಜೋಡಿ, ಹೆಂಗಸರ ವೇಷ ಭೂಷಣಗಳನ್ನು ನೋಡುವುದರಲ್ಲಿ ಸಮುದ್ರವನ್ನೂ ಮರೆತುಬಿಟ್ಟಿದ್ದಳು. ಪಾರ್ಸಿ, ಸಿಂಧಿ, ಗುಜರಾತಿ ಹೆಂಗಸರ ಉಡಿಗೆ ನೋಡಿ ಅಚ್ಚರಿಯಿಂದ,

"ಅಲ್ಲಿ ನೋಡಿ, ಆ ಗುಜರಾತಿ ಹೆಂಗಸಿನ ರವಿಕೆಯ ಕತ್ತು ಎಷ್ಟು ಕೆಳಗಿದೆ! ಅವಳಿಗೆ ಸಂಕೋಚ ಆಗೋಲ್ಲವೇನ್ರೀ?" ಎಂದಳು.

ಆನಂದ ನಗುತ್ತಾ 'ನೀನು ಸಮುದ್ರ ನೋಡೋಕೆ ಬಂದೆಯೋ, ಅಥವಾ ಆಕೇನ ನೋಡೋಕೆ ಬಂದೆಯೋ' ಎಂದು ಕೇಳಿದ.

ಭಾರತಿ ಸಮುದ್ರದ ಕಡೆ ತಿರುಗಿದಳು.

ನೀಲಿಯ ಬಣ್ಣದ ತೆರೆಗಳು ನೊರೆಯನ್ನು ಉಗಿಯುತ್ತಾ ಒಂದರ ಮೇಲೊಂದು ಅಪ್ಪಳಿಸಿ ಬಂದು ದಡಕ್ಕೆ ಬಡಿದು, ಹತ್ತಿರ ನಿಂತಿದ್ದವರ ಮುಖಕ್ಕೆ ನೀರಿನ ಹನಿಗಳನ್ನು ಸಿಂಪಡಿಸಿ, ಶಾಂತವಾಗಿ ಹಿಂದಕ್ಕೆ ಸರಿದು ಬೇರೊಂದು ಅಲೆಗೆ ಸ್ಥಳ ಮಾಡಿಕೊಡುತ್ತಿದ್ದವು. ಆ ನೊರೆಯ ಮೊರೆ ದಾಟ, ಅಲೆಗಳ ಸ್ಪರ್ಧೆ, ನೀಲಿಯ ಕಡಲು ಇವುಗಳನ್ನು ನೋಡಿ ಭಾರತಿ

ದಿಗ್ಭ್ರಾಂತಳಾದಳು. ಅನೇಕರು ಅಲೆಗಳಿಗೆ ಕಾಲೊಡ್ಡಿ ನಿಂತಿರುವುದನ್ನು ನೋಡಿ ಭಾರತಿ ಆನಂದನಿಗೆ

" ನಾನೂ ಹಾಗೆ ನಿಂತುಕೊಳ್ಳಬೇಕು " ಎಂದಳು.

" ನಿಂತುಕೋ."

"ಹೆದರಿಕೆಯಾಗುತ್ತದೆ"

ಆನಂದ ಭಾರತಿಗೆ ಧೈರ್ಯ ಹೇಳಿದ. ಭಾರತಿ ಅಳುಕುತ್ತಾ ಸಮೀಪಕ್ಕೆ ಹೋಗಿ ನಿಂತಳು. ಅಲೆಯೊಂದು ಮೊರೆಮೊರೆದು ಬಂದು ಕಾಲಿನ ಮೇಲುರುಳಿ ಸೀರೆಯ ನಿರಿಯನ್ನು ತೋಯಿಸಿ, ನೊರೆಯನ್ನು ಉಗುಳಿ ಕಾಲಿನ ಕೆಳಗಿದ್ದ ಮರಳನ್ನು ಕೊರೆದು ಹಿಂದೆ ಹೋಯಿತು. ಮೊದಲನೆಯ ಸಲ ಭಯವಾದರೂ ಅನಂತರ ಭಾರತಿಗೆ ಧೈರ್ಯ ಬಂದಿತು.

ಇನ್ನೊಂದು ಕಡೆ ಕಡಲೆಕಾಯಿ, ಭೇಲ್, ಮಿಠಾಯಿ ಮಾರುವ ಹುಡುಗರು ಬಂದು ಕೊಳ್ಳಿರೆಂದು ಎಲ್ಲರನ್ನೂ ಬಲವಂತ ಪಡಿಸುತ್ತಿದ್ದರು.

ಸಂಜೆಯ ಹೊಂಬೆಳಕು ಮಸುಕಾಗುತ್ತಾ ಬಂದಂತೆ ಆನಂದ, ಭಾರತಿ ಮನೆಯ ಕಡೆ ಹೊರಟರು.

ಮರುದಿನ ಮಧ್ಯಾಹ್ನ 'ಮೆಟ್ರೋ' ಥಿಯೇಟರಿಗೆ ಭೇಟಿಯಿತ್ತು ಮೂರು ಗಂಟೆಗಳ ಕಾಲ ಚಿತ್ರ ನೋಡುತ್ತಾ ಕುಳಿತಿದ್ದರು.

ಆ ದಿನ ರಾತ್ರಿ ಭಾರತಿಗೆ ನಿದ್ರೆ ಬರಲಿಲ್ಲ. ಮಾರನೆಯ ದಿನ ಸಂಜೆಯೇ ಆನಂದ ಹಡಗು ಹತ್ತಬೇಕಾಗಿತ್ತು. ರಾತ್ರಿ ಇಬ್ಬರೇ ಇದ್ದಾಗ ಭಾರತಿಯ ಕಣ್ಣುಗಳು ಹನಿಗೂಡಿದವು.

"ನಾಡಿದ್ದು ಇಷ್ಟು ಹೊತ್ತಿಗೆ ನೀವೆಲ್ಲೋ, ನಾನೆಲ್ಲೋ!"

"ನೀನು ನನ್ನ ಹೃದಯದಲ್ಲಿ, ನಾನು ನಿನ್ನ ಎದೆಯಲ್ಲಿರುತ್ತೇನೆ."

"ಅಬ್ಬ! ಎರಡು ವರ್ಷಗಳು! ೭೩೦ ದಿನಗಳು! ನೀವು ಬರುವಷ್ಟರಲ್ಲಿ ನಾನು ಸತ್ತೇ ಹೋಗಿರುತ್ತೇನೋ ಏನೋ!"

ಆನಂದ ಅವಳ ಬಾಯನ್ನು ಮುಚ್ಚಿ 'ಕೆಟ್ಟ ಮಾತನಾಡಬೇಡ' ಎಂದನು.

"ನಿಮ್ಮ ಪ್ರೀತಿ ನನಗೆ ಮೀಸಲು, ನೆನಪಿರಲಿ" ಭಾರತಿ ಗಂಡನಿಗೆ ಎಚ್ಚರಿಕೆ ಕೊಟ್ಟಳು.

"ನಿನಗೆ ಅಷ್ಟೊಂದು ಅಪನಂಬಿಕೆಯೆ ?"

"ಪಶ್ಚಿಮ ದೇಶಗಳಲ್ಲಿ ಹೆಂಗಸರು ತಾವಾಗಿ ಮುಂದುವರಿಯುತ್ತಾರೆ ಎಂದು ಕೇಳಿದೀನಿ. ಆದುದರಿಂದ ಒತ್ತಿ ಹೇಳಿದೆ"

"ದೀಪ ಆರಿಸಲೇ ?"

"ಬೇಡ"

"ಯಾಕೆ"

"ನಿಮ್ಮನ್ನು ನೋಡುವುದು ಇನ್ನೂ ಎರಡು ವರ್ಷದ ಮೇಲೆ. ಇವತ್ತು ರಾತ್ರಿಯೆಲ್ಲಾ ನಿಮ್ಮನ್ನು ಕಣ್ಣು ತುಂಬಾ ನೋಡಿ ಎದೆಯಲ್ಲಿಟ್ಟು ಕೊಳ್ಳುತ್ತೇನೆ"

ಹೆಂಡತಿಯ ವೇದನೆಯ ನುಡಿ ಆನಂದನ ಮನಸ್ಸನ್ನು ನಾಟಿತು.

ರಾತ್ರಿಯೆಲ್ಲಾ ಅವರ ರೂಮಿನಲ್ಲಿ ದೀಪ ಉರಿದು, ಅವರ ದುಃಖಕ್ಕೆ ಮೂಕ ಸಾಕ್ಷಿಯಾಗಿತ್ತು.

ಬೆಳಗಾಯಿತು. ಬೆಳಕಿನೊಡನೆ ಭಾರತಿಯ ಮುಖವೂ ರಕ್ತ ರಹಿತ ವಾಯಿತು. ಬೆಳಿಗ್ಗೆ ಪದ್ಮ ಅವಳ ಮುಖವನ್ನು ನೋಡಿ,

"ಏನ್ರಿ, ಗಂಡನ್ನ ಬಿಟ್ಟಿರುವುದು ಅಷ್ಟೊಂದು ಕಷ್ಟವೇ" ಎಂದಳು. ಭಾರತಿ ಅವಳ ಮಾತು ಕೇಳಿ ಅದು ತನ್ನ ಕರ್ತವ್ಯವೆಂಬಂತೆ ನಕ್ಕಳು.

ಎಲ್ಲರೂ ಮಧ್ಯಾಹ್ನ ಮೂರು ಗಂಟೆಗೇ ಬಲಾರ್ಡ್‌ಪಿಯರ್‌ಗೆ ಹೊರ ಟರು. ಆನಂದ ಹೊರಡುವುದಕ್ಕೆ ಮುಂಚೆ ಭಾರತಿಗೆ,

"ಅಮ್ಮ, ಅಣ್ಣನಿಗೆ ವಯಸ್ಸಾಯಿತು. ಅವರನ್ನು ಸರಿಯಾಗಿ ನೋಡಿಕೊ. ಈಗ ನೀನೇ ಅವರಿಗೆ ಮಗ, ಸೊಸೆಯಾಗಬೇಕು. ಎಲ್ಲಿ ಒಂದು ಬಾರಿ ನಕ್ಕುಬಿಡು. ಇದು ಸರಿಯಾಗಿಲ್ಲ. ಕೆನ್ನೆಯಲ್ಲಿನ ಕುಳಿ ಇನ್ನೂ ಆಳವಾಗಿ ಮೂಡಬೇಕು. ಹಾಗೆ........"

ಅವಳು ನಗುತ್ತಿದ್ದಂತೆಯೇ ಆನಂದ ಹೆಂಡತಿಗೆ ಮುತ್ತಿಟ್ಟು 'ಎರಡು ವರ್ಷದವರೆಗೆ ಇದನ್ನೇ ನೆನಸಿಕೋ' ಎನ್ನುತ್ತಾ ಅವಳ ಕೈ ಬಿಟ್ಟ.

ರಾಮು, ಪದ್ಮ, ಭಾರತಿ, ರಂಗಣ್ಣನವರು ಆನಂದನನ್ನು ಬೀಳ್ಕೊಡಲು ಪೋರ್ಟಿಗೆ ಹೋದರು. ಭಾರತಿಯಂತೆಯೇ ಅನೇಕರು ತಮ್ಮ ಗಂಡಂದಿ ರನ್ನೂ, ಸ್ನೇಹಿತರನ್ನೂ, ಮಕ್ಕಳನ್ನೂ ಬೀಳ್ಕೊಡಲು ಬಂದಿದ್ದರು. ಆನಂದ ಆರು ಗಂಟೆಯವರೆವಿಗೆ ಮಾತನಾಡುತ್ತಾ ನಿಂತಿದ್ದ. ಹೊರಗಿನವರಿಗೆ ಹೊರಟುಹೋಗುವುದಕ್ಕೂ, ಪ್ರಯಾಣಿಕರಿಗೆ ಹತ್ತುವುದಕ್ಕೂ ಹಡಗಿನ ಸಿಳ್ಳೆಯಾಯಿತು.

ಆನಂದ ತಂದೆಗೆ ಕಾಲು ಮುಟ್ಟಿ ನಮಸ್ಕಾರ ಮಾಡಿ "ಅಣ್ಣ, ನಾನು ಹೋಗುವುದನ್ನು ಭಾರತಿ ತುಂಬಾ ಮನಸ್ಸಿಗೆ ಹಚ್ಚಿಕೊಂಡಿದ್ದಾಳೆ. ಅವ ಳನ್ನು ನೀವು ಸಮಾಧಾನ ಮಾಡಿ":ಎಂದು ರಾಮುವಿನ ಕೈಕುಲುಕಿ, ಪದ್ಮಳಿಗೆ

ಕೈ ಜೋಡಿಸಿದ. ಹೆಂಡತಿಯ ಮುಖ ನೋಡಿ ನಕ್ಕು, ಅವಳ ಕೈ ಹಿಡಿದು ಮೂಳೆಗಳು ಮುರಿಯುವಂತೆ ಅದುಮಿ,

"ಈ ನೋವು ಎರಡು ವರ್ಷದವರೆಗೆ ನೆನಪಿನಲ್ಲಿರುತ್ತದೆ ಅಲ್ಲವೆ ?" ಎಂದ. ಅವನ ಮಾತು ಕೇಳಿ ರಾಮು, ಪದ್ಮ ನಕ್ಕರು. ಆನಂದ ಮುದ್ದಿ ಗಾಗಿ ಅದುಮಿದ ಕೈ ಕೆಂಪಗಾಗಿತ್ತು.

"ನಾನಿನ್ನು ಹೋಗಿ ಬರಲಾ" ಎನ್ನುತ್ತಾ ಆನಂದ ಭಾರತಿಯ ಕಡೆ ನೋಡಿ, ಅವಳ ಕಣ್ಣುಗಳಲ್ಲಿ ನೀರು ಉಕ್ಕುವ ಮೊದಲೇ ತಟ್ಟನೆ ಬೆನ್ನು ತಿರುಗಿಸಿ ಹೊರಟುಹೋದ.

ಆನಂದ ಕಣ್ಮರೆಯಾಗುವವರೆವಿಗೆ ಎಲ್ಲರೂ ಚಿತ್ರದಲ್ಲಿನ ಬೊಂಬೆ ಯಂತೆ ಅಲ್ಲಿಯೇ ನಿಂತಿದರು. ಮೊದಲು ರಂಗಣ್ಣನರು ಎಚ್ಚೆತ್ತು ಭಾರತಿಯ ಬೆನ್ನು ತಟ್ಟಿ 'ಹೊರಡೋಣವೇ ಮಗು' ಎಂದರು. ಭಾರತಿ ಪದ್ಮಳ ಮುಖ ನೋಡಿದಳು. ಪದ್ಮ ಸಹಾನುಭೂತಿಯಿಂದ ಭಾರತಿಯ ಕೈ ಹಿಡಿದು 'ನಡೆಯಿರಿ'. ಎಂದಳು.

ಮನೆಗೆ ಬಂದೊಡನೇ ರಂಗಣ್ಣನವರು ರಾಮುವಿಗೆ 'ನಾವು ನಾಳೆಯೇ ಬೆಂಗಳೂರಿಗೆ ಹೊರಟುಬಿಡುತ್ತೇವೆ' ಎಂದರು. ರಾಮುವಿಗೆ ಅವರು ಆಗಲೇ ಹೊರಡುವುದು ಇಷ್ಟವಿರಲಿಲ್ಲ. ಅವನು

"ಇನ್ನೆರಡು ದಿನವಿದ್ದು ಹೋಗಬಹುದಲ್ಲಾ" ಎಂದ. ಗಂಡನ ಮಾತಿಗೆ ಪದ್ಮಳೂ ದನಿಗೂಡಿಸಿದಳು.

"ಹೌದು ತಾತ, ಭಾರತಿಯ ಮನಸ್ಸಿಗೆ ತುಂಬಾ ಬೇಜಾರಾಗಿದೆ. ಎರಡು ದಿನ ನಮ್ಮ ಜೊತೆಯಲ್ಲಿದ್ದು ಬೊಂಬಾಯಿ ನೋಡಲಿ. ಆಮೇಲೆ ಹೋಗುವಿರಂತೆ" ಎಂದುದನ್ನು ಕೇಳಿ ರಂಗಣ್ಣನವರು

"ನೀನೇನು ಹೇಳುತ್ತೀಯಮ್ಮ" ಎಂದು ಸೊಸೆಯನ್ನು ಕೇಳಿದರು.

"ನೀವೆಲ್ಲರೂ ಹೇಗೆ ಹೇಳಿದರೆ ಹಾಗೆ" ಎಂದಳು ಭಾರತಿ.

ರಾತ್ರಿ ಭಾರತಿಗೆ ನಿದ್ದೆ ಬರಲಿಲ್ಲ. ಕಣ್ಣು ಮುಚ್ಚಿದರೆ ಆನಂದ ಎದು ರಿಗೆ ಬಂದು ನಿಲ್ಲುತ್ತಿದ್ದ. ಅವನ ಸಾನ್ನಿಧ್ಯಕ್ಕಾಗಿ, ಅವನ ನಲ್ನುಡಿಗಳಿಗಾಗಿ ಅವಳ ಹೃದಯ ಹಂಬಲಿಸಿ ಸೊರಗಿತು. ನಗು, ಉಲ್ಲಾಸ ಗಂಡನೊಂದಿಗೇ ಭಾರತಿಯಿಂದ ಮರೆಯಾಗಿತ್ತು.

ಪದ್ಮ ಗೆಳತಿಯ ಮನಸ್ಸನ್ನು ಎರಡೇ ದಿನದಲ್ಲಿ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಳು. ಭಾರತಿಯ ಮನಸ್ಸು ಮಗುವಿನ ಮನಸ್ಸಿನಂತೆಯೂ, ಯಾರು ಬೇಕಾದರೂ ತಮಗಿಷ್ಟಬಂದಂತೆ ಅವಳ ಮನಸ್ಸನ್ನು ಮೇಣದಂತೆ

ಕರಗಿಸಬಿಡಬಹುದೆಂಬುದನ್ನೂ ಅವಳ ಪರಿಚಯವಾದ ಒಂದೆರಡು ಗಂಟೆಗಳಲ್ಲಿಯೇ ಕಂಡುಹಿಡಿದಿದ್ದಳು. ಗೆಳತಿಯನ್ನು ಒಂದು ಕ್ಷಣವೂ ಬಿಟ್ಟಿರದೆ ಯಾವಾಗಲೂ ಅವಳೊಡನೆ ಮಾತುಗಳನ್ನಾಡುತ್ತಿದ್ದಳು. ಭಾರತಿಯನ್ನು ಏಕಾಂಗಿಯಾಗಿ ಬಿಟ್ಟರೆ ಅವಳು ಗಂಡನ ಯೋಚನೆ ಮಾಡುವಳೆಂದೆಣಿಸಿ, ಅವಳನ್ನು ಒಂದು ಗಳಿಗೆಯೂ ಸುಮ್ಮನೆ ಕುಳಿತುಕೊಳ್ಳಲು ಬಿಡುತ್ತಿರಲಿಲ್ಲ. ಅವಳಿಗೆ ಯಾವುದಾದರೂ ಕೆಲಸವನ್ನು ಹಚ್ಚುತ್ತಲೋ ಅಥವಾ ಮಾತನಾಡಿಸುತ್ತಲೋ ಅವಳ ವ್ಯಥೆಯನ್ನು ದೂರವಾಗಿರಿಸಲು ಪ್ರಯತ್ನಿಸುತ್ತಿದ್ದಳು. ಪದ್ಮ ಮನೆಗೆಲಸಗಳನ್ನೆಲ್ಲಾ ಜಾಗ್ರತೆಯಾಗಿ ನಾಲ್ಕು ಗಂಟೆಗೇ ಮುಗಿಸಿ ಸಿಂಗಾರ ಮಾಡಿಕೊಂಡು ಗೆಳತಿಯನ್ನೂ ಕರೆದುಕೊಂಡು ಹೊರಟುಬಿಡುತ್ತಿದ್ದಳು. ರಂಗಣ್ಣನವರನ್ನು ಕರೆದರೂ ಅವರು ಒಂದೇ ಮಾತಿನಲ್ಲಿ "ನಾನು ಮುದುಕ. ಸುತ್ತಾಡಲಾರೆ, ನೀವು ಹೋಗಿ ಬನ್ನಿ" ಎನ್ನುತ್ತಿದ್ದರು. ಪದ್ಮ ತನಗೆ ಪರಿಚಯವಿದ್ದ ಕನ್ನಡಿಗರ ಮನೆಗೆ ಗೆಳತಿಯನ್ನೂ ಕರೆದುಕೊಂಡು ಹೋಗಿ ಅವರ ಪರಿಚಯಮಾಡಿಸಿದಳು.

"ಇವರ ಯಜಮಾನರು, ನಮ್ಮವರು ತುಂಬಾ ಸ್ನೇಹಿತರು. ಇವರ ಗಂಡ ಇಂಗ್ಲೆಂಡಿಗೆ ಹೋಗಿದ್ದಾರೆ" ಎಂದು ಪದ್ಮ ಹೆಮ್ಮೆಯಿಂದ ಅವರಲ್ಲಿ ಹೇಳುತ್ತಿದ್ದಳು. ಬೊಂಬಾಯಿಯಲ್ಲಿ ನೋಡತಕ್ಕ ಸ್ಥಳಗಳಿಗೆಲ್ಲಾ ಭಾರತಿಯನ್ನು ಕರೆದುಕೊಂಡು ಪದ್ಮ ಹೋದಳು. ಪದ್ಮಳ ಧೈರ್ಯ, ಜಾಣ್ಮೆ ಕಂಡು ಭಾರತಿ ಆಶ್ಚರ್ಯಪಟ್ಟಳು. ಕನ್ನಡದ ಹುಡುಗಿಯಾದರೂ, ಹಿಂದಿ, ಮರಾಠಿಯನ್ನು ಸ್ವಲ್ಪವೂ ತಡವರಿಸದೆ ಮಾತನಾಡುತ್ತಿದ್ದಳು ಪದ್ಮ.

"ಪದ್ಮ, ನೀವು ಹಿಂದೀ, ಮರಾಠಿ ಹೇಗೆ ಕಲಿತಿರಿ" ಎನ್ನಲು,

"ಸುತ್ತಲೂ ಜನ ಮಾತನಾಡುವುದನ್ನು ನೋಡಿ ತಾನಾಗಿಯೇ ಬಂತು" ಎಂದು ಅವಳು ಉತ್ತರ ಕೊಟ್ಟಳು.

ತೋಳಿಗೊಂದು ಚೀಲ ನೇತು ಹಾಕಿಕೊಂಡು, ಕಣ್ಣುಗಳನ್ನು ಗಳಿಗೆಗೊಮ್ಮೆ ದೊಡ್ಡದಾಗಿ ಅರಳಿಸುತ್ತಾ, ಸುತ್ತಲೂ ಕುತೂಹಲದಿಂದ ನೋಡುತ್ತ "ಕ್ಯೂ"ನಲ್ಲಿ ನಿಲ್ಲುವ ಠೀವಿ, ಸಿನಿಮಾದಲ್ಲಿ ಮುನ್ನುಗ್ಗಿ ಟಿಕೀಟು ತರುವ ಪದ್ಮಳ ಛಾತಿಗೆ ಭಾರತಿ ಮೆಚ್ಚಿದ್ದಳು. ಮನೆಯ ಸಾಮಾನು ತರುವ ತಾಪತ್ರಯವೂ ರಾಮುವಿಗಿರಲಿಲ್ಲ. ಮನೆಗೆ ಬೇಕಾದ ಸಾಮಾನುಗಳನ್ನು ಮಧ್ಯಾಹ್ನ ಊಟವಾದ ಮೇಲೆ ತಾನೇ ಹತ್ತಿರವಿದ್ದ ಮಾರ್ಕೆಟ್ಟಿಗೆ ಹೋಗಿ ಚೌಕಾಸಿ ಮಾಡಿ ತರುತ್ತಿದ್ದಳು ಪದ್ಮ.

"ಪರವಾಗಿಲ್ಲ. ನೀವು ತುಂಬಾ ಧೈರ್ಯಶಾಲಿಗಳು." ಎಂದು ಭಾರತಿ

ಹೇಳಿದಾಗ ಪದ್ಮ "ಈ ಊರುಗಳಲ್ಲಿ ಧೈರ್ಯ, ಮುನ್ನುಗ್ಗುವಿಕೆ ಇಲ್ಲದಿದ್ದರೆ ಬದುಕುವುದೇ ಕಷ್ಟ" ಎಂದಳು.

ಒಂದು ವಾರದಲ್ಲಿ ನೋಡಬೇಕಾದ ಸ್ಥಳಗಳನ್ನೆಲ್ಲಾ ನೋಡಿ ರಂಗಣ್ಣ, ಭಾರತಿ ಬೆಂಗಳೂರಿಗೆ ಹೊರಟರು. ಭಾರತಿ ಹೊರಟು ಬರುವಾಗ ಪದ್ಮಳಿಗೆ ಹೇಳಿದಳು

" ನಿಮ್ಮೊಡನೆ ಕಳೆದ ದಿನಗಳು ಸಂತೋಷವಾಗಿದ್ದವು ಪದ್ಮ. ಇಲ್ಲಿ ಕಳೆದ ದಿನಗಳನ್ನು ನಾನು ಎಂದಿಗೂ ಮರೆಯುವುದಿಲ್ಲ"

ಪದ್ಮ ನಗುತ್ತಾ "ಆನಂದ ಹಿಂದಿರುಗಿ ಬರುವಾಗ ನೀವು ಅವರನ್ನು ಎದುರುಗೊಳ್ಳುವುದಕ್ಕೆ ಬಂದು ನಮ್ಮಲ್ಲಿಯೇ ಉಳಿಯಬೇಕು" ಎಂದು ಹೇಳಿದಳು.

ರಾಮು, ಪದ್ಮ ಸ್ಟೇಷನ್ನಿಗೆ ಬಂದಿದ್ದರು. ಟ್ರೈನು ಹೊರಡುವುದಕ್ಕೆ ಮುಂಚೆ ಪದ್ಮ ಕರವಸ್ತ್ರ ಬೀಸಿ "ಬಡವರನ್ನು ಮರೆಯಬಾರದು" ಎಂದಳು.

ಟ್ರೈನು ನಿಲ್ದಾಣವನ್ನು ಬಿಟ್ಟಕೂಡಲೇ ಭಾರತಿ ತನ್ನ ಸೀಟಿನಲ್ಲೊರಗಿ ಕಣ್ಣು ಮುಚ್ಚಿದಳು. ಬೊಂಬಾಯಿನಿಂದ ಪೂನಾಕ್ಕೆ ಹೋಗುವ ಮಾರ್ಗಗಳಲ್ಲಿನ ಸುಂದರ ದೃಶ್ಯಗಳನ್ನು ನೋಡುವ ಮನಸ್ಸು ಅವಳಲ್ಲಿರಲಿಲ್ಲ. ಸ್ವಭಾವತಃ ಮಿತಭಾಷಿಯಾದ ರಂಗಣ್ಣನವರು ಸೊಸೆಯ ನಿರಾಸಕ್ತಿಯನ್ನು ಕಂಡು ಮಾತನಾಡಲಿಲ್ಲ.

"ಈಗ ಅವರೆಲ್ಲಿದಾರೋ ಆ ಪರಮಾತ್ಮನಿಗೇ ಗೊತ್ತು" ಎಂಬ ಬಿಸಿಯುಸಿರು ಗಾಳಿಯೊಂದಿಗೆ ಬೆರೆಯಿತು. ಕಣ್ಣಿನಿಂದ ಹನಿಯೊಂದು ಮುತ್ತಿನಂತೆ ದುಂಡುಗೆನ್ನೆಯ ಮೇಲುರುಳಿತು. ರಂಗಣ್ಣನವರು ಅದನ್ನು ಗಮನಿಸಿ,

'ತಾಯಿ, ಎಚ್ಚರಮಾಡಿಕೊಳ್ಳಮ್ಮ. ಕನಸು ಕಾಣುತ್ತಿದ್ದೆಯ' ಎಂದರು. ಭಾರತಿ ಕಣ್ಣು ಬಿಟ್ಟು ಕಿಟಕಿಯಿಂದಾಚೆ ನೋಡತೊಡಗಿದಳು. ಆಕಾಶದಲ್ಲಿ ಈಜುತ್ತಿದ್ದ ಮೋಡಗಳ ತುಂಡಿನ ಬೆಡಗಾಗಲಿ, ಹಿತವಾಗಿ ಬೀಸುತ್ತಿದ್ದ ಗಾಳಿಯ ಸೊಂಪಾಗಲಿ ಅವಳ ಮನಸ್ಸನ್ನು ಸೆಳೆಯಲಿಲ್ಲ. ಅವಳ ತನುಮನವೆಲ್ಲ ಆನಂದನಲ್ಲಿ ಐಕ್ಯವಾಗಿತ್ತು.

## ೧೨

ಬೆಂಗಳೂರಿನಲ್ಲಿ ಮನೆ ತಲುಪಿದಾಗ ಆನಂದನಿಲ್ಲದ ಮನೆ ಪ್ರವೇಶಿಸುವಾಗ ಭಾರತಿಗೆ ಕತ್ತು ಹಿಸುಕಿದಂತೆ ಆಯಿತು. 'ಇನ್ನೂ ಎರಡು ವರ್ಷ!'

ಎಂದು ಬಲೆಗೆ ಬಿದ್ದ ಪಕ್ಷಿಯಂತೆ ಅವಳ ಮನಸ್ಸು ಒದ್ದಾಡಿತು.

ವೇದಮ್ಮ ಸೊಸೆಯ ಮುಖದ ಮೇಲಿನ ದುಗುಡ, ವ್ಯಥೆಯನ್ನು ಗಮನಿಸಿದರು. "ಪಾಪ ! ಚಿಕ್ಕ ವಯಸ್ಸು. ಜೊತೆಯಲ್ಲಿರಬೇಕಾದವನು ದೂರದಲ್ಲಿರುವುದರಿಂದ ಹುಡುಗಿಗೆ ಬೇಸರವಾಗಿದೆ" ಎಂದುಕೊಂಡರು.

ಭಾರತಿಗೆ ಕುಳಿತರೆ, ನಿಂತರೆ ಆನಂದನ ನೆನಪು ಬರುತ್ತಿತ್ತು. ಒಲ್ಲದ ಮನಸ್ಸಿನಿಂದ ಅವಳು ಊಟಕ್ಕೆ ಕುಳಿತುಕೊಳ್ಳುತ್ತಿದ್ದಳು. ಆನಂದ ಕುಳಿತುಕೊಳ್ಳುತ್ತಿದ್ದ ಪಕ್ಕದ ಮಣೆ ಖಾಲಿಯಾಗಿರುತ್ತಿತ್ತು.

ವೇದಮ್ಮನ ಕಣ್ಣು ತಪ್ಪಿಸಿ ಆನಂದ ಆಗ್ಗಾಗೆ ಅವಳೆಲೆಯಿಂದ ಎಂಜಲು ಕದಿಯುತ್ತಿದ್ದ. ಹಾಗೂ ತನಗೆ ಸೇರದುದನ್ನು ತನ್ನ ತಟ್ಟೆಯಿಂದ ತೆಗೆದು ಭಾರತಿಗೆ ಹಾಕಿಬಿಡುತ್ತಿದ್ದ. ಭಾರತಿ ಮುನಿದು

"ನಿಮಗೆ ಸೇರದಿದ್ದರ ನನಗೇಕೆ ಹಾಕುತ್ತೀರಿ" ಎನ್ನುತ್ತಿದ್ದಳು.

"ನನಗೆ ಅದು ಸೇರುವುದಿಲ್ಲ. ನೀನು ಅದನ್ನು ತಿನ್ನು. ನೀನು ನನಗೆ ಸೇರುತ್ತೀಯಾದ್ದರಿಂದ ಎಲ್ಲಾ ನನಗೆ ಸೇರಿದ ಹಾಗಾಯಿತು !"

ಆನಂದ ಹುಡುಗಾಟವಾಡಿ ಎಂಜಲು ಬೆರೆಸಿದಾಗ ಭಾರತಿ ಮುನಿದು ಅವನು ಮೇಲೆ ಹುಸಿಗೋಪ ತೋರಿಸಿದರೂ, ಅವನು ಒಂದು ದಿನ ಹಾಗೆ ಹುಡುಗಾಟವಾಡದಿದ್ದರೆ ಅವಳ ಮನಸ್ಸು ಮುದುಡುತ್ತಿತ್ತು. 'ಇವತ್ತೇಕೋ ಒಂದು ಬಗೆಯಾಗಿದಾರೆ' ಎಂದು ತನ್ನಲ್ಲೇ ಕೊರಗುತ್ತಿದ್ದಳು.

ಊಟಮಾಡಿ ಎಲೆ ಅಡಿಕೆ ಹಾಕಿಕೊಳ್ಳುವಾಗ ಒಂದೊಂದು ದಿನ ಜಗಳ ನಡೆಯುತ್ತಿತ್ತು. ಆನಂದನಿಗೆ ಮೊದಮೊದಲು ಎಲೆ ಅಡಿಕೆ ಸೇರುತ್ತಿರಲಿಲ್ಲ. ಆದರೆ ಭಾರತಿಯ ಕೈಯಿಂದ ಬಾಯಿಗೆ ಬರುವ ಚಿಗುರೆಲೆ, ಅಡಿಕೆ, ಅದಕ್ಕಿಂತಲೂ ಅದನ್ನು ಹಿಡಿಯುವ ಮಿದುಬೆರಳುಗಳನ್ನು ಕಚ್ಚುವುದಕ್ಕಾಗಿ ಆನಂದ ಎಲೆ, ಅಡಿಕೆಯನ್ನು ಒಗ್ಗಿಸಿಕೊಂಡಿದ್ದ.

"ಎಲೆ, ಅಡಿಕೆ ಹಾಕಿಕೊಳ್ಳಬೇಕಾದರೆ ಬೆರಳು ಕಚ್ಚಬೇಕೇ" ಎಂದು ಭಾರತಿ ಕೇಳಿದರೆ "ಬೆರಳಿಗಾಗಿಯೇ ಎಲೆ ಅಡಿಕೆ" ಎಂದುತ್ತರ ಕೊಡುತ್ತಿದ್ದ.

ಊಟವಾದ ಮೇಲೆ ವೇದಮ್ಮನವರು ಎಂದಿನಂತೆ 'ಎಲೆ ಅಡಿಕೆ ಇದೆ. ಬೇಕಾದರೆ ಹಾಕಿಕೊಳ್ಳಮ್ಮ' ಎಂದರು.

'ಬೇಡ' ಎಂದಿಷ್ಟೇ ಹೇಳಿ ಭಾರತಿ ಮಹಡಿ ಹತ್ತಿದಳು. ಹಗಲು ಕುಂಟುತ್ತಾ ರಾತ್ರಿ ಕಾಲಿಟ್ಟಿತು. ಹಗಲಿಗಿಂತಲೂ ರಾತ್ರಿ ಕಳೆಯುವುದು ಭಾರತಿಗೆ ಘೋರವೆನಿಸಿತು. ಆನಂದನ ತೋಳಸೆರೆಯಲ್ಲಿ ಅವನೆದೆಯ ಮೇಲೆ ಮುಖವಿಟ್ಟು ಮಲಗಿದೊಡನೆ ನಿದ್ದೆ ಆಕೆಗೆ ಬರುತ್ತಿತ್ತು.

ಈಗ ಅವಳು ಮಲಗಿದ್ದ ಮೆತ್ತನೆಯ ಹಾಸಿಗೆ ಮುಳ್ಳಿನಂತೆ ಭಾಸವಾಯಿತು. ಚಟ್ಟನೆದ್ದು ಕುಳಿತು ಹೊದಿಕೆ ಬಿಸಾಡಿ ಪುಸ್ತಕವೊಂದನ್ನು ತೆಗೆದಳು. ಆನಂದ ಪುಸ್ತಕದ ಮೇಲೆ 'ಭಾರತಿ' ಎಂದು ಗೀಚಿದ್ದ.

ಮೇಜಿನ ಪಕ್ಕದ ಗೋಡೆಯ ಮೇಲೆ ಭಾರತಿಯ ಪಾರ್ಶ್ವಭಾಗದ ಮುಖವನ್ನು ಪೆನ್ಸಿಲ್ಲಿನಿಂದ ಗುರುತಿಸಿತ್ತು. ಒಂದು ದಿನ ರಾತ್ರಿ ಭಾರತಿಯ ನೆರಳು ಗೋಡೆಯ ಮೇಲೆ ಬಿದ್ದಾಗ ಆನಂದ ಅವಳ ನೆರಳು ನೋಡಿ ಪೆನ್ಸಿಲ್ ಹಿಡಿದು 'ಒಂದು ನಿಮಿಷ ಅಲುಗದೆ ಹಾಗೆಯೇ ಇರು' ಎಂದು ಹೇಳಿ ನೆರಳಿನ ಮೇರೆಯನ್ನು ಅನುಸರಿಸಿ ಅವಳ ಮುಖ ಗುರುತಿಸಿದ್ದ. ಭಾರತಿ ತನ್ನ ಚಿತ್ರವನ್ನೇ ದಿಟ್ಟಿಸಿ ನೋಡಿದಳು.

"ಒಂದು ಭಾಗದಿಂದ ನೋಡಿದರೆ ನಾನಿಷ್ಟು ಚೆನ್ನಾಗಿ ಕಾಣಿಸುತ್ತೇನೆಯೆ? ನನ್ನ ರೆಪ್ಪೆ ಇಷ್ಟು ನೀಳವಾಗಿದೆಯೇ" ಎಂದು ಆಕೆ ಆಶ್ಚರ್ಯಪಟ್ಟಳು. ತುಟಿಯ ಕೊಂಕು, ರೆಪ್ಪೆಯ ಬಾಗುವಿಕೆಯಿಂದ ಆ ಚಿತ್ರವನ್ನು ಗುರುತಿಸಿದಾಗ ಭಾರತಿ ನಗುತ್ತಿದ್ದಳೆಂಬುದನ್ನು ಸ್ಪಷ್ಟವಾಗಿ ಹೇಳಬಹುದಾಗಿತ್ತು.

ಕೆಟ್ಟ ಕನಸು ಕಂಡು ಬೆಚ್ಚಿ ಆನಂದನನ್ನು ಆಶ್ರಯಿಸುವುದು ಭಾರತಿಗೆ ಸಾಮಾನ್ಯವಾಗಿತ್ತು. ಅವಳ ಎದೆಯ ಬಡಿತ ಆಲಿಸಿ ಆನಂದ "ನನ್ನ ಹಕ್ಕಿ ಬೆದರಿತೇನು" ಎಂದು ಸಮಾಧಾನಪಡಿಸುತ್ತಿದ್ದ. ಈಗ ಪತಿಯ ಸಾನ್ನಿಧ್ಯಕ್ಕಾಗಿ, ಅವನ ತೋಳ ಸೆರೆಗಾಗಿ ಅವಳಹೃದಯ ಹನಿದು ಹಂಬಲಿಸಿತು.

"ಇನ್ನೂ ಎರಡು ವರ್ಷ ಈ ಜೀವನ !" ಎಂದು ಭಾರತಿ ನಿಟ್ಟುಸಿರು ಬಿಟ್ಟಳು. ರಾತ್ರಿ ಬಹುಭಾಗವನ್ನು ನಿದ್ದೆಯಿಲ್ಲದೆ ಕಳೆದು ಬೆಳಗಿನ ಜಾವದ ಹೊತ್ತಿಗೆ ಈಸಿ ಛೇರಿನ ಮೇಲೆ ಮಲಗಿ ನಿದ್ರಿಸಿದಳು. ಬೆಳಿಗ್ಗೆ ಭಾರತಿ ಮಹಡಿಯಿಳಿದು ಬಂದಾಗ ಅವಳ ಕಣ್ಣುಗಳು ಕೆಂಪಾಗಿರುವುದನ್ನು ನೋಡಿ ವೇದಮ್ಮನವರು

"ರಾತ್ರಿ ಸರಿಯಾಗಿ ನಿದ್ದೆ ಬರಲಿಲ್ಲವೇ ?" ಎಂದರು.

"ಏಕೋ ನಿದ್ದೆ ಬರಲಿಲ್ಲ."

"ಗಂಡನ ಯೋಚನೆಯೇನು ?"

"ಹಾಗೇನಿಲ್ಲ" ಎಂದು ಭಾರತಿ ನಗಲು ಯತ್ನಿಸಿದಳು. ಆದರೆ ನಗು ಬರಲಿಲ್ಲ.

ತಾಯಿಯ ಮನೆಯಲ್ಲಿ ತಂಗಿ, ತಮ್ಮಂದಿರ ಗಲಾಟೆಯ ನಡುವೆ ಆನಂದನನ್ನು ಮರೆಯುವುದು ಸಾಧ್ಯವಾಗಬಹುದೆಂದೂಹಿಸಿ ಭಾರತಿ,

"ನಾನು ಕೆಲವು ದಿನ ಮೈಸೂರಿಗೆ ಹೋಗಿ ಬರಲೇ" ಎಂದಳು.

"ಅಗತ್ಯವಾಗಿ ಹೋಗಿ ಬಾಮ್ಮ. ಇಲ್ಲಾದರೆ ನಿನ್ನ ಜೊತೆಗೆ ಯಾರೂ ಇಲ್ಲ; ಮೈಸೂರಿನಲ್ಲಿ ತಂಗಿ, ತಮ್ಮ ಎಲ್ಲರೂ ಇದಾರೆ. ಒಂದೆರಡು ದಿನ ಹಾಯಾಗಿ ಇದ್ದು ಬಾ" ಎಂದರು ವೇದಮ್ಮ.

ಭಾರತಿ ಮಧ್ಯಾಹ್ನವೇ ಮೈಸೂರಿಗೆ ಹೊರಡುವ ಸಿದ್ಧತೆ ನಡೆಸಿದಳು. ರಂಗಣ್ಣನವರೇ ಸೊಸೆಯನ್ನು ರೈಲು ಹತ್ತಿಸಿ ಬಂದರು. ಅನಿರೀಕ್ಷಿತವಾಗಿ ಮನೆಗೆ ಬಂದ ಭಾರತಿಯನ್ನು ನೋಡಿ ಮನೆಯವರಿಗೆ ಆಶ್ಚರ್ಯ, ಆನಂದ ಒಟ್ಟಿಗೇ ಉಂಟಾದವು.

ಸರೋಜಮ್ಮ ಕೇಳಿದರು "ಇದೇನೇ ಭಾರತಿ, ಕಾಗದವಿಲ್ಲದೆ ಹೀಗೆ ಬಂದುಬಿಟ್ಟೆ?"

ಭಾರತಿ ಕೈಲಿದ್ದ ಚೀಲವನ್ನು ಕುರ್ಚಿಯ ಮೇಲೆ ಹಾಸಿದ ಬಟ್ಟೆಯ ಮೇಲೆ ಒಗೆದು 'ಬೇಜಾರಾಯಿತು. ಅದಕ್ಕೇ ಬಂದೆ' ಎಂದಳು.

'ಬೊಂಬಾಯಿ ಹೇಗಿದೆ?'

'ಬೆಂಗಳೂರಿಗಿಂತಲೂ ದೊಡ್ಡದಾಗಿದೆ........'

'ಪಾಪ! ಭಾವ ಇಲ್ಲ. ಆದುದರಿಂದ ಬೆಂಗಳೂರು ಬೇಜಾರಾಗಿ ಮೈಸೂರಿನ ನೆನಪಾಯಿತೇನೋ' ಎಂದು ವಾಣಿ ಹಾಸ್ಯಮಾಡಿದಳು. ಮೈಸೂರಿಗೆ ಬಂದ ಎರಡು ದಿನ ಮನೆಯವರೊಡನೆ ಆನಂದನನ್ನು ಮರೆಯುವುದು ಸಾಧ್ಯವಾದರೂ ತವರು ಸ್ವಲ್ಪ ಹಳೆಯದಾದಾಗ ಆನಂದನ ನೆನಪು ಭಾರತಿಗೆ ಮರುಕಳಿಸಿತು.

ಹೃದಯದ ಹಸಿವು, ಅಶಾಂತಿ ಮತ್ತೆ ತಲೆಯೆತ್ತಿದವು. ಮುಗುಧೆಯಾಗಿ ಬೆಳೆದ ಅವಳು ದಾಂಪತ್ಯ ಜೀವನದಲ್ಲಾದ ಅನುಭವಕ್ಕೆ ಮರುಳಾಗಿದ್ದಳು. ದಾಂಪತ್ಯ ಜೀವನ ಅವಳಿಗೆ ಹೊಸದು. ಅದನ್ನು ಪೂರ್ಣವಾಗಿ ಅನುಭವಿಸಿ, ತೃಪ್ತಿಯಾಗುವ ಮುನ್ನವೇ ವಿಧಿ ಗಂಡ ಹೆಂಡಿರನ್ನು ಅಗಲಿಸಿತ್ತು. ಬಾಯಾರಿದವನಿಗೆ ನೀರು ಕೊಟ್ಟು, ಒಂದು ಹನಿ ನೀರು ನಾಲಗೆಗೆ ಬಿದ್ದೊಡನೆ ಬಟ್ಟಲನ್ನು ಕಸಿದುಕೊಂಡ ಹಾಗಾಗಿತ್ತು ಭಾರತಿಯ ಸ್ಥಿತಿ. ಅವಳ ದೇಹ, ಮನಸ್ಸು ಆನಂದನ ಸಾನ್ನಿಧ್ಯಕ್ಕಾಗಿ ಹಾತೊರೆಯುತ್ತಿದ್ದವು. ಯಾವಾಗಲೂ ದಿನಗಳನ್ನು ಲೆಕ್ಕ ಹಾಕುತ್ತಾ ಕುಳಿತುಕೊಳ್ಳುವುದೇ ಅವಳ ಕೆಲಸವಾಯಿತು.

'ಅವರು ಹೋಗಿ ಇಷ್ಟು ದಿವಸವಾಯಿತು. ಇನ್ನೂ ಬರಬೇಕಾದರೆ ಎಷ್ಟು ದಿನ ಬೇಕಾಗುವುದು' ಎಂದು ಲೆಕ್ಕ ಹಾಕುತ್ತಾ ಭಾರತಿ ಕುಳಿತುಬಿಡುತ್ತಿದ್ದಳು. ಮಗಳ ಅನ್ಯಮನಸ್ಕತೆ, ನಿರಾಸಕ್ತಿಯನ್ನು ಕಂಡು ತಾಯಿಗೆ

ಚಿಂತೆಯಾಯಿತು.

"ಯಾಕೇ ಭಾರತೀ, ಮಂಕಾಗಿದೀಯಾ" ಎಂದು ತಾಯಿ ಕೇಳಿದರೆ,

"ಇಲ್ಲವಲ್ಲಾ" ಎಂದು ಮೊಟಕಾಗಿ ಉತ್ತರ ಕೊಡುತ್ತಿದ್ದಳು. ಹೀಗೆ ಮೈಸೂರಿನಲ್ಲಿ ಮೂರು ತಿಂಗಳು ತಳ್ಳಿ, ಭಾರತಿ ಬೆಂಗಳೂರಿಗೆ ಬಂದಳು.

ಅವಳನ್ನು ನೋಡಿದೊಡನೆ ವೇದಮ್ಮ ಗಾಬರಿಯಾದರು.

"ಯಾಕಮ್ಮ, ಇಷ್ಟು ಬಡವಾಗಿದೀಯ? ಹುಷಾರಾಗಿದೀ ತಾನೆ?" ಎಂದು ಆಕೆ ಬೆನ್ನಿನ ಮೇಲೆ ಕೈಯಾಡಿಸಿದರು. ಭಾರತಿ ನಗು ತಂದು ಕೊಂಡು

"ಹುಷಾರಾಗಿದೇನೆ" ಎಂದು ಉತ್ತರಕೊಟ್ಟಳು. ಅವಳು ವಿರಹಾಗ್ನಿ ಯಿಂದ ಬಳಲುತ್ತಿರುವುದು ವೇದಮ್ಮನಿಗೆ ತಿಳಿದಿತ್ತು. ಅದರ ಅನುಭವ ಅವರಿಗೂ ಅನೇಕ ಬಾರಿ ಆಗಿತ್ತು. ಆದರೆ ಸೊಸೆಯಂತೆ ಅವರಿಗೆ ಎಂದೂ ಎರಡು ವರ್ಷ ಗಂಡನನ್ನು ಅಗಲಿರಬೇಕಾದ ಪ್ರಮೇಯ ಬಂದಿರಲಿಲ್ಲ. ಭಾರತಿ ದಿನದೂಡಲು ಪಡುತ್ತಿರುವ ಕಷ್ಟ ಗಮನಿಸಿ ವೇದಮ್ಮ

"ಕಾಲೇಜಿಗಾದರೂ ಸೇರಿಕೋಮ್ಮ" ಎಂದು ಸೂಚಿಸಿದರು.

"ನನಗೆ ಮೊದಲಿನಿಂದಲೂ ವಿದ್ಯೆಯಲ್ಲಿ ಆಸಕ್ತಿಯಿಲ್ಲ. ಈಗಂತೂ ಇಲ್ಲವೇ ಇಲ್ಲ" ಎಂದು ಭಾರತಿ ಒಂದೇ ಮಾತಿನಲ್ಲಿ ಹೇಳಿಬಿಟ್ಟಳು.

"ಹಾಗಾದರೆ ಸಮಾಜಕ್ಕಾದರೂ ಸೇರಿ ಹಿಂದಿ, ಹೊಲಿಗೆ ಕಲಿತರೆ ಸ್ವಲ್ಪ ಸಮಯ ಹೋಗುತ್ತದಲ್ಲವೇ?" ಎಂದು ವೇದಮ್ಮ ಸೊಸೆಯನ್ನು ಬಲವಂತ ಪಡಿಸಿದರು. ಸೇರುವ ಆಸೆಯಿಲ್ಲದಿದ್ದರೂ ಅತ್ತೆಯ ಮಾತನ್ನು ತೆಗೆದು ಹಾಕಲಾರದರೆ ಅವರ ಒತ್ತಾಯಕ್ಕೆ ಭಾರತಿ ಸಮಾಜ ಸೇರಿದಳು.

ಸಂಜೆ ಹೊರಡುವಾಗ ತಲೆ ಬಾಚಿ ವಾಯಿಲ್ ಸೀರೆ ಸುತ್ತಿಕೊಂಡು ಹೊರಟರೆ ಪುನಃ ಅವಳು ಮಾರನೇ ದಿನ ಸಂಜೆಯವರೆಗೆ ತಲೆ ಬಾಚುತ್ತಿರ ಲಿಲ್ಲ. ಆನಂದ ಇದ್ದಾಗ ದಿನಕ್ಕೆ ಮೂರು ಬಾರಿ ತಲೆಬಾಚಿ, ಉಡುಪು ಬದಲಿಸಿ ಸೊಬಗಿನ ರಾಣಿಯಂತೆ ಮೆರೆಯುತ್ತಿದ್ದವಳಿಗೆ ಈಗ ಅಲಂಕಾರ, ಶೃಂಗಾರ ಯಾವುದೂ ಬೇಕಾಗಿರಲಿಲ್ಲ.

ಹಿಂದಿ ಕ್ಲಾಸಿಗೆ ಸೇರಿದ ಅನಂತರವೂ ಅವಳಿಗೆ ಆ ಭಾಷೆಯಲ್ಲಿ ಉತ್ಸಾಹ ಮೂಡಲಿಲ್ಲ. ಕಲಿತ ಅಕ್ಷರಗಳನ್ನೆಲ್ಲಾ ಬಹುಬೇಗ ಮರೆಯುತ್ತಿ ದ್ದಳು. ಹಾಗೂ ಹೀಗೂ ಮೂರು ತಿಂಗಳು ಸಮಾಜಕ್ಕೆ ಹೋಗಿ, ಪ್ರಥಮ ಪರೀಕ್ಷೆಗೆ ಕುಳಿತಳು. ಅವಳು ನಿರೀಕ್ಷಿಸಿದಂತೆಯೇ ಪರೀಕ್ಷೆಯಲ್ಲಿ ಸೋಲಾ ಗಲು ಭಾರತಿ ಹಿಂದಿಗೆ ನಮಸ್ಕಾರ ಹಾಕಿಬಿಟ್ಟಳು. ವೇದಮ್ಮ ಅವಳ ಮನ

ಸ್ಪೊಲಿಸಿ ಪುನಃ ಹಿಂದಿ ಕಲಿಯುವಂತೆ ಪ್ರೇರೇಪಿಸಿದರು.

"ನನಗೆ ಅದು ಇಷ್ಟವಿಲ್ಲ. ಇನ್ನು ಹತ್ತು ಸಾರಿ ಕಟ್ಟಿದರೂ ನಾನು ಪಾಸಾಗುವುದಿಲ್ಲ" ಎಂದಳು ಭಾರತಿ.

ಆನಂದನಿಂದ ಪತ್ರ ಬಂದ ದಿನ ಮಾತ್ರ ಭಾರತಿಯ ಮುಖದ ಮೇಲೆ ನಗೆ ಮಿನುಗುತ್ತಿತ್ತು. ಅದೂ ಕೆಲವು ಗಳಿಗೆಗಳು ಮಾತ್ರ ಅವಳ ಮುಖ ಪ್ರಫುಲ್ಲತೆಯಿಂದ ಅರಳುತ್ತಿತ್ತು; ತಿಳಿಗೊಳದ ಮೇಲೆಸೆದ ಕಲ್ಲು ಸಣ್ಣ ಸಣ್ಣ ತರಂಗಗಳನ್ನೆಬ್ಬಿಸುವಂತೆ, ಮೌನ, ನಿರಾಸಕ್ತಿಯಿಂದ ತುಂಬಿದ ಮನಸ್ಸಿನ ಮೇಲೆ ಆನಂದನ ಪತ್ರ ಆನಂದತರಂಗಗಳನ್ನು ಒಂದುಗಳಿಗೆ ಮೂಡಿಸಿ, ಅಲ್ಲೋಲಕಲ್ಲೋಲ ಮಾಡಿ ಪುನಃ ಸ್ತಬ್ಧವಾಗುತ್ತಿತ್ತು. ಪ್ರೀತಿಯ ಮಾತುಗಳಿಂದ ಹೆಣೆದ ಪ್ರೇಮಪತ್ರಗಳು ಅವಳ ಹೃದಯದ ಹಸಿವನ್ನು ಹೆಚ್ಚು ಮಾಡುತ್ತಿದ್ದವು.ತಲೆಗೆ ಬಾಚಣಿಗೆ ಹಾಕಬೇಕಾದರೆ ವೇದಮ್ಮನವರು ದಿನಕ್ಕೆ ಮೂರು ಬಾರಿಯಾದರೂ ಸೊಸೆಗೆ ಹೇಳಬೇಕಾಗಿತ್ತು.

"ಭಾರತಿ, ಜಡೆ ಹಾಕಿಕೋಮ್ಮ. ಹೂವು ಒಣಗುತ್ತಾ ಇದೆ" ಎಂದು ಬೆಳಗಿನಿಂದ ಪಲ್ಲವಿ ಹಾಡಿದರೆ ಸಂಜೆಯ ಹೊತ್ತಿಗೆ ಅವಳು ಜಡೆ ಹಾಕಿಕೊಳ್ಳುತ್ತಿದ್ದಳು. ಅತ್ತೆ ಏನೂ ಹೇಳದ ದಿನ ಭಾರತಿ ಬಾಚಣಿಗೆಯನ್ನೇ ಮುಟ್ಟುತ್ತಿರಲಿಲ್ಲ.

ವೇದಮ್ಮನವರು ಪ್ರತಿ ದಿನ ಸಂಜೆ ತಮ್ಮ ಗೆಳತಿ ಸಾವಿತ್ರಮ್ಮನ ಮನೆಗೆ ಹೋಗುತ್ತಿದ್ದರು. ಸಂಜೆ ಅನೇಕ ಹೆಂಗಸರು ಅಲ್ಲಿ ಸಭೆ ಸೇರುತ್ತಿದ್ದರು. ಒಂದೊಂದು ದಿನ ಒಬ್ಬರು ಗೀತೆಯನ್ನೋ, ರಾಮಾಯಣವನ್ನೋ ಓದುತ್ತಿದ್ದರು. ವೇದಮ್ಮನವರು ಮನೆ ಕೆಲಸ ಮುಗಿಸಿ ಸಾವಿತ್ರಮ್ಮನ ಮನೆಗೆ ಹೋಗಿ ಸುಮಾರು ಒಂದು ಒಂದೂವರೆ ಗಂಟೆಗಳ ಕಾಲ ಗೀತೆಯನ್ನು ಕೇಳಿ ಮನೆಗೆ ಬಂದು ಅಡಿಗೆ ಮಾಡುತ್ತಿದ್ದರು.

ಒಂದು ಸಂಜೆ ವೇದಮ್ಮ ಸೊಸೆಗೆ ಹೇಳಿದರು.

"ಮನೇಲಿ ಸುಮ್ಮನೆ ಕುಳಿತಿರುವುದರ ಬದಲು ಸಾವಿತ್ರಮ್ಮನ ಮನೆಗಾದರೂ ಬಾ. ಇವತ್ತು ಗೀತೆ ಓದುತ್ತಾರೆ. ಮನಸ್ಸಿನ ಬೇಜಾರು ಸ್ವಲ್ಪವಾದರೂ ಹೋಗಬಹುದು."

ಭಾರತಿಗೆ ಅತ್ತೆಯೊಡನೆ ಹೋಗುವ ಮನಸ್ಸಿರಲಿಲ್ಲ. ಆದರೂ ಪ್ರತಿಯಾಡದೇ ಅವರೊಡನೆ ಸಾವಿತ್ರಮ್ಮನ ಮನೆಗೆ ಹೋದಳು.

ಸಾವಿತ್ರಮ್ಮ ಕೇಳಿದರು. 'ಯಾಕ್ರೀ, ಸೊಸೆ ಇಷ್ಟು ಬಡವಾಗಿದ್ದಾಳೆ.'

"ಏನೋಮ್ಮ, ನನಗಂತೂ ಯಾಕೆ ಎನ್ನುವುದೇ ಗೊತ್ತಿಲ್ಲ."

"ನಿಮ್ಮ ಮಗನ್ನ ಬೇಗ ಕರೆಸಿಕೊಂಡು ಬಿಡಿ. ಆಗ ಸರಿಹೋಗು ತ್ತಾಳೆ" ಎಂದು ಸಾವಿತ್ರಮ್ಮ ಹೇಳಿದೊಡನೆ ಉಳಿದವರು ನಕ್ಕರು. ಅವ ರೊಡನೆ ಮಂಕಾಗಿ ಭಾರತಿಯೂ ನಕ್ಕಳು.

ಸಾವಿತ್ರಮ್ಮನೇ ಗೀತೆಯನ್ನು ಓದಲು ಮೊದಲುಮಾಡಿದರು. ಭಾರತಿ ಗೋಡೆಯೊರಗಿ ಗೀತೆ ಕೇಳುವವಳಂತೆ ಕುಳಿತಿದ್ದರೂ ಮನಸ್ಸು ಆನಂದನನ್ನು ಹುಡುಕಿಕೊಂಡು ಹೋಯಿತು. ಹೃದಯ ಪ್ರೇಮಗೀತೆಯನ್ನು ಹಾಡಲು ಬಯಸಿರುವಾಗ ಈ ವೇದಾಂತ, ಗೀತೆ ಯಾರಿಗೆ ಬೇಕಾಗಿದೆ ಎಂದುಕೊಂಡಳು ಭಾರತಿ. ಅರ್ಜುನ ದ್ರೌಪದಿ, ಸುಭದ್ರೆಯರನ್ನಗಲಿ ಹೇಗೆ ತಾನೇ ರಣರಂಗಕ್ಕೆ ಬಂದನೋ? ದ್ರೌಪದಿಗೆ ಪಾಂಡವರಲ್ಲಿ ಎಲ್ಲರಿ ಗಿಂತಲೂ ಅರ್ಜುನನ ಮೇಲೆ ಪ್ರೇಮ ಹೆಚ್ಚು ಎಂದು ಹೇಳುತ್ತಾರಲ್ಲ, ಆಕೆ ಹೇಗೆ ತನ್ನ ಪ್ರಿಯತಮನನ್ನು ಯುದ್ಧಕ್ಕೆ ಕಳುಹಿಸಿದಳು? ಅವನ ವಿರಹ ದಿಂದ ಅವಳ ಮನಸ್ಸೆಷ್ಟು ನೊಂದಿತೋ? ಈಗ ತಾನೂ, ಆನಂದ ಇಲ್ಲವೇ? ಅವರು ಇಂಗ್ಲೆಂಡಿಗೆ ಯಾಕಾದರೂ ಹೋದರೋ? ಹಾಯಾಗಿ ಮನೆಯಲ್ಲಿ ಇರಬಾರದಾಗಿತ್ತೇ? ಪಾಪ! ಅದು ಅವರ ತಪ್ಪಲ್ಲ. ಆದರೆ ಈ ಅಗಲಿಕೆ.....

ಭಾರತಿ ಕನಸು ಕಾಣತೊಡಗಿದಳು. ರಣರಂಗ, ಕೃಷ್ಣ, ಕರ್ಣ, ಅರ್ಜುನ ಎಲ್ಲರೂ ಅವಳ ಮನಸ್ಸಿನಿಂದ ಮರೆಯಾದರು. ಅವಳ ಹೃದಯ ದಲ್ಲಿ ಸ್ಥಿರವಾಗಿ ನಿಂತ ಮೂರ್ತಿಯೊಂದೇ—ಆನಂದ.

ವೇದಮ್ಮ ಮನೆಗೆ ಬರುವಾಗ ದಾರಿಯಲ್ಲಿಯೇ ಕೇಳಿದರು.

"ಹೇಗಿತ್ತಮ್ಮ ಗೀತೆ?"

"ಗೀತೆಂಯೇನೋ ಚೆನ್ನಾಗಿದೆ. ಆದರೆ ನನಗೆ ಅರ್ಥವಾಗಲಿಲ್ಲ."

ಭಾರತಿಯ ಔದಾಸೀನ್ಯ, ಅನ್ಯಮನಸ್ಕತೆ ಇವುಗಳನ್ನು ಗಮನಿಸಿದ್ದ ವೇದಮ್ಮನವರು ಮಾರನೆಯ ದಿನ ಸೊಸೆಯನ್ನು ಗೀತಾಪಾರಾಯಣಕ್ಕೆ ಕರೆಯಲೂ ಇಲ್ಲ; ಭಾರತಿ ತಾನಾಗಿ ಬರುತ್ತೇನೆಂದು ಹೇಳಲೂ ಇಲ್ಲ. ಒಂದೇ ದಿನದಲ್ಲಿ ಭಾರತಿಯ ಗೀತಾಶ್ರವಣ ಮುಕ್ತಾಯವಾಯಿತು.

ಎಂಟು ತಿಂಗಳು ಕಳೆದು ಬೇಸಿಗೆಯ ಕಾಲ ಕಾಲಿಟ್ಟಿತು.

ಜೊತೆಗಾರನಿಲ್ಲದ ಅವಳ ಜೀವನ ಶೂನ್ಯವಾಗಿತ್ತು. ಉಕ್ಕೇರು ತ್ತಿದ್ದ ಬಯಕೆ, ಆಸೆ, ಆಕಾಂಕ್ಷೆಗಳನ್ನು ಅದುಮಿಡುವುದರಲ್ಲೇ ಅವಳ ದಿನ ಕಳೆದು ಹೋಗುತ್ತಿತ್ತು. ಕ್ಷಣಿಕ ದಾಂಪತ್ಯಜೀವನ ಅವಳ ಹೃದಯವನ್ನು ಅತೃಪ್ತಿಯ ದಳ್ಳುರಿಯಲ್ಲಿ ಬೇಯಿಸುತ್ತಿತ್ತು. ಆಸೆಗೆ ಅಡ್ಡಗಟ್ಟೆ ಹಾಕುವುದ ರಲ್ಲಿ ಅವಳ ಹೃದಯ ಹಣ್ಣಾಯಿತು. ಮನಸ್ಸೆಲ್ಲಿ ಸಂಯಮ ಮೀರಿ ವರ್ತಿಸು

ವುದೋ ಎಂಬ ಗಾಬರಿ ಬೇರೆ ಅವಳನ್ನು ಕಾಡುತ್ತಿತ್ತು. ಬಿಸಿಲಿನ ಬೇಗೆಗೆ ಹಣ್ಣಾದ ಎಲೆಗಳಂತೆ ಭಾರತಿಯ ದೇಹ ವಿರಹತಾಪಕ್ಕೆ ಸಿಕ್ಕಿ ಬಾಡಿತು.

ನಿರೀಕ್ಷೆಯ ತಪಸ್ಸಿನಲ್ಲಿದ್ದಾಗಲೇ ಬೇಸಿಗೆ ಬಂದಿತು.

## ೧೩

ವೇದಮ್ಮನವರ ತಂದೆ ವೆಂಕಟರಾಮಯ್ಯನರಿಗೆ ವೇದಮ್ಮನೇ ದೊಡ್ಡ ಮಗಳು. ಚಂದು ಅವರಿಗಿಂತಲೂ ಬಹಳ ಚಿಕ್ಕವನು. ಚಂದು ಹುಟ್ಟು ವುದಕ್ಕೆ ಒಂದು ವರ್ಷ ಮುಂಚಿತವಾಗಿ ವೇದಮ್ಮನವರಿಗೆ ಮದುವೆಯಾಗಿತ್ತು. ಗಂಡನ ಮನೆಗೆ ಹೋದ ಮೇಲೆ ತಾಯಿ ಗರ್ಭಿಣಿಯೆಂದರಿತು ವೇದಮ್ಮ ಬೆಂಗಳೂರಿನಿಂದ ಹಾಸನಕ್ಕೆ ಓಡಿಬಂದರು. ತಾಯಿಯನ್ನು ಕೂರಿಸಿ, ಮನೆಗೆಲಸಗಳನ್ನು ತಾವೇ ವಹಿಸಿಕೊಂಡರು. ಮನೆಗೆ ಗಂಡು ಮಗು ಇಲ್ಲ ದಿರುವ ಚಿಂತೆ ತಾಯಿ ಸೀತಮ್ಮನಿಗಿಂತಲೂ ವೇದಮ್ಮನನ್ನು ಚೆನ್ನಾಗಿ ಚಿಂತೆಗೀಡುಮಾಡಿತ್ತು.

"ಅಮ್ಮ, ನಾನಾದರೂ ಗಂಡಾಗಿದ್ದರೆ ಚೆನ್ನಾಗಿತ್ತು. ಅಣ್ಣನ ಮನೆಯ ಹೆಸರು ಹೇಳಲು ಗಂಡು ಮಕ್ಕಳಿಲ್ಲದ ಹಾಗಾಯಿತು" ಎಂದು ವೇದಮ್ಮ ಆಗಾಗ್ಗೆ ತಾಯಿಗೆ ಹೇಳುತ್ತಿದ್ದರು. ಆಗ ತಾಯಿ,

"ನೀನು ಯಾವ ಗಂಡು ಮಗನಿಗೆ ಕಡಿಮೆಯಾಗಿದ್ದೀ ವೇದಮ್ಮ? ನೀನೇ ಮಗ, ಮಗಳು" ಎಂದು ವೇದಮ್ಮನಿಗೆ ಹೇಳುತ್ತಿದ್ದಳು. ಸಂತೋಷ ದಿಂದ ತಮ್ಮ ಮಗಳು ಬಾಣಂತಿತನ ಮಾಡುವುದನ್ನು ನೋಡಿ ತಾಯಿಗೆ ನಾಚಿಕೆಯಾಗುತ್ತಿತ್ತು. ಅವರು

"ಏನು ನಾಚಿಕಗೇಡಮ್ಮ, ಮಗಳ ಕೈಯಿಂದ ಬಾಣಂತನ ಮಾಡಿಸಿ ಕೊಳ್ಳುವ ಹಾಗಾಯಿತಲ್ಲಾ" ಎಂದು ಮಗಳಿಗೆ ಹೇಳುತ್ತಿದ್ದರು. ವೇದಮ್ಮ ಬೆಳ್ಳಿಯ ವಿಗ್ರಹದಂತಿದ್ದ ತಮ್ಮನನ್ನು ಅಪ್ಪಿ,

"ಅಮ್ಮಾ, ಈ ಚಿನ್ನದ ಬೊಂಬೆ ಸಿಕ್ಕಿರುವುದಕ್ಕೆ ಸಂತೋಷಪಡದೇ ಹೀಗೆ ಹೇಳಬೇಡ" ಎನ್ನುತ್ತಿದ್ದರು.

"ನಿನ್ನ ತಮ್ಮ ನಿನಗೇ ಪ್ರೀತಿಯಾಗಬೇಕು."

"ಹೌದು. ನನಗಲ್ಲದೇ ಇನ್ನಾರಿಗೆ ಪ್ರೀತಿ ಬರಬೇಕು? ಮಗ ಇಲ್ಲ ಅಂತ ಅಣ್ಣ ಒದ್ದಾಡುತ್ತಿದ್ದರು. ತವರು ವಂಶದ ಮೊಳಕೆ ಚಂದು" ಎಂದು ವೇದಮ್ಮ ತಮ್ಮನನ್ನು ಮುದ್ದಾಡುತ್ತಿದ್ದರು.

ಮು ನಾಲ್ಕು ವರ್ಷದ ಹುಡುಗನಾಗಿದ್ದಾಗ ಸತ್ತು ಹೋದ ... ದ ಅವನಿಗೆ ತಾಯಿಯ ನೆನಪೇ ಇರಲಿಲ್ಲ. ತಾಯಿಗಿಂತಲೂ ಅಕ್ಕ ... ಮಡಿಲಿನಲ್ಲಿ ಬೆಳೆದ ಚಂದು. ಮೊದಮೊದಲು ಅವನದು ಬಹಳ ಹಟದ ಸ್ವಭಾವವಾಗಿದ್ದಾಗ ಹಟಮಾಡತೊಡಗಿದರೆ ತಾಯಿ, ತಂದೆಯ ಯಾವ ಮಾತಿಗೂ ಬಗ್ಗದವನು, ಅಕ್ಕನ ಒಂದು ನಲ್ನುಡಿಗೆ ಶರಣಾಗತನಾಗುತ್ತಿದ್ದ.

ಸೀತಮ್ಮನವರು ಚಂದುವನ್ನು ತಬ್ಬಲಿಯನ್ನಾಗಿ ಮಾಡಿ ಹೋದ ಮೇಲೆ ವೆಂಕಟರಾಮಯ್ಯನವರು ಪುನಃ ಮದುವೆಯಾಗಲಿಲ್ಲ. ಅನೇಕರು ಅವರಿಗೆ ಬುದ್ಧಿವಾದ ಹೇಳಿದರು.

"ಚಂದು ಇನ್ನೂ ಮಗು. ಅವನನ್ನು ನೋಡಿಕೊಳ್ಳುವವರು ಯಾರು? ಅವನಿಗಾಗಿಯಾದರೂ ಮದುವೆಯಾಗಿ" ಎಂದು ಗೆಳೆಯರು ಸಲಹೆ ಕೊಟ್ಟರು.

"ಬರುವವಳು ಬಲತಾಯಿಯಾಗುತ್ತಾಳೇ ಹೊರತು ತಾಯಿಯಾಗುವುದಿಲ್ಲ. ನಮ್ಮ ವೇದಾ ಅವನಿಗೆ ತಾಯಿ ಇಲ್ಲ ಎನಿಸಿಲ್ಲ. ಅವಳು ನೋಡಿಕೊಳ್ಳುತ್ತಾಳೆ" ಎಂದು ವೆಂಕಟರಾಮಯ್ಯನವರು ದೃಢವಾಗಿ ಹೇಳಿಬಿಟ್ಟರು.

ಆನಂದ ಹುಟ್ಟುವವರೆವಿಗೆ ವೇದಮ್ಮನವರು ಚಿಕ್ಕ ತಮ್ಮನಿಗಾಗಿ ಬೆಂಗಳೂರಿಗಿಂತಲೂ ಹಾಸನದಲ್ಲಿ ಹೆಚ್ಚು ಕಾಲ ಕಳೆಯುತ್ತಿದ್ದರು. ಆನಂದ ಹುಟ್ಟಿದಾಗ ವೆಂಕಟರಾಮಯ್ಯನವರು ಮಗಳನ್ನು ಕರೆಸಿಕೊಂಡು, ಅಡಿಗೆಯವರನ್ನಿರಿಸಿ ಮಗಳಿಗೆ ಬಾಣಂತಿತನ ಮಾಡಿ ಕಳುಹಿಸಿದರು. ಅನಂತರ ವೇದಮ್ಮ ಹಾಸನಕ್ಕೆ ಬರುವುದು ಸ್ವಲ್ಪ ಅಪರೂಪವಾಯಿತು. ಆ ವೇಳೆಗೆ ಚಂದುವೂ ದೊಡ್ಡವನಾಗಿದ್ದ.

ಚಂದುವಿಗೆ ಚಿಕ್ಕಂದಿನಿಂದಲೂ ವಿದ್ಯೆಯ ಮೇಲೆ ಆಸಕ್ತಿಯಿರಲಿಲ್ಲ. ಕೈಗೆ ಸಿಕ್ಕಿದ ಹೇಜುಗಳಲ್ಲಿ ಚಿತ್ರ ಗೀಚುತ್ತಿದ್ದ. ಇದ್ದಲಿನ ಚೂರಿನಿಂದ ಮನೆಯ ಗೋಡೆಯ ಮೇಲೆ ಹಕ್ಕಿ, ಗಿಡ, ನದಿ ಇವುಗಳ ಚಿತ್ರವನ್ನು ರಚಿಸಿ, ತಂದೆಯ ಕೈಯಿಂದ 'ಗೋಡೆ ಹಾಳಾಯಿತು' ಎಂದು ಬಯ್ಯಿಸಿಕೊಳ್ಳುತ್ತಿದ್ದ. ತಂದೆ ಮಗನನ್ನು ಬಯ್ದರೂ ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅವನು ಚಿತ್ರ ಬರೆಯುತ್ತಿದ್ದ ರೀತಿಯನ್ನು ಮನಸ್ಸಿನಲ್ಲಿಯೇ ಮೆಚ್ಚಿದರು.

ತರಗತಿಯಲ್ಲಿ ಉಪಾಧ್ಯಾಯರು ಪಾಠ ಹೇಳುತ್ತಿದ್ದರೆ ಪುಸ್ತಕದ ಹಾಳೆಗಳಲ್ಲಿ ಮೇಷ್ಟರ ಚಿತ್ರವನ್ನೋ, ಕಿಟಕಿಯಿಂದಾಚೆ ಕಾಣುತ್ತಿದ್ದ ಆಕಾಶ, ಮೋಡಗಳನ್ನೋ ಬರೆಯುತ್ತಿದ್ದ.

ಚಂದುವಿಗೆ ಅಕ್ಕನನ್ನು ಕಂಡರೆ ಅಪರಿಮಿ. 'ನ್ನು ಹಾಕಿದ ಗೆರೆಯನ್ನು ಅವನು ದಾಟುತ್ತಿರಲಿಲ್ಲ. ಆ ುವಿನ ಸ್ವಭಾವ ಬದಲಾಯಿಸತೊಡಗಿತು. ಇತರರೊಡನೆ ುಖ, ದುಃಖ ಹಂಚಿಕೊಳ್ಳುತ್ತಿದ್ದ ಹುಡುಗ ಈಗ ಯಾವುದನ್ನೂ ಇತರರಿಗೆ ಹೇಳಿಕೊಳ್ಳದೆ ಸಂತೋಷ, ದುಃಖ ಎಲ್ಲವನ್ನೂ ತನ್ನೆದೆಯಲ್ಲೇ ತುಂಬಿಟ್ಟುಕೊಳ್ಳತೊಡಗಿದ. ಮೊದಲು ಸ್ನೇಹಜೀವಿಯಾಗಿ ತುಂಟನಾಗಿದ್ದವನು, ಬೆಳೆಯುತ್ತಾ ಬಂದಂತೆ ಎಲ್ಲರಿಂದಲೂ ದೂರವಾಗಿ, ಭಾವಜೀವಿಯಾಗಿ ಪರಮಸಾಧುವಾದನು. ಇದ್ದಕ್ಕಿದ್ದಂತೆಯೇ ಮಗನ ಸ್ವಭಾವದಲ್ಲಾದ ಬದಲಾವಣೆಯನ್ನು ವೆಂಕಟರಾಮಯ್ಯನವರು ಗಮನಿಸಿದರು. "ಏನೋ ಹುಡುಗು ಸ್ವಭಾವ" ಎಂದು ಮೊದಲು ತಾತ್ಸಾರ ಭಾವನೆ ತಾಳಿದರು. ಆದರೆ ಅವನು ಯಾರೊಡನೆಯೂ ಬೆರೆಯದೇ ಏಕಾಂಗಿಯಾಗಿ ಕಾಲ ಕಳೆಯುವುದನ್ನು ನೋಡಿ "ಇವೇಕೆ ಹೀಗಾದ" ಎಂದು ಯೋಚನೆ ಮಾಡತೊಡಗಿದರು. ಮೊದಲಿನ ಸರಸ ಸ್ವಭಾವ, ಹುಡುಗಾಟಿಕೆ, ವಿನೋದ ಮರೆಯಾಗಿ ಗಾಂಭೀರ್ಯ, ಮೌನಕ್ಕೆಡೆ ಕೊಟ್ಟಿತು.

"ಇದೇಕೋ ಮಗ್ಗು, ಈಚೆಗೆ ಏನೋ ಒಂದು ಬಗೆಯಾಗಿರುವೆ" ಎಂದು ತಂದೆ ಕೇಳಿದರೆ 'ಇಲ್ಲಣ್ಣ' ಎಂದು ಮೊಟಕಾಗಿ ಉತ್ತರ ಹೇಳುತ್ತಿದ್ದ. ತಮ್ಮೆದುರಿಗೆ ಮನಸ್ಸು ಬಿಚ್ಚಿ ಮಾತನಾಡದಿದ್ದರೂ, ಅಕ್ಕನೆದುರಿಗೆ ಎಲ್ಲವನ್ನೂ ಹೇಳಿಕೊಳ್ಳಬಹುದೆಂದರಿತು ತಂದೆ ಮಗಳನ್ನು ಬೆಂಗಳೂರಿನಿಂದ ಕರೆಸಿದರು

ವೇದಮ್ಮ ತಮ್ಮನ ತಲೆಯ ಮೇಲೆ ಸ್ನೇಹದಿಂದ ಕೈಯಾಡಿಸಿ ಕೇಳಿದರು.

"ಇದ್ಯಾಕೋ ಚಂದು ಹೀಗಾಗಿದೀಯಾ?"

"ಹೇಗಿದೀನಿ"

"ಏನೋ ಒಂದು ತರಹ ಮಂಕಾಗಿದೀಯಾ. ಯಾರೊಡನೆಯೂ ಮಾತಿಲ್ಲ, ಕತೆಯಿಲ್ಲ"

"ಅವೆಲ್ಲ ನಿಮ್ಮ ಭ್ರಮೆ. ನಾನು ಮೊದಲಿನಂತೆಯೇ ಇವೇನೆ. ನಾನು ಬದಲಾಯಿಸಿಲ್ಲ. ನೀವು ಬದಲಾಯಿಸಿರಬೇಕು ಎಂದು ತೋರುತ್ತವೆ. ಅಥವಾ ನೀವು ನನ್ನನ್ನು ಬಣ್ಣದ ಕನ್ನಡಕ ಹಾಕಿಕೊಂಡು ನೋಡುತ್ತಿರಬೇಕು."

ವೇದಮ್ಮ ತಮ್ಮನನ್ನು ನಾನಾ ಬಗೆಯಾಗಿ ಪ್ರಶ್ನಿಸಿ ಕೇಳಿದರು.

ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ.

ಬಿ.ಎಸ್‌ಸಿ., ಪಾಸಾದೊಡನೆ ವೆಂಕಟರಾಮಯ್ಯನವರು ಮಗನಿಗೆ ಎಂಜಿನಿಯರಿಂಗ್ ಕಾಲೇಜು ಸೇರಿಕೊಳ್ಳುವಂತೆ ಒತ್ತಾಯ ಮಾಡಿದರು. ವಿದ್ಯೆಯಲ್ಲಿ ಆಸಕ್ತಿಯಿಲ್ಲದುದರಿಂದ ಚಂದು ಮುಂದೆ ಓದಲು ಒಪ್ಪಲಿಲ್ಲ. ಮುಂದೇನು ಮಾಡಬೇಕೆಂದು ಅವನು ಯೋಚಿಸುತ್ತಿರುವಾಗಲೇ ವೆಂಕಟ ರಾಮಯ್ಯನವರು ಸತ್ತುಹೋದರು. ಚಂದು ಹಾಸನದಲ್ಲಿದ್ದ ತನ್ನ ಮನೆ ಯನ್ನು ಬಾಡಿಗೆಗೆ ಕೊಟ್ಟು, ಕೆಲಸ ಹುಡುಕತೊಡಗಿದನು. ಚಂದು ಪೈಲಟ್ ಆಫೀಸರಾಗಬೇಕೆಂದು ನಿಶ್ಚಯಿಸಿದಾಗ, ವೇದಮ್ಮ ಮೂರು ದಿನ ಅನ್ನ, ನೀರು ಬಿಟ್ಟು ಅತ್ತು ಸತ್ಯಾಗ್ರಹ ಮಾಡಿ ತಮ್ಮನನ್ನು ಅವನ ನಿರ್ಧಾರದಿಂದ ಹಿಂದಿರುಗಿಸಿದರು. ಅಕ್ಕನ ಮಮತೆಗೆ ಕಟ್ಟುಬಿದ್ದು ಚಂದು ಮನಸ್ಸು ಬದ ಲಾಯಿಸಬೇಕಾಗಿ ಬಂತು.

ಧಾರವಾಡದ ಹೈಸ್ಕೂಲಿನಲ್ಲಿ ಉಪಾಧ್ಯಾಯನ ಕೆಲಸ ಸಿಕ್ಕಿದೊಡನೆ ಚಂದು ಧಾರವಾಡಕ್ಕೆ ಹೊರಟುಹೋದನು. ರೂಮೊಂದನ್ನು ಬಾಡಿಗೆಗೆ ತೆಗೆದುಕೊಂಡು ಹೋಟಲಿನಲ್ಲಿ ಊಟಮಾಡಿ ಅಲ್ಲಿ ಜೀವನ ತಳ್ಳತೊಡ ಗಿದ.

ತಮ್ಮನ ಸನ್ಯಾಸ ವೇದಮ್ಮನಿಗೆ ಒಪ್ಪಿಗೆಯಾಗಲಿಲ್ಲ. ನಾನಾ ಬಗೆ ಯಾಗಿ ಮದುವೆ ಮಾಡಿಕೊಳ್ಳಲು ಅವರು ಅವನಿಗೆ ಹೇಳಿದರು.

"ಇನ್ನೂ ಎಷ್ಟು ದಿನ ಹೋಟಲೂಟ ತಿನ್ನುತ್ತೀಯೋ? ಮದುವೆ ಮಾಡಿಕೊಳ್ಳಬಾರದೇ?"

"ಹೋಟಲೂಟ ಬೇಡದಿದ್ದರೆ ಅಡಿಗೆಯವನನ್ನು ಇಟ್ಟುಕೊಂಡ ರಾಯಿತು. ಅದಕ್ಕಾಗಿ ಮದುವೆಯಾಗಬೇಕೆ?" ಎಂದು ಅಕ್ಕನನ್ನೇ ಪ್ರಶ್ನಿ ಸುತ್ತಿದ್ದ.

ಅವನ ಮನಸ್ಸು ಬದಲಾಯಿಸುವುದು ಸಾಧ್ಯವಿಲ್ಲವೆಂದು ತಿಳಿದು ವೇದಮ್ಮ ಸುಮ್ಮನಾದರು.

ಉಪಾಧ್ಯಾಯ ವೃತ್ತಿಯಲ್ಲಿ ರಜಗಳು ಹೇರಳವಾಗಿ ದೊರೆಯುತ್ತಿದ್ದು ದರಿಂದ, ಚಂದು ಮೊದಲಿನಿಂದಲೂ ತನಗೆ ಆಸಕ್ತಿಯಿದ್ದ ಚಿತ್ರ ಕಲೆಯನ್ನು ಅಭಿವೃದ್ಧಿ ಮಾಡಿಕೊಳ್ಳತೊಡಗಿದನು. ಚಿತ್ರಕಲೆಯನ್ನು ಸಾಧಿಸುವಾಗ ಅವ ನಿಗೆ ಗುರುಗಳ ಆವಶ್ಯಕತೆಯೂ ತೋರಲಿಲ್ಲ. ಅನುಭವ ಹೆಚ್ಚಿದಂತೆ, ಅಭ್ಯಾಸ ವಾಗಿದಂತೆ ಅವನ ಕೈ ಪಳಗತೊಡಗಿತು. ಚಿತ್ರ ಬರೆಯುವ ಹವ್ಯಾಸ ದೊಡನೆ ಸಾಹಿತ್ಯಾಭ್ಯಾಸವೂ ನಿರಂತರವಾಗಿ ನಡೆದಿತ್ತು. ಪುಸ್ತಕ, ಕುಂಚ

ಇವು ಅವನ ಎರಡು ಕಣ್ಣುಗಳಾಗಿದ್ದವು.

## ೧೪

ಬೇಸಿಗೆಯ ರಜಮೊಡನೆ ಚಂದು ಬೆಂಗಳೂರಿಗೆ ಬರುವೆನೆಂದು ಬರೆದಿದ್ದ ಕಾಗದ ವೇದಮ್ಮನ ಕೈಸೇರಿತು. ವಕ್ರ ಮನಸ್ಸಿನ ತಮ್ಮ ಅಕ್ಕನ ಮೇಲಿನ ಅಭಿಮಾನದಿಂದ ಬರುವುದನ್ನು ನೋಡಿ ವೇದಮ್ಮ ಹಿಗ್ಗಿದರು. ಆನಂದ ಇಂಗ್ಲೆಂಡಿನಿಂದ ಮರಳಿ ಬಂದಷ್ಟು ಸಂತೋಷವಾಯಿತು ಅವರಿಗೆ. ಚಂದು ಬರುವ ಸುದ್ದಿಯನ್ನು ಸಂಭ್ರಮದಿಂದ ಗಂಡನಿಗೆ ಹೇಳಿದರು ಆಕೆ.

"ನಮ್ಮ ಚಂದು ಬರ್‍ತಾನೆ."

"ಬಹಳ ಸಂತೋಷ" ಎಂದರು ರಂಗಣ್ಣನವರು.

ಕುಗ್ಗಿದ ಮನದಿಂದ ಆಕಾಶದ ಕಡೆ ನೋಡುತ್ತಾ ಕುಳಿತಿದ್ದ ಭಾರತಿಗೆ

"ಭಾರತಿ, ಚಂದು ನಾಡಿದ್ದು ಇಲ್ಲಿಗೆ ಬರ್‍ತಾನೆ. ರಜ ಕಳೆಯುವವರೆವಿಗೂ ಇಲ್ಲೇ ಇರ್‍ತಾನೆ" ಎಂದರು.

"ಚಂದು! ಯಾರು........?" ಭಾರತಿಗೆ ತಟ್ಟನೆ ನೆನಪಾಗಲಿಲ್ಲ.

"ನನ್ನ ತಮ್ಮ ಕಣೇ. ಇಷ್ಟು ಬೇಗ ಮರೆತುಬಿಟ್ಟೆಯಾ?"

ಭಾರತಿಗೆ ಜ್ಞಾಪಕ ಬಂತು. ಚಂದು ಬರುವನೆಂಬ ಸುದ್ದಿ ಅವಳಿಗೆ ಅದೇಕೋ ಪ್ರಿಯವಾಗಲಿಲ್ಲ. ತನ್ನ ಮದುವೆಯಲ್ಲವನನ್ನು ನೋಡಿದ್ದರೂ ಅವಳಿಗೆ ಅವನ ಮುಖ ಮರೆತು ಹೋಗಿತ್ತು. ಆದರೂ ಆ ಹೊಳಪುಕಣ್ಣುಗಳ ತೀಕ್ಷ್ಣತೆಯನ್ನು ಅವಳು ಮರೆತಿರಲಿಲ್ಲ. ತನ್ನ ಕಣ್ಣುಗಳಲ್ಲಿ ಅವನು ತನ್ನ ಕಣ್ಣನ್ನು ನಾಟಿ, ಅಂತರಂಗವನ್ನು ಬಗೆದು ನೋಡುವ ರೀತಿ ಅವಳಿಗೆ ಹೆದರಿಕೆಯನ್ನುಂಟುಮಾಡಿತ್ತು.

ಭಾರತಿ ಚೆಲುವೆಯಾದುದರಿಂದ, ಅವಳು ಎಲ್ಲಿಗಾದರೂ ಹೊರಟರೆ ತರುಣರು, ಮುದುಕರು ಮೊದಲಾಗಿ ಕತ್ತು ತಿರುಗಿಸಿ ಅವಳನ್ನು ನೋಡುತ್ತಿದ್ದರು. ಹೆಂಗಸರು, ಹುಡುಗಿಯರು ಮೆಚ್ಚುಗೆಯಿಂದ ನೋಡಿ, ಮತ್ಸರದಿಂದ ಒಬ್ಬರಿಗೊಬ್ಬರು ಪಿಸುಗುಟ್ಟುತ್ತಿದ್ದರು. ಒಂದು ಸಾರಿ ಭಾರತಿ ಅಲಂಕರಿಸಿಕೊಂಡು ತಮ್ಮನೊಡನೆ ಹೊರಗೆ ಹೊರಟಾಗ, ಬೀದಿಯಲ್ಲಿ ಸೈಕಲ್ ಮೇಲೆ ಹೋಗುತ್ತಿದ್ದ ತರುಣನೊಬ್ಬ ಅವಳ ಕಡೆಯೇ ನೋಡುತ್ತಾ ಹೋಗಿ, ಸೈಕಲ್ ಮರಕ್ಕೆ ಡಿಕ್ಕಿ ಹೊಡೆದಮೇಲೆ ಎಚ್ಚರಗೊಂಡಿದ್ದ. ಹೆಂಗಸರು, ಗಂಡಸರು ಅವಳು ಎಲ್ಲಿದ್ದರೂ ದಿಟ್ಟಿಸಿ ನೋಡು

ವುದು ಸಾಮಾನ್ಯವಾಗಿತ್ತು. ಆದರೆ ಅವರ ನೋಟ ಅವಳ ಚಿತ್ತವನ್ನು ಕಲಕಿರಲಿಲ್ಲ. ಅವು ಕೇವಲ ಹಾರುನೋಟಗಳಾಗಿದ್ದವು. ಆದರೆ ಚಂದುವಿನ ನೋಟವೇ ಬೇರೆ ರೀತಿಯಾಗಿತ್ತು. ಅವನು ತನ್ನ ಮುಖವನ್ನು ನೋಡಿದಾಗ ಭಾರತಿಗೆ ಎಲ್ಲಾದರೂ ಅಡಗಬೇಕು ಎನ್ನುವ ಭಾವನೆ ಉದಯಿಸುತ್ತಿತ್ತು. ಕತ್ತಲೆಯಿಂದ ಒಂದು ಜೊತೆ ಕಣ್ಣುಗಳು ಭಾರತಿಯನ್ನು ತೀಕ್ಷ್ಣವಾಗಿ ನೋಡಿದಂತೆ ಭಾಸವಾಯಿತು.

ಆ ದಿನ ಚಂದು ಬರುವನೆಂದು ವೇದಮ್ಮ ಸಂಭ್ರಮಪಡುತ್ತಿದ್ದರು ಭಾರತಿ ತನ್ನೂಟ ಮುಗಿಸಿ ಮಲಗಲು ಮಹಡಿಯ ಮೇಲೆ ಹೋದಳು. ಬಹಳ ಹೊತ್ತು ಮಲಗಿ ನಿದ್ರಿಸಿದರೂ ನಿದ್ದೆ ಬರಲಿಲ್ಲ. ಮೇಜಿನ ಮೇಲಿದ್ದ ಇಂಗ್ಲಿಷ್ ಕಾದಂಬರಿಯೊಂದನ್ನು ಕೈಯಲ್ಲಿ ಹಿಡಿದು ಕುಳಿತಳು. ಆದರೆ ಅವಳ ಮನಸ್ಸು ಮಾತ್ರ ಪುಸ್ತಕದ ಮೇಲಿರಲಿಲ್ಲ. ಇತ್ತ ಅಡಿಗೆಯ ಮನೆಯಲ್ಲಿ ವೇದಮ್ಮನ ಕೆಲಸವಿನ್ನೂ ಮುಗಿದಿರಲಿಲ್ಲ. ಅಡಿಗೆ ಮನೆಯಿಂದ ಪಾತ್ರೆಗಳ ಸದ್ದು ಅಸ್ಪಷ್ಟವಾಗಿ ಕೇಳಿಸುತ್ತಿತ್ತು. ಪಾತ್ರೆಗಳ ಸದ್ದನ್ನು ಆಲಿಸುತ್ತಾ ಭಾರತಿ ಕಾದಂಬರಿಯ ಪುಟಗಳನ್ನು ಮಗುಚುತ್ತಿದ್ದಳು. ಮನಸ್ಸು ಆನಂದನಲ್ಲಿ ಐಕ್ಯವಾಗಿತ್ತು. ಒಂದು ವರ್ಷ ಹೇಗೆ ಉರುಳಿ ಹೋಯಿತೆಂಬುದು ಅವಳಿಗೇ ಒಂದು ಸಮಸ್ಯೆಯಾಗಿತ್ತು. ಹಗಲಿಗಿಂತಲೂ ಇರುಳು ಒಂಟಿಯಾಗಿ ಕಳೆಯುವುದು ಅವಳಿಗೆ ಘೋರವಾಗಿತ್ತು. ಜ್ವಾಲೆಯಂತೆ ದಹಿಸುತ್ತಿದ್ದ ಹಾಸಿಗೆಯ ಮೇಲೆ ಅನೇಕ ರಾತ್ರಿಗಳನ್ನು ನಿದ್ದೆಯಿಲ್ಲದೆ ಭಾರತಿ ಕಳೆದಿದ್ದಳು.

ಭಾರತಿಗೆ ಯಾವಾಗಲೋ ನಿದ್ದೆ ಬಂದುಬಿಟ್ಟಿತು. ಮೈಮೇಲಿನ ಹೊದಿಕೆ, ಕೈಲಿದ್ದ ಪುಸ್ತಕ ಎರಡೂ ಮಂಚದಿಂದ ಕೆಳಗೆ ಬಿದ್ದಿದ್ದವು. ಕಿಟಕಿಯಿಂದ ಗಾಳಿ ಜೋರಾಗಿ ಬೀಸಿದಾಗ ಭಾರತಿಗೆ ಎಚ್ಚರವಾಯಿತು. ಭಾರತಿ ಮೇಜಿನ ಮೇಲಿದ್ದ ಗಡಿಯಾರದ ಕಡೆ ಕಣ್ಣು ಹೊರಳಿಸಿದಳು. ನಾಲ್ಕು ಗಂಟೆಯಾಗಿತ್ತು. ಮೈಮುರಿದು ಆಕಳಿಸುತ್ತಾ ಕೆಳಗಿಳಿದು ಬಂದಳು. ಮುಖ ತೊಳೆದು, ಹಣೆಗೆ ಕುಂಕುಮ ಬೊಟ್ಟಿಟ್ಟು, ಅಡಿಗೆ ಮನೆಯ ಹೊಸಿಲು ದಾಟ ಒಳಗೆ ಬಂದಳು.

ಚಂದು ಕಾಫಿಯ ಬಟ್ಟಲು ಕೈಲಿ ಹಿಡಿದಿದ್ದ. ವೇದಮ್ಮ ತಮ್ಮನ ಎದುರಿಗೆ ಕುಳಿತು ಉಪಚಾರ ಮಾಡುತ್ತಿದ್ದರು. ಹಾಸ್ಯದ ನಗೆ ಚಂದುವಿನ ಮುಖದಮೇಲೆ ಲಾಸ್ಯವಾಡುತ್ತಿತ್ತು. ತುಟಿಯವರೆವಿಗೆ ಬಟ್ಟಲು ತೆಗೆದುಕೊಂಡು ಹೋಗಿದ್ದ ಕೈ ಒಂದು ಗಳಿಗೆ ತಡೆಯಿತು. ಬಾಗಿಲು ದಾಟಿ

ಒಳಗೆ ಬಂದ ಭಾರತಿಯನ್ನು ಬಟ್ಟಲ ಮೇಲಿನಿಂದ ಚಂದು ಕಣ್ಣೆತ್ತಿ ನೋಡಿದ. ಕೂಡಲೇ ಕಣ್ಣು ತಗ್ಗಿಸಿ ಕಾಫಿಯನ್ನು ಕುಡಿದ.

ಆಗ ತಾನೇ ನಿದ್ದೆಯಿಂದ ಎದ್ದು ಬಂದಿದ್ದ ಭಾರತಿಯ ಕಣ್ಣಿಗೆ ಚಂದು ಬೇಗ ಆನಂದನಂತೆಯೇ ಕಾಣಿಸಿದ. ಆನಂದನಿಗಿಂತಲೂ ಚಂದುವಿನದು ಒಳ್ಳೆ ಕೆಂಪು. ಎತ್ತರ, ಗಾತ್ರದಲ್ಲಿಯೂ ಚಂದು ಆನಂದನನ್ನು ಮೀರಿಸಿದ್ದ. ಆದರೆ ಮುಖದ ಆಕಾರ, ಚಹರೆ, ನಗು, ಚಲನವಲನಗಳು ಆನಂದನನ್ನೇ ಹೋಲುತ್ತಿದ್ದವು.

ಭಾರತಿ ಮುಂದಡಿಯಿಟ್ಟಿದ್ದ ಹೆಜ್ಜೆಯನ್ನು ಹಿಂದಕ್ಕಿಟ್ಟಳು. ವೇದಮ್ಮ ಅದನ್ನು ಗಮನಿಸಿ,

"ಬಾಮ್ಮ, ಹೊರಗಿನವರು ಯಾರೂ ಬಂದಿಲ್ಲ. ಚಂದು ನಮ್ಮವನು" ಎಂದರು. ಭಾರತಿ ಹಿಂಜರಿಯುತ್ತಾ ಒಳಗೆ ಬಂದು ಕುಳಿತಳು ಎದುರಿಗೆ ಕುಳಿತಿದ್ದ ರೂಪರಾಶಿಯನ್ನು ಚಂದು ನಿರ್ಭಯವಾಗಿ ನೋಡತೊಡಗಿದನು.

ನಯವಾದ ಕೊರಳಿನ ಕೊಂಕು, ಕೆನ್ನೆಯ ಕೋಮಲತೆ, ಕಣ್ಣಿನ ಕಾಂತಿ, ಕೂದಲಿನ ಕಪ್ಪು, ತುಟಿಯ ರಂಗು, ದೇಹದ ಮಾಟ. ಒಂದೊಂದೂ ಅವನನ್ನು ಮರುಳುಗೊಳಿಸಿದವು. ಯಾವುದಾದರೂ ಒಂದು ಅಂಗದಲ್ಲಿ ತಪ್ಪುಕಂಡು ಹಿಡಿಯಲೆತ್ನಿಸಿ ಚಂದು ಅವಳನ್ನು ಮತ್ತಷ್ಟು ಸೂಕ್ಷ್ಮವಾಗಿ ನೋಡಿದನು.

ಆ ದೊಡ್ಡ ಕಣ್ಣುಗಳಲ್ಲಿ ತಪ್ಪು ಕಂಡುಹಿಡಿಯಲು ಸಾಧ್ಯವೇ? ಹಣೆ ಮುಖಕ್ಕೆ ಸರಿಯಾದ ಪ್ರಮಾಣದಲ್ಲಿತ್ತು. ಹುಬ್ಬುಗಳು ಕಣ್ಣಿನ ಹೊಳಪು ನೋಡಲೆಂಬಂತೆ ಬಾಗಿ ಬಂದಿದ್ದವು.

"ಇದೇನು, ನೀವಿಬ್ಬರೂ ಮಾತನಾಡಬಾರದು ಅಂತ ಮಾಡಿದೀರಾ" ವೇದಮ್ಮ ಕೇಳಿದರು. ಅವರ ಮಾತು ಕೇಳಿ ಭಾರತಿ ನಕ್ಕಳು. ಕೆನ್ನೆಗಳ ಮಧ್ಯದಲ್ಲಿ ಗುಳಿ ಆಳವಾಗಿ ಮೂಡಿ ಮರೆಯಾಯಿತು. ಚಂದು ಅದನ್ನು ನೋಡಿ ಪೂರ್ಣ ಸೋತುಹೋದ.

ಭಾರತಿ ತಿಂಡಿ ಮುಗಿದ ಕೂಡಲೇ ತನ್ನ ತಟ್ಟೆ ಬಟ್ಟಲುಗಳನ್ನು ಎತ್ತಿಕೊಂಡು ಹೊರಗೆ ಹೊರಡುವುದರಲ್ಲಿದ್ದಳು.

"ಹಾಗೇ ಚಂದುವಿನದೂ ತಗೊಂಡು ಹೋಗಮ್ಮ" ಎಂದು ವೇದಮ್ಮ ಕೂಗಿದರು. ಭಾರತಿ ಹಿಂದಿರುಗಿ ಬಂದು ಅವನ ಮುಂದೆ ಬಗ್ಗಿದಳು. ಬೆನ್ನಿನ ಮೇಲೆ ಮಲಗಿದ್ದ ಜಡೆ, ಮುಂದೆ ತೂಗಿ ಬಂದು ನೆಲದ ಮೇಲೆ ಈಜಾಡಿತು. ಭಾರತಿ ತಟ್ಟೆಗಳನ್ನು ಜೋಡಿಸಿಕೊಂಡು ಹೊರಟುಹೋದಳು.

ಚಂದುವಿಗೆ ಮದುವೆಯ ದಿನ ಕಾಣಿಸಿದುದಕ್ಕಿಂತಲೂ ಭಾರತಿ ಈಗ ಹೆಚ್ಚು ಅಂದವಾಗಿ ತೋರಿದಳು. ವೈವಾಹಿಕ ಜೀವನ ಅವಳ ದೇಹದ ಲಾವಣ್ಯವನ್ನು ಇಮ್ಮಡಿಸಿತ್ತು. ಕೆನ್ನೆ ಮೊದಲಿಗಿಂತಲೂ ತುಂಬಿಕೊಂಡು ನಸುಕೆಂಪು ಛಾಯೆಯು ಮೇಲಿತ್ತು. ನಡಿಗೆಯಲ್ಲಿ ವಿಲಾಸ, ಆಲಸ್ಯ ತುಂಬಿದ್ದವು. ಚೆಲ್ಲಾಟದ ಹುಡುಗಿಯಾಗಿದ್ದ ಭಾರತಿ ಒಂದೇ ವರ್ಷದಲ್ಲಿ ಸೊಂಪು ಚೆಲ್ಲುವ ತರುಣಿಯಾಗಿದ್ದಳು.

ವಿರಹದಿಂದ ಅವಳ ಮುಖ ಕಳೆಗುಂದಿರುವುದನ್ನು ಚಂದುವಿನ ಸೂಕ್ಷ್ಮ ಕಣ್ಣುಗಳು ಗಮನಿಸಿದವು. ಅಗಲಿಕೆಯಿಂದ ಮುಖ ಕೊಂಚ ಬಾಡಿದ್ದರೂ, ವಿರಹ ಜ್ವಾಲೆಯಿಂದ ಉರಿಯುತ್ತಿದ್ದ ಆ ಎರಡು ಕಣ್ಣುಗಳ ಅನುಪಮ ಕಾಂತಿಗೆ ಚಂದು ಮರುಳಾದನು. ಕಣ್ಣುಗಳಲ್ಲಿನ ವಿರಹ ವಿಲಾಸ ಹತ್ತಿಸಿದ ಬೆಂಕಿಯಂತೆ ಉರಿಯುತ್ತಿದ್ದವು .ದೇಹ ಮೊದಲಿಗಿಂತ ತುಂಬಿ ಕೊಂಡಿದ್ದರೂ ನಡಿಗೆಯಲ್ಲಿ ಆಲಸ್ಯ, ಮಾತಿನಲ್ಲಿ ಔದಾಸೀನ್ಯವಿತ್ತು.

"ಇಂತಹ ರೂಪಸಿಯನ್ನು ಬಿಟ್ಟು ಹೋಗಲು ಆನಂದನಿಗೆ ಮನಸ್ಸಾದರೂ ಹೇಗೆ ಬಂದಿತು? ನನಗೇನಾದರೂ ಇಂತಹ ಚೆಲುವೆ ಸಿಕ್ಕಿದ್ದರೆ ಅಮೇರಿಕಾದ ಅಧ್ಯಕ್ಷ ಸ್ಥಾನಕ್ಕೆ ಸ್ವಾಗತಿಸಿದ್ದರೂ ಹೋಗುತ್ತಿರ ಲಿಲ್ಲ" ಎಂದು ಚಂದು ಮನಸ್ಸಿನಲ್ಲಿಯೇ ಹೇಳಿಕೊಂಡ.

ಸಂಜೆಗೆ ಎಂದಿನಂತೆ ವೇದಮ್ಮನವರು ಗೀತಾಪಾರಾಯಣಕ್ಕೆ ಸಾವಿತ್ರಮ್ಮನವರ ಮನೆಗೆ ಹೊರಟುಹೋದರು. ರಂಗಣ್ಣನವರು ನಿತ್ಯದ 'ಗಾಳೀ ಸಂಚಾರ'ಕ್ಕೆ ಹೊರಡುವ ಮುನ್ನ ಸೊಸೆಯನ್ನು ಕೂಗಿ,

"ತಾಯೀ, ಮನೆಯಲ್ಲಿ ಯಾರೂ ಇಲ್ಲ ಬಾಗಿಲು ಹಾಕಿಕೊಂಡಿರು. ನಾನು ಬೇಗ ಬಂದುಬಿಡುತ್ತೇನೆ" ಎಂದರು. ಭಾರತಿ ಬಾಗಿಲು ಹಾಕಿ, ಹಾಲಿನಲ್ಲಿಯೇ ಕುಳಿತಳು. ಅರ್ಧಗಂಟೆಯ ಅನಂತರ ಹೊರಗಿನಿಂದ ಯಾರೋ ಬಾಗಿಲು ಬಡಿದರು. ಭಾರತಿ ಬಾಗಿಲು ತೆಗೆದಳು. ಹೊಸಿಲಾಚೆ ಮೆಟ್ಟಲಿನ ಮೇಲೆ ಚಂದು ನಿಂತಿದ್ದ.

"ಇನ್ನೂ ಸ್ವಲ್ಪ ಎತ್ತರವಾಗಿದ್ದರೆ ಚೆನ್ನಾಗಿತ್ತು" ಎಂದುಕೊಂಡ ಚಂದು. ಭಾರತಿ ಬಾಗಿಲು ತೆಗೆದು, ಮಹಡಿ ಹತ್ತಿ ಹೋದಳು.

ಚಂದು ಅವಳ ಚಲನವಲನವನ್ನೇ ಸೆಟ್ಟ ಕಣ್ಣಿನಿಂದ ನೋಡು ತ್ತಿದ್ದ. ತಾನು ಬಂದೊಡನೆ ಅವಳು ಮಹಡಿಯ ಮೇಲೆ ಹೊರಟು ಹೋಗಲು ಕಾರಣವೇನು? ತನ್ನೆದುರಿಗೆ ಬರಲು ನಾಚಿಕೆಯೇ ಅಥವಾ ಹೆದರಿಕೆಯೇ?

ಚಂದುವಿನ ಮನಸ್ಸು ಸೂಜಿಗಲ್ಲಿನಿಂದ ಆಕರ್ಷಿಸಲ್ಪಟ್ಟ ಕಬ್ಬಿಣದಂತೆ ಮತ್ತೆ, ಮತ್ತೆ ಅವಳ ಕಡೆಗೇ ಓಡುತ್ತಿತ್ತು. ಯಾವ ವಿಚಾರ ಯೋಚಿಸತೊಡಗಿದರೂ ತಗ್ಗು ಪ್ರದೇಶದ ಕಡೆ ಹರಿಯುವ ನೀರಿನಂತೆ ಅವನ ಮನಸ್ಸು ಅವಳ ಕಡೆ ಹರಿಯುತ್ತಿತ್ತು. ಆನಂದನ ಹೆಂಡತಿಯನ್ನು ಈ ದೃಷ್ಟಿಯಿಂದ ನೋಡುವುದು ಸರಿಯೇ? ಈ ಯೋಚನೆ ಬಂದೊಡನೆ ಚಂದುವಿನ ಮುಖ ಬಾಡಿಹೋಯಿತು. ಹತ್ತಿರವಿದ್ದ ಕುರ್ಚಿಯ ಮೇಲೆ ಅವನು ಕುಸಿದು ಬಿದ್ದ.

ತಾಯಿ ಅವನಿಗೆ ಬುದ್ಧಿ ತಿಳಿಯುವುದಕ್ಕೆ ಮುಂಚೆಯೇ ಸತ್ತು ಹೋಗಿದ್ದರು. ಅಕ್ಕನನ್ನು ಉಳಿದು ಅವನಿಗೆ ಬೇರಾವ ಹೆಂಗಸರ ಪರಿಚಯವೂ ಇರಲಿಲ್ಲ. ಮೊದಲಿನಿಂದಲೂ ಹೆಂಗಸರ ಬಗ್ಗೆ ತಾತ್ಸಾರ, ತಿರಸ್ಕಾರ, ಅಲಕ್ಷ್ಯ ಭಾವನೆ ಅವನೊಡನೆ ಬೆಳೆದು ಬಂದಿತ್ತು.

ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಚಂದುವಿನ ಪ್ರಾಣ ಸ್ನೇಹಿತನ ಹೆಸರು ಗೋಪೀನಾಥ. ಗೋಪೀನಾಥ ಚಿಕ್ಕ ಮಗುವಾಗಿದ್ದಾಗಲೇ ಅವನ ತಾಯಿ ತೀರಿಹೋಗಿದ್ದರು. ಅವರ ತಂದೆ ಮರುಮದುವೆಯಾಗಿದ್ದರು. ಬಲತಾಯಿ ಗೋಪಿನಾಥನಿಗೆ ಚಿತ್ರಹಿಂಸೆ ಕೊಡುತ್ತಿದ್ದರು. ತಾಯಿ ಕೊಡುತ್ತಿದ್ದ ಹಿಂಸೆಯನ್ನು ತಂದೆಯೊಡನೆ ಹೇಳುವ ಧೈರ್ಯವಿಲ್ಲದೇ ಗೋಪೀನಾಥ ಒಳಗೇ ಸಹಿಸುತ್ತಿದ್ದ. ಚಂದುವಿನ ಸ್ನೇಹವಾದ ಮೇಲೆ ಗೆಳೆಯನ ಕರುಣಾಮಯ ಹೃದಯ ನೋಡಿ, ಗೋಪಿ ಬಲತಾಯಿ ತನಗೆ ಕೊಡುವ ಚಿತ್ರಹಿಂಸೆ, ನರಕಯಾತನೆಯನ್ನು ಚಂದುವಿನೊಡನೆ ಹೇಳಿಕೊಂಡು ಹೃದಯ ಹಗುರಮಾಡಿಕೊಳ್ಳುತ್ತಿದ್ದ. ಗೆಳೆಯರಿಬ್ಬರೂ ಶಾಲೆ ಮುಗಿದ ಮೇಲೆ ಹಿಂದಿದ್ದ ಮಣ್ಣು ದಿಬ್ಬದ ಮೇಲೆ ಕುಳಿತುಕೊಳ್ಳುತ್ತಿದ್ದರು. ಆಗ ಹೆಂಗಸರ ಬಗ್ಗೆ ಮೊಳಕೆಯೊಡೆದ ಭಾವನೆ ಕಾಲೇಜಿಗೆ ಬಂದ ಮೇಲೆ ಸಣ್ಣ ಗಿಡವಾಗಿ ಬೆಳೆಯಿತು.

ಕಾಲೇಜಿನಲ್ಲಿಯೂ ಅವನು ಹೆಚ್ಚು ಗೆಳೆಯರೊಡನೆ ಬೆರೆಯುತ್ತಿರಲಿಲ್ಲ. ಅವನ ಸಹಾಧ್ಯಾಯಿನಿಯಾಗಿದ್ದ ಶಾಂತಳ ವರ್ತನೆ, ನಡತೆ ಬಹಳ ಸಡಿಲವಾಗಿತ್ತು. ಚಂದುವಿನ ಭವ್ಯಾಕಾರಕ್ಕೆ ಶಾಂತ ಮನಸೋತಿದ್ದಳು. ಅವನನ್ನು ಹಾವ, ಭಾವ ವಿಲಾಸಗಳಿಂದ ತನ್ನವನನ್ನಾಗಿ ಮಾಡಿಕೊಳ್ಳಲು ಯತ್ನಿಸಿದಳು. ಆದರೆ ಚಂದು ಯಾವುದನ್ನೂ ಕಾಣದವನಂತೆ ಇದ್ದುಬಿಟ್ಟ. ಒಮ್ಮೆ ಶಾಂತ ಚಂದುವಿಗೆ,

"ನಾನು ಇಂಗ್ಲೀಷಿನಲ್ಲಿ ತುಂಬಾ ವೀಕಾ (weak) ಗಿದೀನಿ. ನಮ್ಮ ಮನೆಗೆ ಬಂದು ಇಂಗ್ಲೀಷ್ ಹೇಳಿಕೊಡುವಿರಾ" ಎಂದು ಬಿನ್ನಾಣದಿಂದ

ಕೇಳಲು ಚಂದು,

"ನಾನೂ ನಿಮ್ಮ ತರಗತಿಯಲ್ಲಿ ಓದುವ ವಿದ್ಯಾರ್ಥಿ. ನನಗಿಂತಲೂ ಉಪಾಧ್ಯಾಯರ ಸಹಾಯ ಪಡೆವರೆ ಒಳ್ಳೆಯದು" ಎಂದು ಹೇಳಿಬಿಟ್ಟ. ಅಂದಿನಿಂದ ಶಾಂತಳಿಗೆ ಚಂದುವನ್ನು ಕಂಡರೆ ಆಗುತ್ತಿರಲಿಲ್ಲ.

ಚಂದು ಆ ಪ್ರಸಂಗವನ್ನು ಮರೆತುಬಿಟ್ಟರೂ ಶಾಂತ ಮರೆಯಲಿಲ್ಲ.

ಒಂದು ಸಲ ಕಾಲೇಜಿನಲ್ಲಿ ಯಾವುದೋ ಸಂಘದ ಉತ್ಸವ ನಡೆಯಿತು. ವಿವಿಧ ವಿನೋದಾವಳಿ, ನಾಟಕ ಮುಗಿಯುವ ಹೊತ್ತಿಗೆ ರಾತ್ರಿ ಹತ್ತು ಗಂಟೆಯಾಗಿತ್ತು. ಚಂದು ಹೊರಗೆ ಬಂದಾಗ ಶಾಂತ ಕಾಲೇಜಿನ ಮುಂಭಾಗದಲ್ಲಿ ನಿಂತು, ಬೆರಳು ಕಡಿಯುತ್ತಾ ಸುತ್ತಮುತ್ತ ನೋಡುತ್ತಿದ್ದಳು. ಆಗಲೇ ಬಹಳ ಜನ ವಿದ್ಯಾರ್ಥಿಗಳು ಹೊರಟುಹೋಗಿದ್ದರು. ಶಾಂತಳಿಗೆ ಮನೆಗೆ ಹೋಗಲು ಜೊತೆಯಿಲ್ಲವೆಂದು ಚಂದುವಿಗೆ ಗೊತ್ತಾಯಿತು. ಅಸಹಾಯಕಳಾಗಿರುವ ಹೆಣ್ಣಿಗೆ ಸಹಾಯ ಮಾಡುವ ಉದ್ದೇಶದಿಂದ ಚಂದು ಅವಳ ಹತ್ತಿರ ನಿಂತು,

"ಮನೆಯಿಂದ ಯಾರೂ ಬಂದಿಲ್ಲವೇ" ಎಂದ.

"ಇಲ್ಲ"

"ಒಬ್ಬರೇ ಮನೆಗೆ ಹೋಗಲು ನಿಮಗಂಜಿಕೆಯಾದರೆ ನಾನು ಜೊತೆಯಲ್ಲಿ ಬರುತ್ತೇನೆ" ಎಂದು ಚಂದು ವಿನಯದಿಂದ ಕೇಳಿದ.

"ನಿಮ್ಮ ಸಹಾಯ ಬೇಕಾಗಿಲ್ಲ. ತಾವು ಹೋಗಬಹುದು" ಎಂದು ಶಾಂತ ಕಟುವಾಗಿ ಹೇಳಿದಳು.

ಮಾರನೆಯ ದಿನ ಕನ್ನಡ ಕ್ಲಾಸು ನಡೆಯುತ್ತಿದ್ದಾಗ ಪ್ರಿನ್ಸಿಪಾಲರಿಂದ ಚಂದುವಿಗೆ ಕರೆ ಬಂದಿತು. ಪ್ರಿನ್ಸಿಪಾಲರು ತನ್ನನ್ನೇಕೆ ಕರೆಸಿರಬಹುದು ಎಂದು ಯೋಚಿಸುತ್ತಾ ಚಂದು ಅವರ ರೂಮಿಗೆ ಹೋದ. ಶಾಂತ ರೂಮಿನಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತು ನಗುತ್ತಾ ಪ್ರಿನ್ಸಿಪಾಲರೊಡನೆ ಮಾತನಾಡುತ್ತಿದ್ದಳು. ಚಂದು ಒಳಗೆ ಬಂದೊಡನೆ ನಗು ನಿಲ್ಲಿಸಿ, ಹುಬ್ಬು ಗಂಟುಹಾಕಿದಳು. ಪ್ರಿನ್ಸಿಪಾಲರು ರೋಷದಿಂದ ಹೇಳಿದರು.

"ಮಿಸ್ ಶಾಂತಳ ಕ್ಷಮೆ ಕೇಳು. ನಿನ್ನೆ ರಾತ್ರಿ ಈಕೆಯೊಡನೆ ನೀನು ಅಶ್ಲೀಲವಾಗಿ ಮಾತನಾಡಿದ್ದಕ್ಕೆ ಕ್ಷಮೆ ಕೇಳು. ಈ ಬಾರಿಗೆ ಸುಮ್ಮನಿದ್ದೇನೆ."

ಚಂದು ಶಾಂತಳ ಮುಖ ನೋಡಿದ. ಅವಳ ಕಣ್ಣುಗಳು ಹಾಸ್ಯದಿಂದ ನಗುತ್ತಿದ್ದವು. ಅವಳ ಮುಖದಲ್ಲಿ ಮುಯ್ಯಿ ತೀರಿಸಿಕೊಂಡಿದ್ದರ ಸಮಾಧಾನವಿತ್ತು.

ಚಂದುವಿನ ರಕ್ತ ಕೋಪದಿಂದ ಕುದಿಯಿತು. ಅವನ ಸಹಾಯ ತಿರಸ್ಕರಿಸಿದ ಶಾಂತ ಹಿಂದಿನ ರಾತ್ರಿ ಪುಂಡನಾದ ರಾಜಗೋಪಾಲನೊಡನೆ ಮನೆಗೆ ಹೊರಟಿದ್ದನ್ನು ನೋಡಿದ್ದ. ತಾನೇನು ಶಾಂತಳ ಸೌಂದರ್ಯವನ್ನು ಭ್ರಮಿಸಿಯಾಗಲಿ, ಅವಳಲ್ಲಿ ಪ್ರೀತಿಗೊಂಡಾಗಲಿ ಹಾಗೆ ಮಾತನಾಡಿಸಿರಲಿಲ್ಲ. ತನ್ನ ಸದುದ್ದೇಶವನ್ನು ದುರುದ್ದೇಶವನ್ನಾಗಿ ಭಾವಿಸಿ ಶಾಂತ ಚಂದುವಿನ ಮೇಲೆ ಪ್ರತೀಕಾರ ಕೈಗೊಳ್ಳಲು ನಿಶ್ಚಯಿಸಿದ್ದಳು.

"ನನ್ನ ಮಾತಿನಲ್ಲಿ ಬೇರಾವ ಅರ್ಥವೂ ಇರಲಿಲ್ಲ ಸಾರ್. ಈಕೆ ಅಪಾರ್ಥ.... .."

"ಷಟ್ ಅಪ್. ನೀನೀಗ ಕ್ಷಮೆ ಕೇಳದಿದ್ದರೆ ಕಾಲೇಜಿನಿಂದ ಡಿಬಾರ್ ಮಾಡಬೇಕಾಗುವುದು."

ಚಂದು ತುಟಿ ಕಚ್ಚಿದ. ಗಂಟಲನ್ನು ಯಾರೋ ಬಿಗಿಯಾಗಿ ಅದುಮಿ ಹಿಡಿದಂತಾಯಿತು. ನಿರುಪಾಯನಾಗಿ ನುಡಿದ.

"ನನ್ನ ವರ್ತನೆಯನ್ನು ಕ್ಷಮಿಸಿ" ಎಂದವನೇ ಪ್ರಿನ್ಸಿಪಾಲರ ರೂಮಿನಿಂದ ಹೊರಗೆ ಬಂದ.

ಎಳೆಯ ವಯಸ್ಸಿನಲ್ಲಿ ಮನಸ್ಸಿನ ಮೇಲೆ ಮೂಡಿದ್ದ ಭಾವನೆಗೆ ಈಗ ಗರಿಗೂಡಿತು.

ಧಾರವಾಡದಲ್ಲಿ ಅವನ ಸಹೋದ್ಯೋಗಿಯೊಬ್ಬನಿಗಾದ ನಿರಾಶೆಯನ್ನು ಕಂಡು ಚಂದುವಿಗೆ ಇಡೀ-ಸ್ತ್ರೀ ಜಾತಿಯ ಬಗ್ಗೆ ತಿರಸ್ಕಾರ ಹುಟ್ಟಿತ್ತು.

ದೇವಶರ್ಮ ಅವನ ಅಂತರಂಗದ ಗೆಳೆಯನಾಗಿದ್ದ. ಒಂದು ದಿನ ಚಂದು ಶರ್ಮನನ್ನು ವಾಯುವಿಹಾರಕ್ಕೆ ಕರೆಯಲು ಶರ್ಮ

"ಈ ದಿನ ಬರಲಾಗುವುದಿಲ್ಲ" ಎಂದ.

ಶರ್ಮ ಎಂದೂ ಚಂದುವಿನ ಆಹ್ವಾನವನ್ನು ನಿರಾಕರಿಸಿದವನಲ್ಲ.

"ಕಾರಣ" ಎಂದು ಚಂದು ಪ್ರಶ್ನಿಸಲು ಶರ್ಮ ತನ್ನ ಅಂತರಂಗವನ್ನು ಚಂದುವಿಗೆ ಬಿಚ್ಚಿ ತೋರಿಸಿದ.

ಶರ್ಮ ಅದೇ ಊರಿನ ಶ್ರೀಮಂತರ ಮಗಳು ಉಷಾಳನ್ನು ಪ್ರೇಮಿಸಿದ್ದ. ಉಷಾ ಕಾಲೇಜಿನಲ್ಲಿ ಓದುತ್ತಿದ್ದಳು. ಆಕೆ ಶರ್ಮನ ಮನಸ್ಸನ್ನು ಸೂರೆಗೊಂಡಿದ್ದಳು. ಅವಳ ವಿದ್ಯಾಭ್ಯಾಸ ಮುಗಿದೊಡನೆ ಮದುವೆ ಆಗುವುದರಲ್ಲಿತ್ತು. ಆ ದಿನ ತಾನು ಉಷಾಳ ಮನೆಗೆ ಹೋಗುವುದಾಗಿ ಶರ್ಮ ಹೇಳಲು ಚಂದು ಅವನ ಬೆನ್ನು ತಟ್ಟಿ ಅಭಿನಂದಿಸಿದ ಅವರಿಬ್ಬರ ಸಂತೋಷ ನೋಡಿ ಚಂದುವೂ ಸುಖಿಯಾಗಿದ್ದ. ಉಷಾ ಶ್ರೀಮಂತ ತರುಣನೊಬ್ಬನ

ಕೈಹಿಡಿದು ಶರ್ಮನನ್ನು ನಿರಾಶೆಯ ಪ್ರಪಾತಕ್ಕೆ ತಳ್ಳಿ ತನ್ನ ಪ್ರೇಮ ಕೃತಕ ವೆಂದು ತೋರಿಸಿದಳು. ಈ ಪ್ರಕರಣದಿಂದ ಶರ್ಮನಿಗಿಂತಲೂ ಚಂದುವಿಗೆ ಹೆಚ್ಚು ನೋವಾಗಿದ್ದಿತು.

ಈ ಪ್ರಕರಣಗಳಿಗೆ ಚಂದು ಸಾಕ್ಷಿಯಾಗಿದ್ದುದರಿಂದ ಮದುವೆಯಾಗ ಬಾರದೆಂದು ಅವನು ನಿಶ್ಚಯಿಸಿದ್ದ.

## ೧೫

ಮೊದಲನೆಯ ಸಲ ಭಾರತಿಯನ್ನು ನೋಡಿದಾಗ ಕಲಾವಿದನಿಗೆ ಸೌಂದರ್ಯದಲ್ಲಿರುವ ಸಹಜ ಆಸಕ್ತಿ ಅವನ ಮನಸ್ಸನ್ನು ಆಕರ್ಷಿಸಿತು. ಹಿಂದೆ ಹೃದಯದಲ್ಲಿ ಮೂಡಿದ್ದ ಭಾವನೆಗೂ, ಸೌಂದರ್ಯಕ್ಕೂ ಹೋರಾಟ ವಾಗಿ, ಸೌಂದರ್ಯ ತನ್ನ ವಿಜಯಪತಾಕೆಯನ್ನು ಅವನ ಹೃದಯದಲ್ಲಿ ಹಾರಿಸಿತು. ಚಿಕ್ಕಂದಿನಿಂದಲೂ ಮನಸ್ಸಿನಲ್ಲಿ ಬೇರೂರಿದ್ದ ಭಾವನೆಯನ್ನು ಒಂದೇ ಸಲ ಕಿತ್ತೆಸೆಯುವುದು ಚಂದುವಿಗೆ ಕಠಿಣವಾಗಿ ತೋರಿತು. ಬಹಳ ದಿನಗಳಿಂದಲೂ ಅದುಮಿದ್ದ ರಾಗ, ಬಯಕೆ, ಭಾವನೆಯ ತುಳಿತವನ್ನು ಒತ್ತರಿಸಿ ಎದ್ದು ನಿಂತು ರೂಪದಿಂದ ಸೆಳೆಯಲ್ಪಟ್ಟವು.

ಕೆಲವು ಹೆಂಗಸರು ತಪ್ಪು ಮಾಡಬಹುದು. ಆದರೆ ಎಲ್ಲರೂ ಕೆಟ್ಟವ ರೆಂದು ಹೇಳುವುದಕ್ಕಾಗುವುದಿಲ್ಲ ಎಂದು ಚಂದು ತನ್ನನ್ನು ತಾನೇ ಸಮಾ ಧಾನಮಾಡಿಕೊಂಡನು. ಸೌಂದರ್ಯದ ಭಕ್ತನಾಗಿದ್ದ ಚಂದುವಿಗೆ ಭಾರತಿಯ ಚೆಲುವು, ಲಾವಣ್ಯದಲ್ಲಿ ಅಪರಿಮಿತ ಭಕ್ತಿ, ಪ್ರೇಮ, ಬಯಕೆ ಉತ್ಪನ್ನ ವಾಯಿತೇ ಹೊರತು, ಅದರಲ್ಲಿ ಕಳಂಕವನ್ನಾಗಲಿ ತಪ್ಪನ್ನಾಗಲಿ ಕಲ್ಪಿಸಿ ಕೊಳ್ಳಲಾಗಲಿಲ್ಲ.

ಮದುವೆಯ ಅನಂತರ ಧಾರವಾಡಕ್ಕೆ ಹಿಂದಿರುಗಿದ ಮೇಲೆ ಚಂದು ವಿನ ಕತ್ತಲು ಕವಿದ ಮನದ ಮೇಲೆ ಭಾರತಿ ಮಿಂಚಿನಂತೆ ಮಿಂಚಿ ಬರುತ್ತಿ ದ್ದಳು. ಶಾಲೆಯಲ್ಲಿ ಪಾಠ ಹೇಳಿ ರೂಮಿಗೆ ಬಂದು ಆಯಾಸದಿಂದ ಒರಗಿ ದಾಗ ಭಾರತಿಯ ಮುಖ ಅವನ ಕಣ್ಣ ಮುಂದೆ ತೇಲಿಬರುತ್ತಿತ್ತು. ಕೂಡಲೇ ಚಂದುವಿಗೆ ನವಚೈತನ್ಯ ಬಂದಂತಾಗಿ ಹೃದಯ ಮಿಡಿಯುತ್ತಿತ್ತು. ಈಗ ವಿರಹಿಣಿಯಾದ ಅವಳನ್ನು ನೋಡಿದ ಮೇಲೆ ಅವನ ದಾಹ ಹೆಚ್ಚಿತು. ಸ್ತ್ರೀ ದ್ವೇಷಿಯಾಗಿ ಮದುವೆಯಾಗುವುದಿಲ್ಲವೆಂದು ಶಪಥ ಮಾಡಿದ್ದ ಚಂದು ವಿಗೆ ಬೇಕಾದ ಹೆಣ್ಣು ಪ್ರಪಂಚದಲ್ಲಿ ಒಬ್ಬಳು ಮಾತ್ರ. ಆದರೆ ಅವಳು

ಆನಂದನ ಮೋಹದ ಮಡದಿಯಾಗಿದ್ದಳು, ಅಕ್ಕನ ಅಕ್ಕರೆಯ ಸೊಸೆಯಾಗಿದ್ದಳು. ಆನಂದನ ಹೆಂಡತಿಯನ್ನು ಬಯಕೆಯ ದೃಷ್ಟಿಯಿಂದ ನೋಡುವುದು ಸರಿಯೇ ?

ಚಂದುವಿನ ಮನಸ್ಸಿನಲ್ಲಿ ದೊಡ್ಡ ಕ್ರಾಂತಿಯೆದ್ದಿತು.

ನಿಸ್ಸಹಾಯಕನಾಗಿ 'ಏನು ಮಾಡಲಿ' ಎನ್ನುವಂತೆ ಎದೆಯನ್ನು ಅವನು ಒತ್ತಿ ಹಿಡಿದುಕೊಂಡನು.

ಚಂದು ಬಂದು ಮೂರು ನಾಲ್ಕು ದಿನಗಳಾಗಿದ್ದರೂ ಭಾರತಿಯನ್ನು ಮಾತನಾಡಿಸಿರಲಿಲ್ಲ. ಭಾರತಿಯೂ ಅವನ ಕಡೆ ತಿರುಗಿ ನೋಡುತ್ತಿರಲಿಲ್ಲ.

ಆದರೆ ಚಂದು ಬಂದಮೇಲೆ ಭಾರತಿಗೆ ತನ್ನ ಅಲಂಕಾರದ ವಿಷಯವಾಗಿ ಮೊದಲಿನಂತೆ ನಿರ್ಲಕ್ಷ್ಯದಿಂದಿರುವುದು ಮಾತ್ರ ಅವಳಿಗೆ ಸಾಧ್ಯವಾಗಲಿಲ್ಲ. ಮನೆಗೆ ಅತಿಥಿಯೊಬ್ಬರು ಬಂದಿರುವಾಗ ತಾನು ಹುಚ್ಚಿಯಂತಿರುವುದು ಸರಿಯಲ್ಲವೆನಿಸಿತು ಭಾರತಿಗೆ. ಮೊದಲಿನಂತೆ ಸೋಮಾರಿಯಾಗಿರದೆ, ಸಂಜೆ ಓರಣವಾಗಿ ತಲೆಬಾಚಿಕೊಂಡು, ಒಗೆದು ಮಡಿಸಿಟ್ಟಿದ್ದ ಸೀರೆಯನ್ನುಡುತ್ತಿದ್ದಳು.

ಚಂದು ಬಂದು ಒಂದು ವಾರವಾಗಿತ್ತು.

ವೇದಮ್ಮನವರು ಅಡಿಗೆ ಮನೆಯಲ್ಲಿ ಕೆಲಸಮಾಡುತ್ತಿದ್ದರು. ಭಾರತಿ ಹಾಲಿನಲ್ಲಿ ಕನ್ನಡಿ ಇರಿಸಿಕೊಂಡು, ತಲೆಗೆ ಎಣ್ಣೆ ಹಚ್ಚಿ ಓರಣವಾಗಿ ತಲೆಬಾಚಿಕೊಂಡಳು. ಮುಖಕ್ಕೆ ಮಿತವಾಗಿ ಪೌಡರ್ ಹಚ್ಚಿ, ಹಣೆಗೆ ಕುಂಕುಮವಿಟ್ಟಳು. ಚಂದು ಬರುವುದಕ್ಕೆ ಮುನ್ನ ಅಲಂಕಾರದಲ್ಲಿ ಇಲ್ಲದ ಆಸಕ್ತಿ ಈಗ ಬರಲು ಕಾರಣವೇನು ಎಂದು ಭಾರತಿ ತನ್ನ ಮನಸ್ಸನ್ನೇ ಪರೀಕ್ಷಿಸಿಕೊಂಡಳು. ಮನೆಗೆ ಯಾರಾದರೂ ಬಂದಾಗ ಹಸನಾಗಿದ್ದರೆ ಚೆನ್ನವೇ ಎಂದು ತನಗೆ ತಾನೇ ಸಮಾಧಾನ ಮಾಡಿಕೊಂಡಳು. ಚಂದುವಿಗೆ ಬದಲು ಯಾರಾದರೂ ಮುದುಕರು ಬಂದಿದ್ದರೂ ತಾನು ಹೀಗೆ ಅಲಂಕಾರದಲ್ಲಿ ಆಸಕ್ತಿಯನ್ನು ತೋರಿಸುತ್ತಿದ್ದೆನೇ ಎಂದುಕೊಂಡಳು. 'ಇರಲಾರದು' ಎಂದು ನಿಟ್ಟುಸಿರು ಬಿಟ್ಟಿತು ಅವಳ ಒಳಮನಸ್ಸು. ಮನೆಯಲ್ಲಿ ಅತ್ತಿಂದಿತ್ತ ಓಡಾಡುವಾಗ ತಾನವನ ಕಡೆ ನೋಡದಿದ್ದರೂ, ಅವನ ಕಣ್ಣುಗಳು ದೈನ್ಯ, ದಾಹ ಬೆರತ ದೃಷ್ಟಿಯಿಂದ ತನ್ನ ಕಡೆ ನೋಡುತ್ತಿದ್ದುದರ ಅರಿವಾಗುತ್ತಿತ್ತು ಅವಳಿಗೆ.

"ಬಾಗಿಲು" ಚಂದು ಹೊರಗಿನಿಂದ ಕೂಗಿದ.

ಭಾರತಿ ಚಂಗನೆ ಹಾರಿಹೋಗಿ ಬಾಗಿಲು ತೆಗೆದಳು. ಜಡೆ ಮುಂದೆ ಬಂದು ಏರಿಳಿದು ಮುಂಡಿಯ ಬಳಿ ತೂಗಾಡುತ್ತಿತ್ತು. ಭಾರತಿಯ ಕೈಗಳು

ಹಸಿರು ರಿಬ್ಬನ್ನನ್ನು ಜಡೆಗೆ ಕಟ್ಟುತ್ತಿದ್ದವು.

ಚಂದು ಕೈಲಿ ಹೂವಿನ ಪೊಟ್ಟಣ ಹಿಡಿದಿದ್ದ. ಹೂವಿನ ಸುವಾಸನೆ ಮನೆಯಲ್ಲೆಲ್ಲಾ ತುಂಬಿತ್ತು.

"ಅಕ್ಕ ಇಲ್ಲವೇ ?" ಚಂದು ಮೊದಲನೆಯ ಸಲ ಮಾತನಾಡಿಸಿದ.

"ಇದಾರೆ."

"ನೀವು, ಅಕ್ಕ ಹೂವು ಮುಡಿದುಕೊಳ್ಳಿ" ಎನ್ನುತ್ತಾ ಪೊಟ್ಟಣ ಅವಳ ಕೈಗಿತ್ತ. ಹೂವು ಕೊಡುವಾಗ ಅವನ ಒರಟಾದ ದಪ್ಪ ಬೆರಳುಗಳು ಅವಳ ಮೃದು ಬೆರಳನ್ನು ಸೋಕಿದವು. ಇಬ್ಬರೂ ಬೆಚ್ಚಿ ಎರಡು ಹೆಜ್ಜೆ ಹಿಂದೆ ಸರಿದರು.

ಒಂದು ವರ್ಷದ ಮೇಲೆ ಗಂಡಸಿನ ಕೈಯ ಒರಟು ಸ್ಪರ್ಶ ಭಾರತಿಗೆ ರೋಮಾಂಚವನ್ನುಂಟುಮಾಡಿತು. ವಿದ್ಯುಚ್ಛಕ್ತಿ ತಗುಲಿದ ತಂತಿಯಂತೆ ಭಾರತಿಯ ದೇಹ ನಡುಗಿತು. ಆದರ ಅಂಜಿಕೆಯಲ್ಲೂ ಏನೋ ಒಂದು ರೀತಿಯ ಮಾಧುರ್ಯವಿತ್ತು.

ಚಂದುವಿಗೆ ಹೆಣ್ಣಿನ ಸ್ಪರ್ಶ ತೀರ ಹೊಸದು. ಅವನಿಗೆ ಹೊಸ ಹೂವಿನ ಬುಟ್ಟಿಯಲ್ಲಿ ಕೈಯಿಟ್ಟ ಅನುಭವವಾಯಿತು. ಮನಸ್ಸು ವ್ಯಗ್ರಗೊಂಡು ಬಯಕೆ ಹೆಡೆಯೆತ್ತಿತು. ಭಾರತಿಯ ತನು, ಮನ, ಧನವೆಲ್ಲಾ ತನ್ನದಾಗಬೇಕೆಂದು ಸ್ವಾರ್ಥ ತಲೆದೋರಿತು. ಭಾರತಿ ಆನಂದನ ಹುಡುಗಿ ಎಂಬುದು ನೆನಪಿಗೆ ಬಂದ ಕೂಡಲೇ ಚಂದುವಿನ ಮನಸ್ಸು ನೀರು ಬಿದ್ದ ಅರಳು ರಾಶಿಯಂತಾಯಿತು. "ಕೊನೆ ಎಲ್ಲಿಗೆ" ಎಂದು ಕೊಂಡು ತಲೆಯನ್ನು ಬಿಗಿಯಾಗಿ ಹಿಡಿದುಕೊಂಡ

ಅಂದಿನಿಂದ ಚಂದು ಸ್ವಲ್ಪ ಧೈರ್ಯ ವಹಿಸಿ ಭಾರತಿಯನ್ನು ಮಾತನಾಡಿಸತೊಡಗಿದನು. ಭಾರತಿಗೂ ಈಗ ಚಂದುವನ್ನು ಕಂಡರೆ ಮೊದಲಿನ ಅಂಜಿಕೆಯಾಗಲಿ, ನಾಚಿಕೆಯಾಗಲಿ ಇರಲಿಲ್ಲ. ಮೊದಲಿನ ಸಂಕೋಚ ದೂರವಾಗಿ ಸಲಿಗೆಗೆಡೆಕೊಟ್ಟಿತು. ಅದಕ್ಕೆ ಕಾರಣ ಚಂದು ಅವಳನ್ನು ನುಂಗುವ ಹಾಗೆ ನೋಡುತ್ತಿರಲಿಲ್ಲ. ಬೇಟೆಗಾರ ತನ್ನ ಬೇಟೆಯನ್ನು ಕಾಣುವ ದೃಷ್ಟಿಯನ್ನು ತಪ್ಪಿಸಿ ಸ್ನೇಹದಿಂದ ವರ್ತಿಸುತ್ತಿದ್ದ. ಅಂಜಿದ ಮಗು ಒಂದೊಂದೇ ಹೆಜ್ಜೆ ಸಮೀಪಕ್ಕೆ ಬಂದು ಕತ್ತೆತ್ತಿ ನೋಡಿ ಎದುರಿಗಿರುವುದು ಅಪಾಯಕಾರಿಯಲ್ಲ ಎಂದು ಪರೀಕ್ಷಿಸಿ ಪುನಃ ಒಂದು ಹೆಜ್ಜೆ ಬರುವಂತೆ ಭಾರತಿ ಚಂದುವನ್ನು ಗಳಿಗೆ ಗಳಿಗೆಗೂ ಪರೀಕ್ಷಿಸುತ್ತಿದ್ದಳು. ಸಹಚರನಿಲ್ಲದ ಬಾಳಿನ ಶೂನ್ಯತೆ ಈಗ ಭಾರತಿಗೆ ಮತ್ತೂ ಆಳವಾಗಿ

ತೋರಿತು. ಚಂದುವನ್ನು ನೋಡಿದಾಗಲೆಲ್ಲ ಅವಳಿಗೆ ಆನಂದನ ನೆನಪು ಬರುತ್ತಿತ್ತು. ಚಂದು ಮನೆಗೆ ಬಂದುದು ಹಸಿದವನೆದುರಿಗೆ ಅನ್ನವಿಟ್ಟಂತಾಯಿತು. ಜೊತೆಗಾರನಿಗಾಗಿ ಕಾದು ಹಂಬಲಿಸಿ ಬೆಂಡಾದ ಜೀವ ಚಂದುವನ್ನು ಬಯಸತೊಡಗಿತು.

ಒಂದು ಸುಂದರ ಸಂಜೆ ಭಾರತಿ ಹಾರ್ಡಿಯ 'ಟೆಸ್' ಓದುತ್ತಾ ವರಾಂಡದಲ್ಲಿ ಕುಳಿತಿದ್ದಳು. ಮನೆಯಲ್ಲಿ ಯಾರೂ ಇರಲಿಲ್ಲ. ವೇದಮ್ಮನಿಗಿಂತಲೂ ಮುಂಚಿತವಾಗಿ ಮನೆ ಬಿಟ್ಟು ಹೋಗಿದ್ದ ಚಂದು ಮನೆಗೆ ಬಂದ. ಚಂದು ಹೂವನ್ನು ಅವಳಿಗೆ ಕೊಟ್ಟು,

"ನೀವು, ಅಕ್ಕ ಮುಡಿದುಕೊಳ್ಳಿ" ಎಂದ.

ವೇದಮ್ಮನ ಪಾಲಿನ ಹೂವನ್ನು ತೆಗೆದಿರಿಸಿ ಭಾರತಿ ತನ್ನ ಪಾಲಿನ ಹೂ ಮುಡಿದಳು. ಚಂದು ಅಲ್ಲಿಯೇ ಇದ್ದ ಕುರ್ಚಿಯ ಮೇಲೆ ಕುಳಿತ. ಭಾರತಿ ಅವನ ನೋಟ ಸಹಿಸಲಾರದೇ ಕಾದಂಬರಿ ತೆಗೆದು ಮುಖಕ್ಕೆ ಮರೆಮಾಡಿಕೊಂಡಳು.

"ಯಾವ ಪುಸ್ತಕ ಓದುತ್ತಿದೀರಿ ?"

"ಟೆಸ್"

"ಕತೆ ತುಂಬಾ ಚೆನ್ನಾಗಿದೆ. ನಾನು ಅವನ ಎಲ್ಲ ಪುಸ್ತಕಗಳನ್ನೂ ಓದಿದೇನೆ."

"ಅವನು ಬರೆದಿರುವ ಪುಸ್ತಕಗಳನ್ನು ಗುರುತು ಮಾಡಿ ಕೊಡಿ. ನಾನು ಎಲ್ಲ ಓದಬೇಕು."

"ಅವನೊಬ್ಬನದೇ ಏಕೆ? ಒಳ್ಳೇ ಪುಸ್ತಕಗಳ ಹೆಸರನ್ನೆಲ್ಲಾ ಗುರುತು ಹಾಕಿಕೊಡುತ್ತೇನೆ. ಎಲ್ಲಾ ಓದಬೇಕಾದ ಪುಸ್ತಕಗಳು."

"ಈಗ ಸಮಯವಿದೆ. ಎಲ್ಲಾ ಓದಬಹುದು."

"ಆನಂದ ಇಂಗ್ಲೆಂಡಿಗೆ ಹೋಗಿರುವುದು ನಿಮಗೆ ತುಂಬಾ ಬೇಜಾರನ್ನುಂಟುಮಾಡಿರಬೇಕಲ್ಲವೇ ?"

"ಹೂಂ."

"ಆನಂದ ಯಾವಾಗ ಬರುತ್ತಾನೆ ?"

"ಇನ್ನೂ ಒಂದು ವರ್ಷವಾಗಬಹುದು. ನೀವು, ಅವರು ಒಂದೇ ಕ್ಲಾಸಿನಲ್ಲಿ ಓದಿದವರೇನು ?"

"ಇಲ್ಲ. ನಾನು ಆನಂದನಿಗಿಂತ ವಯಸ್ಸಿನಲ್ಲಿ ದೊಡ್ಡವನು. ಆದರೆ ಅದೃಷ್ಟ ಮಾತ್ರ ಅವನದು ದೊಡ್ಡದು. ಆನಂದ ಅದೃಷ್ಟಶಾಲಿ"

ಭಾರತಿ ಪುಸ್ತಕದೊಳಗಿನಿಂದ ತಲೆ ಎತ್ತಿ "ಯಾಕೆ, ನಿಮಗೇನು ಕಡಿಮೆಯಾಗಿದೆ" ಎಂದಳು.

ಚಂದು ಸ್ವಲ್ಪ ಹೊತ್ತು ಸುಮ್ಮನಿದ್ದು "ನನಗೆ ಅದೃಷ್ಟವೊಂದಿಲ್ಲ. ಸಾವು ... ..." ಭಾರತಿ ಮಧ್ಯದಲ್ಲಿಯೇ ಬಾಯಿಹಾಕಿ 'ಛೇ, ಕೆಟ್ಟ ಮಾತ ನ್ನಾಡಬೇಡಿ' ಎಂದಳು.

"ಬದುಕಿದರೆ ಆನಂದನ ಹಾಗೆ ಬದುಕಬೇಕು. ಆನಂದನಿಗೆ ಅದೃಷ್ಟ ದೇವತೆ ಒಲಿದಿದ್ದಾಳೆ. ವಿದ್ಯೆ, ಬುದ್ಧಿ, ಹಣ ಯಾವುದಕ್ಕೂ ಅವನಿಗೆ ತೊಂದರೆಯಿಲ್ಲ. ಅವನು ಬುದ್ಧಿವಂತನೆಂದು ಮೆಚ್ಚಿ ಫ್ಯಾಕ್ಟರಿಯವರು ಇಂಗ್ಲೆಂಡಿಗೆ ಕಳುಹಿಸಿದ್ದಾರೆ. ಅಸಾಮಾನ್ಯ ಚೆಲುವೆ ಅವನ ಕೈ ಹಿಡಿದಿದ್ದಾಳೆ. ಅವನಿಗೆ ಜೀವನದಲ್ಲಿ ಮತ್ತೇನು ಬೇಕು?" ಚಂದು ಭಾರತಿಯನ್ನೇ ನೋಡುತ್ತಾ ಹೇಳಿದ. ಅವನ ದನಿಯಲ್ಲಿ ಮತ್ಸರ, ವ್ಯಥೆಯಿತ್ತು. ಅಸಾ ಮಾನ್ಯ ಚೆಲುವೆ ಎಂದುದನ್ನು ಕೇಳಿ ಭಾರತಿ ತಲೆ ತಗ್ಗಿಸಿದಳು.

"ಚೆಲುವೆ ಎಂದರೆ ನೀವು ತಪ್ಪು ತಿಳಿಯುವುದಿಲ್ಲ ತಾನೆ? ನಾನು ಚಿತ್ರ ಗಾರ. ಸುಂದರ ವಸ್ತುಗಳನ್ನು ಮನಸಾರೆ ಮೆಚ್ಚಿ ಬಾಯಿತುಂಬ ಹೊಗಳು ತ್ತೇನೆ"

"ಊಹೂಂ. ಅದರಿಂದ ನನಗೇನೂ ಕೋಪವಿಲ್ಲ"

ಚಂದು ತನ್ನನ್ನು ಧೈರ್ಯವಾಗಿ ಪ್ರಶಂಸಿಸಿದುದರಿಂದ ಭಾರತಿಗೆ ಕೋಪ ಬರಲಿಲ್ಲ. ತನ್ನ ಬಗ್ಗೆ ಅಭಿಮಾನವುಂಟಾಯಿತು.

"ನೀವು ಕಾಂಪ್ಲಿಮೆಂಟನ್ನ ಸ್ಪೋರ್ಟಿವ್ ಆಗಿ ತಗೊಂಡಿದ್ದು ನೋಡಿ ಬಹಳ ಸಂತೋಷವಾಯಿತು. ನೀವೇ ಹೇಳಿ ಆನಂದ ಅದೃಷ್ಟಶಾಲಿಯಲ್ಲವೆ...."

"ಇರಬಹುದು. ಆದರೆ ನಿಮಗೇನು ಕಡಿಮೆಯಾಗಿದೆಯೆ?" ಭಾರತಿ ಧೈರ್ಯದಿಂದ ಪ್ರಶ್ನಿಸಿದಳು.

"ನನಗೇನೂ ಇಲ್ಲ"

"ನೀವೂ ವಿದ್ಯಾವಂತರು. ಸಾಕಷ್ಟು ದುಡ್ಡಿದೆ. ಹಾಗೂ ರೂಪಿನಲ್ಲಿ ........" ಎನ್ನುತ್ತಾ ಭಾರತಿ ಅರ್ಧದಲ್ಲಿಯೇ ನಾಲಿಗೆ ಕಚ್ಚಿದಳು. ಮಾತು ಅವಳ ಹತೋಟಿಯನ್ನು ಮೀರಿ ಹೊರಬಂದುಬಿಟ್ಟಿತ್ತು. ಮುಖವೆಲ್ಲಾ ಓಕಳಿಯೆರಚಿದಂತೆ ಕೆಂಪಾಯಿತು. ತನ್ನ ರೂಪದ ಮೆಚ್ಚುಗೆ ಕೇಳಿ ಚಂದು ಹಿಗ್ಗಿಹೋದ. ಅವನಿಗೆ ತಾನು ಸುಂದರ ಪುರುಷನೆಂಬುದು ತಿಳಿದಿತ್ತು. ಆದರೆ ಅದನ್ನು ಹೇಳಿದವಳು ಭಾರತಿಯಾದುದರಿಂದ ಅದರ ಬೆಲೆ ಹೆಚ್ಚಾಗಿತ್ತು.

"ನೀವು ಹಾಗೆ ಭಾವಿಸಿದ್ದರೆ ನಿಮ್ಮ ದೊಡ್ಡ ಗುಣ ಅದಕ್ಕೆ ಕಾರಣ"

ಭಾರತಿ ಆ ಮಾತನ್ನು ಮರೆಸಲು ವಿಷಯ ಬದಲಾಯಿಸಿದಳು.

"ನೀವು ಆ ದಿನ ಕಮಲೂನ ನೋಡಿ ಮದುವೆ ಮಾಡಿಕೊಂಡಿದ್ದರೆ ಚೆನ್ನಾಗಿತ್ತು. ಕಮಲು ತುಂಬಾ ಒಳ್ಳೆಯ ಹುಡುಗಿ"

"ನಾನು ಆ ದಿನ ಅವಳನ್ನು ನೋಡಲಿಲ್ಲ. ಹುಡುಗಿ ಹೇಗಿದಾಳೆ?"

"ಚೆನ್ನಾಗಿದಾಳೆ"

"ನಿಮ್ಮಷ್ಟು ?"

"ನಾನು ಹೇಗೆ ಹೇಳಲಿ? ಸ್ವಲ್ಪ ಕಪ್ಪು ಬಣ್ಣದ ಮೇಲಿದಾಳೆ. ಅವಳಿಗಿನ್ನೂ ಮದುವೆಯಾಗಿಲ್ಲ. ಈಗಲೂ ಮನಸ್ಸು ಮಾಡಿ ನೋಡಿ"

ಚಂದು ಸ್ವಲ್ಪ ಹೊತ್ತು ಮಾತನಾಡಲಿಲ್ಲ. ಕೊನೆಗೆ ಭಾರವಾದ ದನಿಯಲ್ಲಿ ಹೇಳಿದ. "ನನಗೆ ಈ ಜನ್ಮದಲ್ಲಿ ಮದುವೆಯಿಲ್ಲ"

"ಏಕೆ ಹಾಗೆ ಹೇಳುವಿರಿ" ಭಾರತಿ ಅಚ್ಚರಿಯಿಂದ ಕೇಳಿದಳು.

"................... ..................."

"ನಿಮಗೆ ಹೆಣ್ಣು ಕೊಡುವವರಿಲ್ಲವೆ?"

"ಹೆಣ್ಣು ಕೊಡುವವರಿದ್ದರೂ ನನಗೆ ಬೇಕಾದ ಹುಡುಗಿಯಿಲ್ಲ"

"ಇಷ್ಟು ದೊಡ್ಡ ಪ್ರಪಂಚದಲ್ಲಿ ನಿಮಗೆ ಬೇಕಾದ ಹುಡುಗಿಯಿಲ್ಲವೆಂದರೆ ಆಶ್ಚರ್ಯವೇ ಸರಿ."

"ನಾನು ಬಯಸಿದ ಹುಡುಗಿಗೆ ಮದುವೆಯಾಗಿದ್ದರೆ? ನಾನು ಪ್ರೀತಿಸಿದ ಹುಡುಗಿ ಬೇರೊಬ್ಬನ ಮಡದಿಯಾಗಿದ್ದರೆ ?" ಉದ್ವೇಗದಿಂದ ಜೋರಾಗಿ ಪ್ರಾರಂಭಿಸಿದ ವಾಕ್ಯ ಕ್ರಮೇಣ ತಗ್ಗಿ, ಕೊನೆಯ ಪದವನ್ನು ಚಂದು ತನಗೆ ತಾನೇ ಹೇಳಿಕೊಳ್ಳುವಂತೆ ಪಿಸುಗುಟ್ಟಿದನು. ಅವನ ಮಾತು, ಉದ್ವೇಗ, ನೋಟಕ್ಕೆ ಭಾರತಿ ಛಳಕು ಹೊಡೆದವಳಂತೆ ಅವನನ್ನು ನೋಡಿದಳು. ಏನಾದರೂ ಹೇಳಲೇಬೇಕೆಂದು ನಿರ್ಧರಿಸಿ ಪ್ರಯತ್ನಪೂರ್ವಕವಾಗಿ ಹೇಳಿದಳು.

"ಒಂದು ಪಕ್ಷ ಹಾಗಿದ್ದರೆ ಅನ್ಯಾಯ ... ನೀವು ಪರಿಸ್ಥಿತಿಗೆ ಹೊಂದಿಕೊಂಡು ಹೋಗಬೇಕು ..."

ವರಾಂಡದಲ್ಲಿ ತಮ್ಮ ಮಾತುಗಳನ್ನು ಕೇಳಿಸಿಕೊಳ್ಳಲು ಬೇರೆ ಯಾರೂ ಇಲ್ಲದಿದ್ದರೂ ತಾನೂ ಚಂದುವಿನಂತೆ ಪಿಸುಗುಟ್ಟಿದುದಕ್ಕಾಗಿ ಭಾರತಿಗೆ ಆಶ್ಚರ್ಯವಾಯಿತು.

ಇಬ್ಬರೂ ಬಹಳ ಹೊತ್ತು ಮಾತನಾಡದೇ ಸುಮ್ಮನೆ ಕುಳಿತಿದ್ದರು.

ಕತ್ತಲಾಗುತ್ತಾ ಬಂದಂತೆ ಚಂದು ಎದ್ದು ಸ್ವಿಚ್ಚು ಒತ್ತಲು ಬಂದ. ಸ್ವಿಚ್ಚು ಭಾರತಿ ಕುಳಿತಿದ್ದ ಕುರ್ಚಿಯ ಮೇಲೆ ಸರಿಯಾಗಿತ್ತು. ಚಂದು

ಎದ್ದು ಹತ್ತಿರ ಬಂದಂತೆ ಅವಳ ಹೃದಯ ಹೊಡೆದುಕೊಳ್ಳತೊಡಗಿತು. "ಏಕೆ ಬರುತ್ತಿದಾನೆ" ಎನ್ನುವಂತೆ ಗಾಬರಿಯಿಂದ ಅವನ ಕಡೆ ನೋಡಿದಳು.

"ಓ, ಎಂತಹ ಸುಂದರಾಕಾರ!" ದೇಹವನ್ನು ಬಯಸುತ್ತಿದ್ದ ಭಾರತಿಯ ದೇಹ ಬಾಳೆ ಎಲೆಯಂತೆ ಕಂಪಿಸಿತು. ಚಂದು ದೀಪವನ್ನು ಹಚ್ಚಿಸಿದ ಕೂಡಲೇ ಭಾರತಿ ನಿಟ್ಟುಸಿರು ಬಿಟ್ಟಳು.

ಚಂದು ಅವಳು ಕುಳಿತಿದ್ದ ಕುರ್ಚಿಯ ಮೇಲೆ ಬಾಗಿ, ಅವಳ ಭುಜದ ಮೇಲಿಂದ ಕೈಲಿ ಹಿಡಿದಿದ್ದ ಪುಸ್ತಕ ನೋಡಿ "'ಟಿಸ್'ಲಿ ಯಾವ ಭಾಗ ಓದುತ್ತಿರುವಿರಿ" ಎಂದ.

ಅವನ ಉದ್ವೇಗದ ಬಿಸಿಯುಸಿರು ಅವಳ ಕೆನ್ನೆಯನ್ನು ಸುಡತೊಡಗಿತು. ಪ್ರತಿ ದಿನವೂ ನಿಸರ್ಗದ ಕರೆಯನ್ನು ಪ್ರತಿಭಟಿಸುತ್ತಿದ್ದ ಅವಳ ಮನಸ್ಸು ಪುರುಷ ಸಾಮಿಪ್ಯದಿಂದ ಚಂಚಲವಾಯಿತು.

ಇಲ್ಲೇಕೆ ನಿಂತು ತನ್ನನ್ನು ಪರೀಕ್ಷಿಸುತ್ತಿದ್ದಾರೆ? ದೂರ ಹೋಗ ಬಾರದೇ?

"ಹೂಂ. ಯಾವುದೋ ಭಾಗ ಹೀಗೆ .." ಭಾರತಿ ತೊದಲಿದಳು. ಚಂದು ಅವಳ ಮುಖದ ಕಡೆ ನೋಡಿದ. ದೂರದಲ್ಲಿ ಕಾಣುವುದಕ್ಕಿಂತಲೂ ಸಮಿಪದಲ್ಲಿ ನೂರು ಪಾಲು ಸುಂದರಿಯಾಗಿ ಕಾಣಿಸುತ್ತಾಳೆ! ಅವಳ ಹಾಲುಗೆನ್ನೆ ಅವನಿಗೆ ಅತಿ ಸಮಿಪದಲ್ಲಿತ್ತು. ಕಣ್ರೆಪ್ಪೆಗಳು ಗಾಬರಿ, ಸಂಕೋಚದಿಂದ ಕೆನ್ನೆಯ ಮೇಲೆ ಮಲಗಿದ್ದವು. ತಾನೀಗ ಅವಳನ್ನು ಮುದ್ದಿಸಿದರೆ ಭಾರತಿಗೆ ತನ್ನನ್ನು ಪ್ರತಿಭಟಿಸುವ ಶಕ್ತಿ ಇಲ್ಲವೆಂದು ಚಂದುವಿಗೆ ಕೂಡಲೇ ಹೊಳೆಯಿತು. ಎಳೆಯ ಪ್ರಾಯದ ಹುಡುಗಿ, ದಾಂಪತ್ಯ ಜೀವನದಲ್ಲಿ ಅವೇ ತಾನೇ ಹೆಜ್ಜೆಯಿಟ್ಟ ತರಳೆ, ದೈಹಿಕ ಸುಖ ಅಪೇಕ್ಷಿಸುತ್ತಿರುವ ಕಾಮಿನಿಯಿವಳೆಂದು ಚಂದುವಿಗೆ ಅದೊಂದು ನೋಟದಿಂದಲೇ ತಿಳಿಯಿತು. ಅವಳ ಕಣ್ಣುಗಳು ಏನೋ ಮಧುರ ಅನುಭವವನ್ನು ನೆನೆದು, ನಿರೀಕ್ಷಿಸಿ ಮುಚ್ಚಿದ್ದವು. ಚಂದುವಿನ ತುಟಿ ಅವಳ ಕೆನ್ನೆಯ ಬಳಿ ಮುಂದುವರಿಯಿತು. ಅಷ್ಟರಲ್ಲಿಯೇ ಅವನ ಕಣ್ಣಿನ ನೋಟ ಅವಳ ಕೊರಳಿನಲ್ಲಿ ಹೊಳೆಯುತ್ತಿದ್ದ ತಾಳಿಯ ಮೇಲೆ ಬಿತ್ತು. ಚಂದುವಿನ ಪ್ರಬಲವಾದ ಬಯಕೆ ನೀರೆರಚಿದ ಬೆಂಕಿಯಂತೆ ತಟ್ಟನೆ ತಣ್ಣಗಾಗಿ ಹೋಯಿತು. ಸರ್ಪ ಮೆಟ್ಟಿದವನಂತೆ ಚಂದು ಹಿಂದಕ್ಕೆ ಸರಿದ.

ಎರಡು ದಿನ ಇಬ್ಬರೂ ಪರಸ್ಪರ ಮಾತನಾಡಿಸುವ ಸಾಹಸ ಮಾಡಲಿಲ್ಲ. ಅಂತರಂಗವನ್ನು ದಹಿಸುತ್ತಿದ್ದ ದೈಹಿಕ ಆಕರ್ಷಣೆಯೊಡನೆ ಭಾರತಿ

ಹೆಜ್ಜೆ ಹೆಜ್ಜೆಗೂ ಹೊಡೆದಾಡತೊಡಗಿದಳು. ಪ್ರತಿನಿತ್ಯದ ಪ್ರತಿಭಟನೆಯಿಂದಾಗಿ ಮನಸ್ಸು ಸೋಲತೊಡಗಿತು. ಪರಪುರುಷನನ್ನು ಬಯಸುವುದು ತಪ್ಪು ಎಂದು ಸಂಪ್ರದಾಯಕ್ಕೆ ಕಟ್ಟುಬಿದ್ದ ಮನಸ್ಸು ವಿವೇಕ ನುಡಿಯಿತು. ಪ್ರಾಯ, ಯೌವನದ ಮದದಿಂದ ಮೋಹಗೊಂಡಿದ್ದ ಮನಸ್ಸು ವಿರೋಧಿಸಿತು. 'ಇನ್ನೆಷ್ಟು ದಿನ ಸಹಿಸಲಿ? ನಾನು ಮಾನವಳಲ್ಲವೇ? ಬಿಸಿರಕ್ತದ, ಏರುಪ್ರಾಯದ ಯುವತಿಗೆ ಸಹಜವಾದ ರಾಗೋದ್ವೇಗಗಳು ನನಗೂ ಇಲ್ಲವೇ? ಈ ವಯಸ್ಸಿನಲ್ಲಿ, ದಾಂಪತ್ಯ ಜೀವನದಲ್ಲಿ ತೃಪ್ತಿಪಡೆಯದ ನಾನು ಈಗ ಸಹಚರನನ್ನು ಬಯಸಿದಗೆ ತಪ್ಪೇನು? ಬಾಯಾರಿಕೆ, ಹಸಿವು, ನಿದ್ದೆಗಳಂತೆ ಕಾಮವೂ ಒಂದು ಹುಟ್ಟುಗುಣ. ಬಾಯಾರಿಕೆಯಾದಾಗ ನೀರು ಕುಡಿಯದಿರಲು ಸಾಧ್ಯವೇ? ಬಾಯಾರಿಕೆಯಾದಾಗ ನೀರು ಕುಡಿಯುವುದಾಗಲಿ, ಹಸಿವಾದಾಗ ಊಟಮಾಡುವುದಾಗಲಿ ತಪ್ಪಿಲ್ಲವಾದರೆ ಈ ದೈಹಿಕಾಕರ್ಷಣೆಯನ್ನೇಕೆ ಅದುಮಿಡಬೇಕು?'

ಈ ದುಡುಕಿನ ಮಾತನ್ನು ವಿವೇಕ ಒಪ್ಪಲಿಲ್ಲ. "ನಿನ್ನ ಭಾವನೆಗಳು ತಪ್ಪು. ಈಗ ದುಡುಕಿದರೆ ಮುಂದೆ ಪಶ್ಚಾತ್ತಾಪ ಪಡಬೇಕಾದೀತು. ನೀನು ಆನಂದನ ಮಡದಿ. ಅನ್ಯರನ್ನು ಕಾಮಿಸುವುದು ತಪ್ಪು. ಅವನನ್ನು ಕಾಮಿಸಿ ಪ್ರೇಮಿಸಬೇಡ."

"ನಾನು ಆನಂದನನ್ನು ಈಗಲೂ ಪ್ರೀತಿಸುತ್ತೇನೆ. ಜನ್ಮಜನ್ಮಾಂತರಗಳಿಗೂ ಅವನೇ ನನ್ನ ಪತಿಯಾಗಲಿ. ನನ್ನ ಪ್ರೇಮ, ಹೃದಯ ಅವರದು. ಎಂದೆಂದಿಗೂ ನಾನು ಅವರವಳು. ಆದರೆ ಈ ಕಾಮನೆ...."

ಭಾರತಿ ತೋಳಿನ ಮೇಲೆ ತಲೆಯಿಟ್ಟು ಮಲಗಿದಳು. ಎರಡು ಮನಸ್ಸಿನ ಘರ್ಷಣೆಯಲ್ಲಿ ಏನು ಮಾಡಲೂ ತೋಚದೆ ವಿಹ್ವಲಳಾದಳು. ಕಣ್ಣುಗಳು ಹನಿಗೂಡಿದವು ಇಂದ್ರಿಯ ನಿಗ್ರಹ ಮಾಡುವ ಶಕ್ತಿ ತನ್ನಲ್ಲಿ ಇಲ್ಲದಿರುವುದಕ್ಕಾಗಿ ಭಾರತಿಗೆ ತನ್ನ ಮೇಲೆ ದ್ವೇಷ ಉಕ್ಕಿಬಂತು. ಆ ವೇಗದಲ್ಲಿ ಭಾರತಿ ತನ್ನ ತೋಳನ್ನು ಹಲ್ಲುಗಳಿಂದ ಬಿಗಿಯಾಗಿ ಕಚ್ಚಿದಳು. ಅವಳ ಬಿಳಿತೋಳು ಕೆಂಪಾಗಿ, ಹಲ್ಲೂರಿದ ಜಾಗದಲ್ಲಿ ನೀಲಿ ಛಾಯೆಯೇರಿತು. 'ಸಂಯಮ ನನ್ನ ಕೈಬಿಡದಿರಲಿ' ಎಂದು ದೇವರನ್ನು ಪ್ರಾರ್ಥಿಸಿದಳು. ಆದರೆ ನಿಸರ್ಗದ ಬಲೆಯಲ್ಲಿ ಅವಳ ಎಳೆಯ ಮನಸ್ಸು ದಿನದಿನಕ್ಕೂ ಮಿದುವಾಗತೊಡಗಿತು. ರಾತ್ರಿಯಾದ ಕೂಡಲೇ ಈ ಬಯಕೆಯನ್ನು ಸುಟ್ಟುಬಿಡಬೇಕೆಂದು ದೃಢ ನಿರ್ಧಾರಮಾಡಿ ಏಳುತ್ತಿದ್ದಳು. ಆದರೆ ಬೆಳಗಾದಮೇಲೆ ಚಂದುವಿನ ದೀರ್ಘ ಸುಂದರಾಕಾರ ಅವಳ ನಿರ್ಧಾರವನ್ನು ಹುಡಿಗೂಡಿಸಿ,

ಕಾಮಜ್ವಾಲೆಗೆ ತೈಲವನ್ನೆರೆಯುತ್ತಿತ್ತು. ನಿಸರ್ಗದ ಕರೆಯೆದುರಿಗೆ ಭಾರತಿ ಸೂತ್ರದ ಬೊಂಬೆಯಂತಾದಳು. ಅದರ ಅರಿವಾದರೂ, ಬಯಕೆಯ ಸೊಲ್ಲಡಗಿಸುವ ಶಕ್ತಿ ಅವಳಲ್ಲಿರಲಿಲ್ಲ. ದುರ್ಬಲ ಗಳಿಗೆಯಲ್ಲಿ ವಿವೇಕ ಮೀರಿ ಎಲ್ಲಿ ಆಭಾಸವಾಗಿ ವರ್ತಿಸಿಬಿಡುವೆನೋ ಎಂಬ ಭಯ ಎಡಬಿಡದೆ ಕಾಡುತ್ತಿತ್ತು. 'ನನ್ನ ಭಾಗಕ್ಕೆ ಶನಿ ಬಂದಹಾಗೆ ಚಂದು ಬಂದ' ಎಂದು ಅವನನ್ನು ಮನಸ್ಸಿನಲ್ಲೇ ಶಪಿಸುತ್ತಿದ್ದಳು.

ಒಂದು ದಿನ ಬೆಳಿಗ್ಗೆ ವೇದಮ್ಮನವರಿಗೆ ಅಡಿಗೆಯ ಒಲೆಗೆ ಕೆಂಡ ಬೇಕಾಯಿತು. ವೇದಮ್ಮನವರು ಭಾರತಿಗೆ ಚಿಮುಟ, ಬಾಣಲೆ ಕೊಟ್ಟು 'ಬಚ್ಚಲು ಮನೆ ಒಲೇಲಿ ಕೆಂಡವಿದೆ. ತೆಗೆದುಕೊಂಡು ಬಾ' ಎಂದರು.

ಬಚ್ಚಲು ಮನೆಯ ಬಾಗಿಲು ಅರ್ಧ ತೆಗೆದಿತ್ತು. ಭಾರತಿ ಹಿಂದು ಮುಂದು ನೋಡದೆ ಒಳಗೆ ಕಾಲಿಟ್ಟು ಪೆಟ್ಟುಬಿದ್ದು ಹಿಂದೆ ಸರಿದಳು. ಚಂದು ಆಗ ತಾನೇ ಸ್ನಾನಮಾಡಿದ್ದುದರಿಂದ ಮೈಯೆಲ್ಲಾ ಕೆಂಪಗಾಗಿ ಹಬೆ ಹೊರಡುತ್ತಿತ್ತು. ಕ್ರಾಪಿನ ಕೂದಲು ಹಣೆಗೆ ಅಂಟಿಕೊಂಡಿತ್ತು. ವಿಶಾಲವಾದ ಉಕ್ಕಿನಂತಹ ಎದೆ, ಮಾಂಸಖಂಡ ಉಬ್ಬಿ ಕಾಣುತ್ತಿದ್ದ ತೋಳು ಅವಳ ಸುಪ್ತ ಬಯಕೆಯನ್ನು ಕೆರಳಿಸಿದವು. ಆ ತೋಳಿನ ಬಿಗಿತಕ್ಕೆ ಸಿಕ್ಕಿದ ದೇಹ ಪುಡಿಯಾಗಬಹುದಲ್ಲವೇ? ಚಂದುವಿನ ಅರೆನಗ್ನ ದೇಹದ ತಾರುಣ್ಯ ಭಾರತಿಯನ್ನು ಸೂಜಿಗಲ್ಲು ಕಬ್ಬಿಣವನ್ನು ಆಕರ್ಷಿಸುವಂತೆ ಆಕರ್ಷಿಸಿತು.

ಭಾರತಿಯನ್ನು ನೋಡಿ ಚಂದು ಆತುರದಿಂದ ನೆಟ್‌ಬನೀನ್ ಹಾಕಿಕೊಂಡ. ಆದರೆ ಅವಳ ಮುಖದ ಮೇಲಿದ್ದ ದಾಹ, ಅತೃಪ್ತಿ, ಮೆಚ್ಚುಗೆಯನ್ನು ಅವನ ಸೂಕ್ಷ್ಮ ಕಣ್ಣುಗಳು ಗಮನಿಸದಿರಲಿಲ್ಲ.

ಆ ದಿನ ಭಾರತಿಯ ಚಿತ್ತ ಅವಳ ಸ್ವಾಧೀನದಲ್ಲಿರಲಿಲ್ಲ. ಮನಸ್ಸಿನೊಡನೆ ಯುದ್ಧ ಮಾಡುತ್ತಾ ನೆಪಮಾತ್ರಕ್ಕೆ ಕೈಲಿ 'ನಿಟ್ಟಿಂಗ್' ಹಿಡಿದು ಭಾರತಿ ಕುಳಿತಿದ್ದಳು. ಚಂದು ಪಂಜಾಬಿಗಳ ಪಾಯಿಜಾಮ ತೊಟ್ಟು, ನೆಹರೂ ಶರಟು ಹಾಕಿ, ಬಾಚಣಿಗೆಯಲ್ಲಿ ತಲೆ ಬಾಚಿಕೊಳ್ಳುತ್ತಾ ಬಂದ. ಅವನನ್ನು ನೋಡಿಯೂ ನೋಡದವಳಂತೆ ಭಾರತಿ ಸುಮ್ಮನೆ ಕುಳಿತಿದ್ದಳು.

"ಏನು ಮಾಡುತ್ತಿದ್ದೀರಿ?"

"ಹೀಗೆ.... ಹೆಣಿಗೆ...." ಭಾರತಿ ಉದಾಸೀನವಾಗಿ ಉತ್ತರ ಕೊಟ್ಟಳು.

"ಏನು ಹಾಕುತ್ತಿರುವಿರಿ? ಕುಲಾವಿ.... ಅದಕ್ಕಿನ್ನೂ ಬಹಳ ದಿನ ಬೇಕೆಂದು ತೋರುತ್ತದೆ...." ಚಂದು ಸೂಕ್ಷ್ಮವಾಗಿ ಅವಳ ಮುಖ ನೋಡಿದ. ಭಾರತಿ ಉತ್ತರ ಕೊಡಲಿಲ್ಲ.

"ಯಾಕೆ ತುಂಬಾ ಮೌನ?"

ಮಾತಿನ ಲಹರಿ ತಿರುಗಿಸುವ ಸಲುವಾಗಿ ಭಾರತಿ ಕೇಳಿದಳು "ಈಚೆಗೆ ನೀವು ಯಾವ ಚಿತ್ರ ಬರೆದಿದ್ದೀರಿ?"

"ಕುಂಚ ಕೈಲಿ ಹಿಡಿದು ಬಹಳ ದಿನವಾಯಿತು."

"ಕಾರಣ?"

"ಮನಸ್ಸಿಗೆ ಶಾಂತಿ ಇಲ್ಲ."

"ಅಂತಹ ಪ್ರಸಂಗ ಏನು ಬಂದಿದೆ"

"ಎಲ್ಲರಿಗೂ ಹಾಗೆನಿಸುವುದು ಸಹಜ. ನನಗೇನು ಮನೆ, ಮಠ, ಸಂಸಾರವಿಲ್ಲ. ಆದುದರಿಂದ ನೀವು ಹಾಗೆ ಭಾವಿಸಿದರೆ ತಪ್ಪೇನಿಲ್ಲ. ಆದರೆ ನಿಮ್ಮೆದುರಿಗೆ ನನ್ನ ಸುಖ, ದುಃಖ ಹೇಳಿಕೊಳ್ಳುವುದರಲ್ಲಿ ಸಮಾಧಾನವಿದೆ. ನಿಜವಾಗಿಯೂ ನಾನು ಅಸುಖಿ!"

"ಏಕೆ" ಎಂದು ಕೇಳುವ ಧೈರ್ಯ ಭಾರತಿಗೆ ಬರಲಿಲ್ಲ. ಉಲ್ಲನ್ ದಾರವನ್ನು ಬೆರಳಿಗೆ ಸುತ್ತಿ, ಬಿಚ್ಚತೊಡಗಿದಳು.

"ನನ್ನದೊಂದು ಕೋರಿಕೆ ಇದೆ."

"ಏನು" ಭಾರತಿ ತಲೆ ಎತ್ತದೆ ಕೇಳಿದಳು.

"ಈಗ ಚಿತ್ರ ಬರೆಯುವ ಆಸೆಯಾಗಿದೆ."

"ಹಾಗಾದರೆ ಬರೆಯಬಹುದಲ್ಲಾ" ಭಾರತಿ ಉತ್ಸುಕತೆಯಿಂದ ಅವನ ಕಡೆ ನೋಡಿದಳು.

"ಆದರೆ........"

"ಆದರೇನಿಲ್ಲ. ನೀವು ಖಂಡಿತ ಬರೆಯಿರಿ. ಹೇಗೆ ಬರೆಯುತ್ತೀರೋ ನಾನು ನೋಡಬೇಕು."

"ನೀವೂ ಸಹಾಯಮಾಡುವುದಾದರೆ ಬರೆಯುತ್ತೇನೆ."

"ಚಿತ್ರ ಬರೆಯುವುದರಲ್ಲಿ ನನ್ನದೇನು ಸಹಾಯ? ನನಗೆ ನೆಟ್ಟಗೆ ಒಂದು ಗೆರೆ ಎಳೆಯಲು ಸಹ ಬರುವುದಿಲ್ಲ."

"ನೀವೇ ಒಂದು ಸುಂದರ ಚಿತ್ರ" ಎಂದು ಹೇಳಲು ತವಕಿಸುತ್ತಿದ್ದ ಮನಸ್ಸನ್ನು ಚಂದು ಬಿಗಿ ಹಿಡಿದ.

"ಏನು ಬರೆಯಲಿ?"

"ಏನಾದರೂ ಸರಿ. ಆಕಾಶ, ಮೋಡ, ಹಕ್ಕಿ........"

"ನಿಮ್ಮನ್ನು ಬರೆಯಲೇ?"

ಭಾರತಿ ಅವಾಕ್ಕಾಗಿ ಅವನ ಕಡೆ ನೋಡಿದಳು.

"ನನ್ನನ್ನು ಚಿತ್ರಿಸುವಿರಾ !"

"ಹೌದು. ಯಾಕಾಗಬಾರದು ?"

"ಛೀ, ನೋಡಿದವರು ಏನೆಂದುಕೊಳ್ಳುತ್ತಾರೆ."

"ನೋಡುವವರು ಯಾರು ? ನಾನು ಬರೆಯುತ್ತೇನೆ, ನೀವು ನೋಡಿ. ಗುಟ್ಟು ನಮ್ಮಿಬ್ಬರಲ್ಲಿಯೇ ಇದ್ದರೆ ಯಾರು ಏನೂ ತಿಳಿಯುವುದಿಲ್ಲ."

ಭಾರತಿಯ ಮನಸ್ಸು ಉಯ್ಯಾಲೆಯಾಡಿತು. ಚಿತ್ರ ಬರೆಯಿಸಿ ಕೊಳ್ಳುವ ಆಸೆಯಿದ್ದರೂ ಯಾರಾದರೂ ನೋಡಿಬಿಟ್ಟರೆ ಎಂಬ ಹೆದರಿಕೆ ಆಸೆಯೊಡನೆ ಹೆಣೆದುಕೊಂಡಿತ್ತು. ಅವಳ ಮನಸ್ಸು ಅನಿಶ್ಚಯದ ತೆರೆಗಳ ಮೇಲೆ ತೇಲಾಡುತ್ತಿರುವುದನ್ನು ಕಂಡು ಚಂದು ಅತ್ಯಂತ ಮೃದುವಾದ ದನಿಯಲ್ಲಿ ಹೇಳಿದ "ನನ್ನ ಕೋರಿಕೆ ತಿರಸ್ಕರಿಸಬೇಡಿ ದೊಡ್ಡ ಮನಸ್ಸು ಮಾಡಿ ಒಪ್ಪಿಕೊಳ್ಳಿ." ಮಧುರ ಜೋಗುಳಕ್ಕೆ ನಿದ್ದೆ ಹೋಗುವ ಮಗುವಿನಂತೆ ಭಾರತಿ ಅವನ ದನಿಗೆ ಸೆರೆಯಾಗಿ ಸಮ್ಮತಿಸಿದಳು.

"ಹಾಗಾದರೆ ನಾನು ಬರೆಯುವ ಸಾಮಗ್ರಿಗಳನ್ನು ತರಲೇ ?"

"ಇದೇ ಉಡುಪು ಸಾಕೆ ? ತಲೆಗೂದಲು ಕೆದರಿದೆ........?"

"ನೀವು ಹೇಗಿದ್ದರೂ ಪರವಾಗಿಲ್ಲ. ಅಲಂಕಾರದ ಬಗ್ಗೆ ಯೋಚಿಸ ಬೇಡಿ"

ಭಾರತಿ ಬೆದರಿದ ಕಣ್ಣುಗಳಿಂದ ಸುತ್ತಲೂ ನೋಡಿದಳು. ಅದರ ಅರ್ಥ ತಿಳಿದು ಚಂದು,

"ಯಾರೂ ಮನೆಯಲ್ಲಿಲ್ಲ" ಎಂದ.

ವಿರಹಾಗ್ನಿಯಲ್ಲಿ ಅವಳ ದೇಹ ಕಾಯುತ್ತಿರುವುದು ಅವನಿಗೆ ತಿಳಿ ದಿತ್ತು. ಕಬ್ಬಿಣ ಚೆನ್ನಾಗಿ ಕಾದ ಮೇಲೆ ಹೊಡೆಯಬೇಕೆಂದು ಚಂದು ಸುಮ್ಮನಿದ್ದ. ಎರಡು ನಿಮಿಷಗಳಲ್ಲಿ ಚಿತ್ರಕ್ಕೆ ಬೇಕಾದ ಸಾಮಗ್ರಿಗಳನ್ನು ತಂದು ಹೇಳಿದ—

"ನಾನು ಹೇಳಿದಂತೆ ಕುಳಿತುಕೊಳ್ಳಿ."

"ಹೇಗೆ ?"

"ಕತ್ತು ಕೊಂಚ ಕೊಂಕಿಸಿ. ಹೂಂ ಹಾಗಲ್ಲ. ತಲೆ ಸ್ವಲ್ಪ ಎಡಕ್ಕೆ ಬಾಗಿರಲಿ. ಮುಖ ಮೇಲೆತ್ತಿದ್ದರೆ ಒಳ್ಳೆಯದು. ಎಲ್ಲಿ, ನನ್ನ ಕಡೆ ನೋಡಿ. ಅಷ್ಟು ಗಂಭೀರವಾಗಿರಬೇಡಿ. ನಗು ಕಣ್ಣು, ತುಟಿಯ ಮೇಲಿ ರಲಿ. ನೀವು ತಪ್ಪು ಭಾವಿಸಬೇಡಿ..... ಮತ್ತೆ ಸೆರಗು ಪೂರ್ತಿ ಹೊದೆಯ ಬೇಡಿ......................"

ಭಾರತಿ ಅವನು ಸೂಚಿಸಿದಂತೆ ಕುಳಿತು "ಸರಿಯಾಗಿದೆಯೇ" ಎಂದಳು.

"ಊಹೂಂ. ಇನ್ನೂ ಕೊರಳು ಸ್ವಲ್ಪ ಬಗ್ಗಿರಲಿ. ಆದರೆ ಮುಖ ಮೇಲಿರಲಿ—ಬಾಗಿದ ರೆಂಬೆಯ ಮೇಲಿನ ಹೂವಿನ ಹಾಗೆ...." ಚಂದು ಅವಳ ಹತ್ತಿರ ಬಂದು ನಿಂತ. ಭಾರತಿ ಮತ್ತೊಮ್ಮೆ ಅವನು ಹೇಳಿದಂತೆ ಕುಳಿತುಕೊಳ್ಳಲು ಪ್ರಯತ್ನಿಸಿದಳು. ಆದರೆ ಅವಳ ಪ್ರಯತ್ನ ಯಶಸ್ವಿಯಾಗಲಿಲ್ಲ.

"ಹಾಗಲ್ಲ. ಹೀಗೆ" ಎನ್ನುತ್ತಾ ಚಂದು ಬಂದು ಒಂದು ಕೈಯಲ್ಲಿ ಅವಳ ಗಲ್ಲ ಹಿಡಿದು ಮುಖ ತಿರುಗಿಸಿದ. ಭಾರತಿ ಅವನ ಸ್ಪರ್ಶಕ್ಕೆ ನಡುಗಿದಳು. ಅವನ ಬೆರಳುಗಳು ಅವಳ ಗಲ್ಲವನ್ನು ಬಿಗಿಯಾಗಿ ಹಿಡಿದಿದ್ದವು. ಕೈ ಬೆರಳುಗಳು ಗಲ್ಲದಿಂದ ಕೆನ್ನೆಯ ಮೇಲೆ ಓಡಾಡಿದವು. ಭಾರತಿ ಮಂತ್ರಶಕ್ತಿಗೆ ವಶವಾದ ಹಾವಿನಂತೆ ಅವನ ಮುಖವನ್ನೇ ನೋಡುತ್ತಿದ್ದಳು. ಭಾರತಿಗೆ ತಾನು ನಿದ್ದೆಯ ಲೋಕದಲ್ಲಿರುವಂತೆ ಭಾಸವಾಯಿತು. ಅವನ ತುಟಿ ಅವಳ ಕೆನ್ನೆಯನ್ನು ಒತ್ತಿದಾಗ ಭಾರತಿ ನಿದ್ದೆಯಿಂದ ಎಚ್ಚೆತ್ತವಳಂತೆ ಬೆಚ್ಚಿದಳು, ಇದ್ದ ಚೈತನ್ಯವನ್ನೆಲ್ಲಾ ಒಟ್ಟುಗೂಡಿಸಿ ಎದ್ದು ನಿಂತಳು. ಅವಳ ಕಣ್ಣುಗಳಲ್ಲಿ ದ್ವೇಷ ಉರಿಯುತ್ತಿತ್ತು. ಬಲಗೈ ಎತ್ತಿ ಚಂದುವಿನ ಕೆನ್ನೆಗೆ ಬಲವಾಗಿ ಹೊಡೆದಳು. ಚಂದು ತನ್ನ ಕೆನ್ನೆಯನ್ನು ಹೊಡೆದ ಕೈಯನ್ನು ಬಲವಾಗಿ ಹಿಡಿದುಕೊಂಡ. ಭಾರತಿ ಅವನ ಕೈ ಕಚ್ಚಿ ಮಹಡಿಯ ಮೇಲೆ ಓಡಿ ಹೋದಳು. ಅವಳು ರೂಮಿನ ಬಾಗಿಲನ್ನು ಹಾಕಿಕೊಂಡ ಸದ್ದು ಚಂದುವಿನ ಅಮಲನ್ನು ಇಳಿಸಿತು. ಚಂದು ತನ್ನ ದುಡುಕಿಗಾಗಿ ನಿಂದಿಸಿಕೊಂಡ.

"ನನಗೆ ತಿಳುವಳಿಕೆಯಿಲ್ಲ. ಇನ್ನೂ ಒಂದೆರಡು ದಿನ ಕಾಯದೇ ಆತುರಪಟ್ಟೆ. ಆದರೆ ಆ ಕೈಗಳಿಂದ ಒಂದಲ್ಲ ಸಾವಿರ ಏಟು ತಿನ್ನಲೂ ನಾನು ಸಿದ್ಧ" ಎಂದುಕೊಂಡ.

ಭಾರತಿ ರೂಮಿನ ಬಾಗಿಲು ಹಾಕಿ ಮಂಚದ ಮೇಲೆ ಬಿದ್ದಳು. ಕಣ್ಣಿನಿಂದ ಹರಿದು ಬಂದ ಕಂಬನಿ ಅವಳ ಕೆನ್ನೆಯನ್ನು ತೋಯಿಸಿತು.

"ಅವರು ಬೇಗ ಬರಬಾರದೇ ? ನನ್ನನ್ನು ಉಳಿಸಬಾರದೇ ? ನಾನು ಅವರಿಗೆ ದ್ರೋಹ ಮಾಡಲಾರೆ" ಎಂದು ಅವಳ ಆತ್ಮ ನರಳಿತು.

"ನನ್ನ ಮನಸ್ಸು ಗಟ್ಟಿಯಾಗಿದ್ದಿದ್ದರೆ ಚೆನ್ನಾಗಿತ್ತು. ಇನ್ನು ನಾನು ಹೊಡೆದಾಡಲಾರೆ. ಇಲ್ಲಿಯೇ ಇದ್ದರೆ ಖಂಡಿತ ಜಾರುತ್ತೇನೆ. ಮನೋನಿಗ್ರಹ ನನಗಿಲ್ಲ. ಏನು ಮಾಡಲಿ ?" ಎಂದು ಭಾರತಿ ಯೋಚಿಸತೊಡ

ಗಿದಳು. ಮನಸ್ಸು ನಿವಾರಣೆಯ ಮಾರ್ಗ ಹುಡುಕುವ ಬದಲು ಚಂದು ವನ್ನು ನೆನೆಯತೊಡಗಿತು. ಅವನ ತುಟಿ ತಗುಲಿದ ಕೆನ್ನೆ ಬೆಂಕಿ ಯಿಟ್ಟಂತೆ ಉರಿಯುತ್ತಿತ್ತು. ಮೊದಲನೆಯ ಬಾರಿ ಮದ್ಯ ಕುಡಿದವ ರಂತೆ ಅವಳ ಮನಸ್ಸು ಹರ್ಷ, ಹೆದರಿಕೆಯ ನಡುವೆ ತೂಗಾಡುತ್ತಿತ್ತು. ಚಂದುವಿಗೆ ಸಂಪೂರ್ಣ ಸೋಲುವ ಸಮಯದಲ್ಲಿ ಸಂಪ್ರದಾಯಕ್ಕೆ ಕಟ್ಟು ಬಿದ್ದ ಮನಸ್ಸು ಸಿಡಿದೆದ್ದು ಅವಳು ಅವನ ಕೆನ್ನೆಗೆ ಹೊಡೆಯುವಂತೆ ಮಾಡಿತ್ತು. ಆದರೂ ಅವನ ಸ್ಪರ್ಶ ಅವಳಿಗೆ ತಂಪು ನೀಡಿತ್ತು. ಆದರೆ ಅದರಿಂದ ಅವಳಿಗೆ ತೃಪ್ತಿಯಾಗಲಿಲ್ಲ. ಕಾದ ಭೂಮಿಯ ಮೇಲೆ ಎರಡೇ ಹನಿ ಹೊಸ ಮಳೆ ಬಿದ್ದಂತಾಯಿತು. ಭಾರತಿ ತಲೆಯಲ್ಲಿನ ಯೋಚನೆಗಳ ನ್ನೆಲ್ಲಾ ಒದರುವಂತೆ ತಲೆ ಅಲುಗಿಸಿ 'ಏನು ಮಾಡಲಿ' ಎರಡು ಪುನಃ ಯೋಚಿಸಿದಳು. ಕೊನೆಗೆ ಅವಳಿಗೆ ಒಂದು ಉಪಾಯ ಹೊಳೆಯಿತು. ಬೆಂಕಿಯ ಹತ್ತಿರ ಬೆಣ್ಣೆ ಇಟ್ಟರೆ ತಾನೇ ಅದು ಕರಗುವುದು? ಬೆಂಕಿಯ ಕಾವಿಗೆ ತಗುಲದಂತೆ ಬೆಣ್ಣೆ ದೂರವಿದ್ದರೆ? ತಾನು ಇದುವರೆವಿಗೆ ಅದುಮಿ ತುಳಿದಿರುವ ಸಮಸ್ತ ಬಯಕೆಗಳನ್ನು ಕೆರಳಿಸುವ ಚಂದುವಿನ ಸಮೀಪದಲ್ಲಿ ದೃಢ ದೇಹ ಅವನಿಗೆ ಶರಣಾಗಬಹುದು. ಅವನಿಂದ ದೂರವಿದ್ದರೆ ಮನೋ ನಿಗ್ರಹಮಾಡಿ ಈ ಹೋರಾಟದಲ್ಲಿ ತಾನು ಜಯಶಾಲಿಯಾಗಬಹುದಲ್ಲವೇ? ಭಾರತಿ ಒಂದು ನಿಶ್ಚಯಕ್ಕೆ ಬಂದು ಮೇಲೆದ್ದಳು.

## ೧೬

ರಾತ್ರಿ ಊಟಮಾಡುವಾಗ ಭಾರತಿ ವೇದಮ್ಮನಿಗೆ ಹೇಳಿದಳು.

"ನಾನು ಕೆಲವು ದಿವಸ ಮೈಸೂರಿಗೆ ಹೋಗಿದ್ದು ಬರುತ್ತೇನೆ"

ಅವಳ ದನಿ ಶಾಂತವಾಗಿತ್ತು. ಭಾರತಿಯ ಮಾತು ಕೇಳಿ ತಲೆ ತಗ್ಗಿಸಿ ಊಟಮಾಡುತ್ತಿದ್ದ ಚಂದು ತಲೆಯೆತ್ತಿ ಅವಳ ಕಡೆ ನೋಡಿದ. ಭಾರತಿ ನೀರು ಕುಡಿಯುವುದರಲ್ಲಿ ಮಗ್ನಳಾಗಿದ್ದಳು. ತಾನು ಪ್ರೇಮಿಸಿ, ಕಾಮಿಸಿದ ಹೆಣ್ಣು ತನ್ನಿಂದ ದೂರಹೋಗುವ ಸುದ್ದಿ ಚಂದುವಿಗೆ ಪ್ರಿಯವಾಗಿರಲಿಲ್ಲ. ತಾನಿರುವೆಡೆಯಲ್ಲಿಯೇ ಉಳಿದು ಆತ್ಮಪರೀಕ್ಷೆ ಮಾಡಲಾರಳೆ, ತನ್ನಲ್ಲಿಯೇ ನಂಬುಗೆ ಸಾಲದೆ, ಅವಳು ತನ್ನಿಂದ ತಪ್ಪಿಸಿಕೊಂಡು ಓಡಿಹೋಗಲು ಹೀಗೆ ಹೇಳುತ್ತಿರುವಳೆಂಬುದು ಅವನಿಗೆ ತಿಳಿಯಿತು.

"ಅಪ್ಪ ಏನಾದರೂ ಕಾಗದ ಬರೆದಿದಾರೆಯೇ?" ರಂಗಣ್ಣ ಕೇಳಿದರು.

"ಇಲ್ಲ."

"ಹಾಗಾದರೆ ನಾಳೆ ಕಾಗದ ಬರಿ. ನಾಡಿದ್ದು ಹೋಗುವಿಯಂತೆ" ವೇದಮ್ಮ ಹೇಳಿದರು.

"ಊಹೂಂ. ನಾನು ನಾಳೇನೇ ಹೋಗಬೇಕು. ನಾಳೆ ಬೆಳಿಗ್ಗೇನೇ ಹೋಗುತ್ತೇನೆ" ಭಾರತಿ ಹಟಹಿಡಿದಳು. ಇನ್ನೊಂದು ದಿನ ಹೆಚ್ಚಿಗೆ ನಿಂತು ತನ್ನನ್ನು ಪರೀಕ್ಷೆ ಮಾಡಿಕೊಳ್ಳುವ ಧೈರ್ಯ ಅವಳಲ್ಲಿರಲಿಲ್ಲ. ವೇದಮ್ಮನಿಗೆ ಸೊಸೆಯ ಮಾತು ಕೇಳಿ ಆಶ್ಚರ್ಯವಾಯಿತು. ತಾವು ಹೇಳಿದುದಕ್ಕೆ ಭಾರತಿ ಎಂದೂ ಎದಿರುತ್ತರ ಕೊಟ್ಟಿರಲಿಲ್ಲ. ಹುಡುಗಿಗೆ ತಾಯಿಯನ್ನು ನೋಡುವ ಆಸೆಯಾಗಿರಬಹುದೆನಿಸಿ 'ಆಗಲಿ' ಎಂದರು. ಅಕ್ಕ ತನ್ನ ಸಮ್ಮತಿ ಕೊಟ್ಟು ದನ್ನು ಕೇಳಿ ಚಂದುವಿನ ಊಟ ಮುಂದೆ ಸಾಗಲಿಲ್ಲ. ಊಟದ ಶಾಸ್ತ್ರ ಮುಗಿಸಿ ಎದ್ದು ಹೋದ. ಮದುವೆಯಾಗಿರುವ ಹುಡುಗಿಯನ್ನು ಪ್ರೇಮಿಸಿ ಬಯಸುವುದು ತಪ್ಪು ಎಂದು ತಿಳಿದಿದ್ದರೂ ಚಂದು ನಿರುಪಾಯನಾಗಿದ್ದ. ತಲೆಯ ಹಿಂದೆ ಕೈಕಟ್ಟಿ ತಾರಸಿಯನ್ನೇ ಶೂನ್ಯ ದೃಷ್ಟಿಯಿಂದ ನೋಡುತ್ತ ಮಲಗಿದ್ದ.

ಇದ್ದಕ್ಕಿದ್ದಂತೆಯೇ ಯಾರೋ ಯಾತನೆಯಿಂದ ಚೀರಿದಂತಾಯಿತು. ಚಂದು ಎದ್ದು ಹೊರಗೆ ಬಂದ. ಕೂಗು ಕೇಳಿ ಭಾರತಿ, ರಂಗಣ್ಣನವರೂ ಓಡಿಬಂದರು. ವೇದಮ್ಮನವರು ತಟ್ಟೆ ತೊಳೆಯಲು ಹೋದಾಗ ಬಚ್ಚಲಿ ನಲ್ಲಿ ಜಾರಿ ಬಿದ್ದಿದ್ದರು. ಅವರ ಸೀರೆ ಸೀರಿನಿಂದ ಒದ್ದೆಯಾಗಿತ್ತು, ಕೈಲಿದ್ದ ಗಾಜಿನ ಬಳೆಗಳು ಒಡೆದು ಹೋಗಿದ್ದವು. ಕಾಲಿನ ನರ ಹೊರಳಿ ಮೂಳೆಗೆ ತುಂಬಾ ಪೆಟ್ಟಾಗಿತ್ತು. ಅವರು ಮೇಲಕ್ಕೆ ಏಳಲು ಯತ್ನಿಸಿ ವಿಫಲರಾದರು. ಚಂದು ಮುಂದನರಿದು ಅಕ್ಕನನ್ನು ಹಿಡಿದು ಎಬ್ಬಿಸಿದ. ತಮ್ಮ ಕಾಲಿನ ಮೇಲೆ ಭಾರಬಿಟ್ಟು ನಿಂತಕೂಡಲೇ ವೇದಮ್ಮ ನೋವಿನಿಂದ 'ನಿಲ್ಲೋಕಾ ಗೋದಿಲ್ಲ ಕಣೋ' ಎಂದು ನರಳಿದರು. ಚಂದು ಅಕ್ಕನನ್ನು ಭುಜದಮೇಲೆ ಒರಗಿಸಿಕೊಂಡು ಭಾರತಿಯ ಕಡೆ ತಿರುಗಿ,

"ಅಕ್ಕನ ಹಾಸಿಗೆ ಹಾಕಿ" ಎಂದ. ಭಾರತಿ ಓಡಿಹೋಗಿ ಅತ್ತೆಯ ಹಾಸಿಗೆ ಹಾಸಿದಳು. ಚಂದು ಅಕ್ಕನನ್ನು ಎಳೆಯ ಮಗುವನ್ನು ಎತ್ತುವಂತೆ ಎತ್ತಿಕೊಂಡು ಬಂದು ಹಾಸಿಗೆಯ ಮೇಲೆ ಮಲಗಿಸಿದ ವಯಸ್ಸಾದವರಾದು ದರಿಂದಲೂ, ಬಿದ್ದ ರಭಸ ಜೋರಾಗಿದ್ದುದರಿಂದಲೂ ವೇದಮ್ಮನವರಿಗೆ ತುಂಬಾ ಪೆಟ್ಟಾಗಿತ್ತು. ಹಾಸಿಗೆಯ ಪಕ್ಕದಲ್ಲಿ ಸಣ್ಣ ಮುಖ ಮಾಡಿಕೊಂಡು ಕುಳಿತಿದ್ದ ಭಾರತಿಯ ಕಡೆ ತಿರುಗಿ,

"ನಾಳೆ ನೀನು ಹೋಗುವ ಹಾಗಿಲ್ಲ" ಎಂದರು.

ಭಾರತಿ ಮರುಮಾತನಾಡಲಿಲ್ಲ. ರಾತ್ರಿ ಒಬ್ಬಳೇ ಮಲಗಿದ್ದಾಗ ಎರಡು ಕೈಗಳಿಂದಲೂ ಹಣೆ ಹಿಡಿದು "ನಾನು ಹಾಳಾಗಿ ಹೋಗಬೇಕಾಗಿದೆ ಯೇನೋ" ಎಂದು ಹೇಳಿಕೊಂಡಳು.

ಬೆಳಗಾಗುವ ಹೊತ್ತಿಗೆ ವೇದಮ್ಮನವರ ಮೈ ಜ್ವರದಿಂದ ಕಾದು ಕೆಂಡವಾಗಿತ್ತು. ಅವರು ಹಾಸಿಗೆಯ ಮೇಲೆ ಕುಳಿತುಕೊಳ್ಳುವ ಸ್ಥಿತಿಯಲ್ಲಿ ಸಹ ಇರಲಿಲ್ಲ. ಭಾರತಿ ಬೆಳಿಗ್ಗೆ ಆರುಗಂಟೆಗೇ ಎದ್ದು ಕೆಳಗೆ ಬಂದು ಒಲೆ ಹೊತ್ತಿಸಿ ವೇದಮ್ಮನವರಿಗೆ ಕಾಫಿ ಮಾಡಿಕೊಟ್ಟಳು. ಕಾಫಿ ಕುಡಿಯುವಾಗ ಸೊಸೆಯ ಮುಖ ನೋಡಿದ ವೇದಮ್ಮನವರು ಗಾಬರಿಯಾದರು.

"ಯಾಕೆ ಮಗು, ಮುಖವೆಲ್ಲಾ ಬಿಳಚಿಕೊಂಡಿದೆ! ಹುಷಾರಾಗಿ ದೀಯೋ ಇಲ್ಲವೋ?"

"ಹುಷಾರಾಗಿದೀನೆ."

"ರಾತ್ರಿ ನಿದ್ದೆ ಮಾಡಿದೆಯೂ? ಕಣ್ಣೆಲ್ಲ ಕೆಂಪಗಿದೆ."

"ಏನೋ ಕಸ ಬಿತ್ತು. ಅದರಿಂದ ಕೆಂಪಗಿರಬೇಕು."

ಚಂದು ಮುಖ ತೊಳೆದುಕೊಂಡು ಬರುವ ಹೊತ್ತಿಗೆ ಭಾರತಿ ಅವನ ಪಾಲಿನ ಕಾಫಿಯನ್ನು ಬಟ್ಟಲಿಗೆ ಹಾಕಿ ಇರಿಸಿ, ಯಾವುದೋ ನೆಪಮಾಡಿ ಕೊಂಡು ಹೊರಗೆ ಹೊರಟುಹೋಗಿದ್ದಳು. ಚಂದು ಅಡಿಗೆ ಮನೆಗೆ ಬಂದಾಗ ಹೊಗೆಯಾಡುತ್ತಿದ್ದ ಕಾಫಿ ಅವನನ್ನು ಸ್ವಾಗತಿಸಿತು. ರಂಗಣ್ಣನವ ರೊಡನೆ ಚಂದು ಊಟಕ್ಕೆ ಕುಳಿತಾಗಲೂ ಭಾರತಿಗೆ ಅವನ ಕಡೆ ನೋಡುವ ಸಾಹಸ ಬರಲಿಲ್ಲ. ಅಕಸ್ಮಾತ್ ಅವಳ ಕಣ್ಣು ಅವನ ಕಣ್ಣುಗಳನ್ನು ಸಂಧಿಸಿ ದಾಗ ಚಂದು ವಿಜಯೋತ್ಸಾಹದ ನಗೆ ಬೀರಿದ.

ಭಾರತಿ ಚಂದುವಿನ ಕಣ್ಣು ತಪ್ಪಿಸಿ ಓಡಾಡಿದರೂ ದಿನದಿನಕ್ಕೆ ಅವಳ ಸಂಯಮ ಸಡಿಲವಾಗುತ್ತಾ ಬಂದಿತು. ಬೆಕ್ಕಿನ ಕಣ್ಣು ತಪ್ಪಿಸಿ ಓಡಾಡುವ ಇಲಿಯ ಸ್ಥಿತಿಯಂತಾಗಿತ್ತು ಅವಳ ಸ್ಥಿತಿ.

ವೇದಮ್ಮನವರಿಗೆ ಎದ್ದು ಓಡಾಡುವ ಶಕ್ತಿಯಿರಲಿಲ್ಲ. ಒಂದು ದಿನ ಭಾರತಿ ಮನೆಗೆಲಸ ಮುಗಿಸಿ ವೇದಮ್ಮನವರಿಗೆ ರೂಮಿಗೇ ಊಟ ತೆಗೆದು ಕೊಂಡು ಹೋದಳು. ಚಂದು ರೂಮಿನ ಬಾಗಿಲಿನಲ್ಲಿ ನಿಂತು,

"ಯಾರೋ ಹೆಂಗಸರು ಬಂದಿದಾರೆ" ಎಂದು ಹೇಳಿಹೋದ.

ಭಾರತಿ ಎದ್ದು ಹೊರಗೆ ಬಂದಳು. ಬಂದಿದ್ದವಳು ಅವಳ ಸ್ನೇಹಿತೆ

"ಬಾಮ್ಮ. ಬಹಳ ಅಪರೂಪವಾಗಿ ಬಂದೆ" ಭಾರತಿ ಗೆಳತಿಯನ್ನು ಸ್ವಾಗತಿಸಿದಳು. ವೇದಮ್ಮನವರು ಮಲಗಿದ ರೂಮಿನಲ್ಲೇ ಭಾರತಿ, ಗೀತಾ ಮಾತನಾಡುತ್ತಾ ಕುಳಿತರು.

"ಇದೇನು ಬೆಂಗಳೂರಿಗೆ ಬಂದಿದೀಯಾ ?"

"ಹೇಗಿದ್ದರೂ ರಜ ಬಂದಿತ್ತು, ನಮ್ಮ ಚಿಕ್ಕಮ್ಮ ಬಾ ಅಂತ ಕಾಗದ ಬರೆದಿದ್ದರು. ನಾಳೆ ಹೊರಟುಹೋಗುತ್ತೀನಿ"

"ಇನ್ನೊಂದೆರಡು ದಿನವಿದ್ದು ಹೋಗಬಾರದೇ ?"

"ಇಲ್ಲಮ್ಮ, ನಮ್ಮ ತಾಯಿ ಬಂದುಬಿಡು ಅಂತ ಬರೆದಿದ್ದಾರೆ ನಾಳೇನೆ ಹೊರಟು ಬಿಡುತ್ತೀನಿ."

"ಅಂತೂ ದೊಡ್ಡ ಮನಸ್ಸು ಮಾಡಿ ಇಲ್ಲಿಗೆ ಬಂದೆಯಲ್ಲ"

"ಈಗ ನೀನು ದೊಡ್ಡ ಮನಸ್ಸು ಮಾಡಬೇಕಾಗಿದೆ."

"ಕಾರಣ ?"

"ನಿನ್ನ ಮೆಚ್ಚಿನ ನಟ ಪಾತ್ರವಹಿಸಿರುವ ಚಿತ್ರ ಬಂದಿದೆ. ಮಧ್ಯಾಹ್ನ ಮ್ಯಾಟನಿಗೆ ಹೋಗಿ ಬರೋಣ."

"ಊಹೂಂ. ನಾನು ಬರುವುದಿಲ್ಲ."

"ಗ್ಯಾರಿ ಕೂಪರ್ ಕಣೇ. ಪುಣ್ಯಮಾಡಿರಬೇಕು...."

"ಖಂಡಿತ ಬರುವುದಿಲ್ಲ."

"ಹೌದಮ್ಮ. ನನ್ನ ಜೊತೆ ಯಾತಕ್ಕೆ ಬರುತ್ತೀಯಾ ? ನಿನ್ನ ಗಂಡನ ಜೊತೆಯಿಲ್ಲದೇ ಬೇರೆ ಯಾರ ಜೊತೆಯೂ ಹೋಗೋದಿಲ್ಲ ಅಂತ ಶಪಥ ಮಾಡಿರುವ ಹಾಗಿದೆ." ಗೀತಾ ಕೋಪಗೊಂಡವಳಂತೆ ಹೇಳಿದಳು.

"ಹಾಗಲ್ಲಮ್ಮ. ನಮ್ಮ ಅತ್ತೇ ಸ್ಥಿತೀನ ನೀನೇ ನೋಡ್ತಾ ಇದೀಯಲ್ಲ. ಬಚ್ಚಲು ಮನೇಲಿ ಬಿದ್ದು ಕಾಲು ಉಳುಕಿಸಿಕೊಂಡಿದಾರೆ. ಈಗೊಂದು ವಾರದಿಂದ ಮೇಲೆ ಏಳ್ಳೇ ಇಲ್ಲ. ಇನ್ನೂ ಒಂದು ವಾರ ಏಳುವ ಹಾಗಿಲ್ಲ. ಮನೆ ಕೆಲಸ ಬಿಟ್ಟು ಹೇಗೆ ಬರಲಿ ?"

"ನಿನ್ನಿಷ್ಟ" ಗೀತಾ ಅಸಮಾಧಾನದಿಂದ ಗೊಣಗಿದಳು. ಗೀತಳ ಅಸಮಾಧಾನ ನೋಡಿ ವೇದಮ್ಮ ಭಾರತಿಗೆ,

"ಹೋಗಿ ಬಾ. ಮಧ್ಯಾಹ್ನದ ಕೆಲಸ ಅಷ್ಟರಲ್ಲಿಯೇ ಇವೆ. ನಿನ್ನೆ ನೀನು ಮಾಡಿರುವ ಕೋಡುಬಳೆಯೇ ಇವತ್ತಿನ ತಿಂಡಿಗೆ ಸಾಕು. ಡಿಕಾಕ್ಷನ್, ಹಾಲು ಇದೆ. ಅದನ್ನು ಬೆರಸಿ ಸ್ಟೋವ್ ಮೇಲೆ ಬಿಸಿಮಾಡುವುದು ಚಂದುವಿಗೆ ದೊಡ್ಡ ಕೆಲಸವಲ್ಲ. ಅನ್ನ ಮಾಡಿದರಾಯಿತು. ಬೆಳಗಿನ ಹುಳಿ

ಸಾಕು." ಎಂದರು.

"ನಿಮಗೇನಾದರೂ ಬೇಕಾದರೆ?"

"ಏನು ಬೇಕಾದರೂ ಚಂದು ಕೊಡುತ್ತಾನೆ. ಇವತ್ತು ಎಲ್ಲೂ ಹೋಗಬೇಡ. ಮನೆಯಲ್ಲೇ ಇರು ಎಂದರಾಯಿತು. ನಿನಗೂ ಮನೆಯಲ್ಲೇ ಇದ್ದು ಬೇಜಾರಾಗಿದೆ. ಹೋಗಿ ಬಾ."

ವೇದಮ್ಮನವರ ಮಾತು ಕೇಳಿ ಗೀತಾಗೆ ಸಮಾಧಾನವಾಯಿತು. ಭಾರತಿ ಗಡಿಯಾರದ ಕಡೆ ನೋಡಿದಳು. ಹನ್ನೆರಡು ಗಂಟೆಯಾಗಿತ್ತು. ಚಿತ್ರ ಮೂರು ಗಂಟೆಗೆ ಆರಂಭವಾಗುವುದಿತ್ತು. ಗೆಳತಿಯರಿಬ್ಬರೂ ಮಹಡಿಯ ಮೇಲೆ ಹೋದರು. ರೂಮಿನ ಬಾಗಿಲು ಹಾಕಿ ಇಬ್ಬರೂ ಹರಟೆ ಹೊಡೆಯಲು ಮೊದಲು ಮಾಡಿದರು. ಗೀತಾ ಎರಡು ಮಂಚದ ಮೇಲಿದ್ದ ಒಂದೇ ಹಾಸಿಗೆಯನ್ನು ನೋಡಿ ಕೀಟಲೆಯಿಂದ ನಗುತ್ತಾ,

"ಛೇ, ದೇವರು ನಿನಗೆ ಇಷ್ಟು ಕಷ್ಟ ಕೊಡಬಾರದಾಗಿತ್ತು" ಎಂದಳು.

ತನ್ನ ಅಂತರಂಗವೆಲ್ಲಿ ಗೆಳತಿಗೆ ತಿಳಿದೀತೋ ಎಂದು ಭಾರತಿ ಬೆದರಿ,

"ಏನು!" ಎಂದಳು.

"ಪಾಪ! ಒಬ್ಬಳೇ....ಹೂಂ....ಮತ್ತೆ ಗಂಡನನ್ನಗಲಿ ಇರಬೇಕಾಗಿದೆ. ಎಷ್ಟು ಕಷ್ಟವೋ...."

ಭಾರತಿ ತೋರಿಕೆಯ ನಗು ಬೀರಿ "ಕಷ್ಟವೇನಿಲ್ಲ." ಎಂದಳು.

"ಹೌದು. ಮುಖ ನೋಡಿದರೇ ಗೊತ್ತಾಗುತ್ತದೆ. ವಿರಹಾಗ್ನಿಯಿಂದ ಉರಿದು, ಕಣ್ಣೀರ ಕೋಡಿ ಕರೆದು "

"ನಿನ್ನ ದಮ್ಮಯ್ಯ ನಿಲ್ಲಿಸು ತಾಯಿ. ವಿರಹವೂ ಇಲ್ಲ, ಅಗ್ನಿ ಮೊದಲೇ ಇಲ್ಲ."

"ಹಾಗಾದರೆ ನೀನೇಕೆ ತುಂಬಾ ಬಡವಾಗಿದೀಯ."

"ಇಲ್ಲವಲ್ಲ. ಇಲ್ಲದ್ದು ಹೇಳುವುದರಲ್ಲಿ ನೀನು ಪ್ರವೀಣೆ."

ಒಂದು ಗಂಟೆಯ ಹೊತ್ತಿಗೆ ಗೆಳತಿಯರ ಶೃಂಗಾರ ಮೊದಲಾಯಿತು.

"ಭಾರತಿ, ಹೆರಳು ಹಾಕಿಕೊಳ್ಳೆ." ಗೀತಾ ಬಲವಂತಪಡಿಸಿದಳು.

"ಬೇಡಮ್ಮ"

"ಹೌದು. ಶೃಂಗಾರ ಮಾಡಿಕೊಂಡರೆ ನೋಡಿ ಮೆಚ್ಚಿ ಬಹುಮಾನ ಕೊಡುವವರು ಇಲ್ಲಾಂತ ವ್ಯಥೆಯಲ್ಲವೇ?"

ಗೆಳತಿಯ ಬಲವಂತಕ್ಕೆ ಭಾರತಿ ಹೆರಳು ಹಾಕಿಸಿಕೊಳ್ಳಲು ಒಪ್ಪಿದಳು. ಗೀತಾ ಕೂದಲಿನ ರಾಶಿಯಲ್ಲಿ 'ಬನ್' ಹುದುಗಿಸಿ, ಬೆನ್ನಿನ ಮೇಲೆ ಚಕ್ರಾ

ಕಾರದಲ್ಲಿ ಹೆರಳು ಹಾಕಿದಳು

"ಈ ಚೀಟಿ ಸೀರೆ ಸಾಕಲ್ಲವೇ ?"

ಗೀತಾ ಸಲಿಗೆಯಿಂದ ಗೆಳತಿಯ ಹಟವನ್ನು ಮೂಲೆಗೊತ್ತಿ, ಅವಳ ಪೆಟ್ಟಿಗೆ ತೆಗೆಸಿ, ಪೆಟ್ಟಿಗೆಯನ್ನೆಲ್ಲಾ ಗೂರಾಡಿ, ಕಪ್ಪುಬಣ್ಣದ ಜಾರ್ಜೆಟ್ ಸೀರೆ, ಅದಕ್ಕೊಪ್ಪುವ ಕಪ್ಪುಬಣ್ಣದ ಚೋಲಿ ಹೊರಗೆ ತೆಗೆದು ಭಾರತಿಯ ಮೇಲೆ ಎಸೆದು

"ಉಟ್ಟುಕೋ ಮಗು. ಸದ್ಯಕ್ಕೆ ನಾನೇ ನಿನ್ನ ಆನಂದ" ಎಂದಳು.

"ಬೇಡಾ ಗೀತಾ."

"ನೀನು ಉಟ್ಟುಕೊಳ್ಳುತ್ತೀಯೋ, ಇಲ್ಲಾ ನಾನೇ ಬಂದು ಉಡಿಸಲೋ...."

ಗೀತಳ ಒತ್ತಾಯಕ್ಕೆ ಕಟ್ಟುಬಿದ್ದು, ಭಾರತಿ ಅವಳು ಕೊಟ್ಟ ಸೀರೆ ಉಟ್ಟುಕೊಂಡಳು.

"ಕಪ್ಪು, ಸ್ನೋ, ಪೌಡರ್...."

"ಬೇಡವೇ ಗೀತಾ."

"ಹೆಚ್ಚು ಮಾತಾಡಬೇಡ. ಸದ್ಯಕ್ಕೆ ನಾನೇ ನಿನ್ನ ಆನಂದ". ಗೀತ ಪೆಟ್ಟಿಗೆಯಿಂದ ಒಂದೊಂದಾಗಿ ಸಾಮಾನುಗಳನ್ನು ಎತ್ತಿ ಭಾರತಿಯ ಕೈಗೆ ಕೊಟ್ಟಳು. ಭಾರತಿಯ ಅಲಂಕಾರ ಪೂರ್ತಿಯಾದ ಮೇಲೆ ಗೀತಾ ಅವಳ ಬೆರಳುಗಳಿಗೆ ಮುತ್ತಿಟ್ಟು 'ಭಾರತೀ, ನಾನೇನಾದರೂ ಗಂಡಾಗಿದ್ದರೆ.... ಈಗೇಕೆ ಆ ಮಾತು ಕೆಳಗೆ ಹೋಗೋಣ' ಎಂದಳು. ಅವರು ಮಹಡಿಯ ಮೆಟ್ಟಿಲಿಳಿಯುತ್ತಿದ್ದಂತೆಯೇ ಚಂದು ಭಾರತಿಯನ್ನು ನೋಡಿದ. ಮುಂಜಾನೆಯಲ್ಲಿ ಮಂಜಿನಿಂದ ತೊಳೆದ ಬಿಳಿ ಗುಲಾಬಿಯಂತಿದ್ದಳು ಭಾರತಿ. ಗೀತಾ ಭಾರತಿಯನ್ನು ವೇದಮ್ಮನವರು ಮಲಗಿದ್ದ ಕೊಠಡಿಗೆ ಕರೆದುಕೊಂಡು ಹೋಗಿ,

"ನೋಡ್ರಿ, ನನ್ನ ಸ್ನೇಹಿತೆ ಹೇಗಿದಾಳೆ" ಎಂದಳು.

"ಹೀಗೆ ಅಲಂಕಾರ ಮಾಡಿಕೊಂಡು ತುಂಬಾ ದಿನವಾಯಿತಮ್ಮ. ಆನಂದ ಹೋದಾಗಿನಿಂದ ಊಟ, ತಿಂಡಿ, ನಿದ್ದೆ, ಅಲಂಕಾರ ಯಾವುದೂ ಅವಳಿಗೆ ಬೇಡವಾಗಿದೆ. ಈಗ ಅವಳ ಸ್ಥಿತಿ ನೋಡಿ ಅವಳಿಗಿಂತಲೂ ನನಗೆ ಹೆಚ್ಚು ಯೋಚನೆಯಾಗಿದೆ" ಎಂದರು ವೇದಮ್ಮ.

ಭಾರತಿ ಸ್ಟೋವ್ ಹಚ್ಚಿಸಿ ಕಾಫಿ ಮಾಡಿ ಎಲ್ಲರಿಗೂ ಕೊಟ್ಟು ಅತ್ತೆಯ ಅಪ್ಪಣೆ ಪಡೆದು ಗೆಳತಿಯೊಡನೆ 'ಭಾರತ್' ಟಾಕೀಸಿಗೆ ಹೊರಟಳು.

ಚಿತ್ರ ಸ್ವಲ್ಪ ದೊಡ್ಡದಾದುದರಿಂದ ಬೇಗ ಪ್ರಾರಂಭವಾಯಿ. ಪ್ರಣಯ ಚಿತ್ರ ಭಾರತಿಯ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂ ಮಾಡಿತು. ನಾಯಕ, ನಾಯಕಿಯ ಪ್ರಣಯ ದೃಶ್ಯಗಳು ಭಾರತಿಯ ಬಯಕೆ ಗಳನ್ನು ಕೆರಳಿಸಿ, ಉದ್ರೇಕಗೊಳಿಸಿದವು. ಪ್ರಣಯ ಪ್ರಸಂಗಗಳು ಮದ ವೇರಿದ್ದ ಮನಸ್ಸಿಗೆ ಮದ್ಯ ಕುಡಿಸಿದವು

ಚಿತ್ರ ಪೂರ್ತಿಯಾಗುವಷ್ಟರಲ್ಲಿ ಭಾರತಿಗೆ ಜ್ವರ ಬಂದಂತಾಗಿತ್ತು. ಗೀತಳನ್ನು ಅವಳ ಮನೆಗೆ ತಲುಪಿಸಿ ಭಾರತಿ ಮನೆಗೆ ಬಂದಾಗ ಏಳು ಗಂಟೆಯ ಸಮಯವಾಗಿತ್ತು. ರಂಗಣ್ಣನವರು ಎಂದಿನಂತೆ ಸಂಜೆ ತಿರು ಗಾಡಲಿಕ್ಕೆ ಹೋಗಿದ್ದರು. ಭಾರತಿ ಸೀರೆ ಬದಲಿಸದೆ ಒಲೆ ಹೊತ್ತಿಸಿ ಅನ್ನ ಕ್ಕಿಟ್ಟು ಮಹಡಿಯ ಮೇಲೆ ಹೋದಳು.

ತಲೆಯ ನರ ಸಿಡಿದುಹೋಗುತ್ತಿತ್ತು. ಹೃದಯದ ಬಡಿತ ಅವಳಿಗೇ ಕೇಳಿಸುವಂತಿತ್ತು. ದೇಹ, ಮನಸ್ಸು ಜ್ವಾಲೆಯಲ್ಲಿ ಉರಿಯುತ್ತಿತ್ತು. ಭಾರತಿ ಮೆಟ್ಟಲಿಳಿದು ಮನೆಯ ಹಿಂಬಾಗದಲ್ಲಿದ್ದ ನಲ್ಲಿಯ ಹತ್ತಿರ ಬಂದಳು. ನಲ್ಲಿ ಯನ್ನು ತಿರುಗಿಸಿ ಬೊಗಸೆಯಲ್ಲಿ ನೀರು ಹಿಡಿದು ನೆತ್ತಿಯಮೇಲೆ ಹಾಕಿ ಕೊಂಡಳು.

ಹಿಂದೆ ಹೆಜ್ಜೆಯ ಸದ್ದಾಯಿತು. ಭಾರತಿ ಬೆಚ್ಚಿ ಹಿಂದಿರುಗಿ ನೋಡಿ ದಳು. ಚಂದು ವ್ಯಂಗ್ಯವಾಗಿ ನಗುತ್ತಾ ನಿಂತಿದ್ದ. ಅವನ ನಗು ಅವಳ ಸುಪ್ತ ಬಯಕೆಯನ್ನು ಪ್ರಚೋದಿಸಿತು.

"ತಲೆಯಮೇಲೆ ತಣ್ಣೀರು ಸುರಿದುಕೊಂಡರೆ ನೆಗಡಿಯಾಗುವು ದಿಲ್ಲವೇ ?"

ಭಾರತಿ ತನ್ನ ಬೊಗಸೆಯಲ್ಲಿದ್ದ ನೀರನ್ನು ಅವನ ಮುಖಕ್ಕೆ ಎರಚಿ "ನನಗೆ ಏನಾದರೆ ನಿಮಗೇನು? ನೀವು ನನ್ನ ಶತ್ರು. ನಾನು ನಿಮ್ಮನ್ನು ದ್ವೇಷಿಸುತ್ತೇನೆ" ಎಂದಳು. ಚಂದುವಿನ ಮುಖದ ಮೇಲಿನ ನಗೆ ಅಳಿಸ ಲಿಲ್ಲ. ಅವನು ನಗುತ್ತಲೇ ಜೇಬಿನಿಂದ ಕರಚೀಫ್ ತೆಗೆದು ಮುಖ, ತಲೆ ಯನ್ನು ಒರೆಸಿಕೊಂಡು ಪುನಃ ಅದನ್ನು ಜೇಬಿನಲ್ಲಿರಿಸಿದ. ಭಾರತಿ ಅವನ ಕಡೆ ತಿರುಗದೇ ಮತ್ತೊಂದು ಬಾರಿ ನೀರು ತಲೆಯ ಮೇಲೆ ಹಾಕಿಕೊಂಡಳು. ಚಂದು ಅವಳ ಹತ್ತಿರ ನಿಂತು,

"ದಯವಿಟ್ಟು ಹಾಗೆ ನೀರು ಹಾಕಿಕೊಳ್ಳಬೇಡಿ" ಎಂದ.

ಅವನು ಹತ್ತಿರ ಬಂದಂತೆ ಭಾರತಿಯ ಸ್ಥೈರ್ಯ ನಿಗ್ರಹ ದೂರ ವಾಯಿತು. ತಿರುಳಿಲ್ಲದ ಕೆಚ್ಚಿನಿಂದ 'ಅಂದಿನ ಪೆಟ್ಟು ಮರೆತು ಹೋಯಿ

ಎಂದಳು.

"ಮನೆತಿಲ್ಲ ಭಾರತಿ. ಆ ಪೆಟ್ಟಿನ ಸವಿ ನನಗೆ ಇನ್ನೊಂದು ಸಲ ಬೇಕಾಗಿದೆ" ಎನ್ನುತ್ತಾ ಚಂದು ನೀರು ತುಂಬಿದ್ದ ಅವಳ ಬಲಗೈಯನ್ನು ತನ್ನ ಕೈಲಿ ಬಿಗಿಯಾಗಿ ಹಿಡಿದುಕೊಂಡ.

"ಕೈ ಬಿಡಿ. ಇಲ್ಲದಿದ್ದರೆ ಕೂಗುತ್ತೇನೆ. ಬಿಟ್ಟುಬಿಡಿ " ಭಾರತಿ ಎಳೆದಾಡಿದಳೇ ಹೊರತು ಕೂಗಲಿಲ್ಲ. ಅವಳು ಕೂಗುವುದಿಲ್ಲವೆಂಬುದು ಚಂದುವಿಗೂ ತಿ-ದಿತ್ತು.

"ನನ್ನ ಮೇಲೆ ನಿಮಗೆ ಕನಿಕರವಿಲ್ಲವೇ? ನನ್ನನ್ನು ಕಾಡಬೇಡಿ" ಎಂದು ಹೇಳುತ್ತಾ ಭಾರತಿಯ ದನಿ ಕುಗ್ಗಿ ಕೊನೆಗೆ ಗಂಟಲಿನಿಂದ ಸದ್ದೇ ಹೊರಡಲಿಲ್ಲ. ಭಾರತಿ ಕೊನೆಯ ಬಾರಿ ಎರಡು ಕೈಗಳಿಂದಲೂ ಅವನೆದೆ ಹಿಡಿದು ದೂರ ತಳ್ಳಿದಳು. ಆದರೆ ಚಂದು ಒಂದು ಅಂಗುಲವೂ ಕದಲ ಲಿಲ್ಲ. ಅವಳು ಅವನನ್ನು ಪ್ರತಿಭಟಿಸುತ್ತಿದ್ದಂತೆ ಚಂದು ಶಾಂತವಾದ ದನಿಯಲ್ಲಿ

"ವ್ಯರ್ಥವಾಗಿ ನನ್ನನ್ನೇಕೆ ಎದುರಿಸುವೆ ಭಾರತಿ? ನಾನು ನಿನ್ನನ್ನು ಬಯಸುತ್ತಿರುವಂತೆಯೇ ನೀನೂ ನನ್ನನ್ನು ಬಯಸುತ್ತಿರುವೆ. ಇದ ರಲ್ಲಿ ತಪ್ಪಾದರೂ ಏನು? ನಿಸರ್ಗದೊಡನೆ ನಾವು ಕಾದಾಡಲು ಸಾಧ್ಯವೇ?" ಎನ್ನುತ್ತಾ ಅವಳೆರಡು ಕೈಗಳನ್ನೂ ತನ್ನ ಒಂದು ಕೈಯ್ಯಲ್ಲಿ ಹಿಡಿದು, ತಲೆ ತಗ್ಗಿಸಿ ವಿಹ್ವಲಳಾಗಿ, ನಿಸ್ಸಹಾಯಕಳಾಗಿ, ಕಣ್ಣಿನ ತುಂಬ ನೀರು ತುಂಬಿ ಕೊಂಡು ನಿಂತಿದ್ದ ಭಾರತಿಯ ಗಲ್ಲವನ್ನು ಹಿಡಿದೆತ್ತಿ ಅವಳ ಮುಖ ನೋಡಿದ. ಬೇಟೆಗಾರನ ಬಲೆಯೊಳಗೆ ಸಿಕ್ಕಿ ಬಿದ್ದು, ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೇ ತೆಪ್ಪಗೆ ಬಿದ್ದುಕೊಳ್ಳುವ ಪ್ರಾಣಿಯಂತೆ, ನಿಸರ್ಗದ ಬಲೆ ಯೊಳಗೆ ಬಿದ್ದ ಹೆಣ್ಣು ಮೌನವಾಗಿ ನಿಂತಳು.

"ಭಾರತಿ, ನಾನು ನಿನ್ನನ್ನು ಪ್ರೀತಿಸುತ್ತೇನೆ. ನಾನು ಪ್ರಪಂಚದಲ್ಲಿ ಪ್ರೀತಿಸುವ ಹೆಣ್ಣು ಒಂದು ಮಾತ್ರ. ನನ್ನ ಮನಸ್ಸು ನಿನಗೆ ಮೀಸಲು. ನಾನು ನಿನ್ನ ದೇಹ ಬಯಸುತ್ತಿರುವಂತೆ ನಿನ್ನ ಪ್ರೇಮವನ್ನೂ ಬಯಸುತ್ತಿ-ದ್ದೇನೆ." ಚಂದು ಅಂಗಲಾಚುವ ದನಿಯಲ್ಲಿ ಹೇಳಿದ.

"ಪ್ರೇಮ" ಎಂಬ ನುಡಿ ಅವಳನ್ನು ಹೊಡೆದೆಬ್ಬಿಸಿ, ಆನಂದನ ನೆನ ಪನ್ನು ತಂದಿತು.

"ನಾನು ನಿಮ್ಮನ್ನು ಪ್ರೀತಿಸಲಾರೆ. ನನ್ನ ಪ್ರೀತಿ, ಹೃದಯ ಅವರದು. ಆದರೆ......ಆದರೆ...."

"ಆದರೇನು ?"

"ನೀವು ನನ್ನ ಶತ್ರು. ನನ್ನ ಜೀವನ ಹಾಳುಮಾಡಲು ಬಂದಿರುವಿರಿ. ನಾನು ನಿಮ್ಮನ್ನು ಎಷ್ಟು ದ್ವೇಷಿಸುತ್ತೇನೆಂಬುದನ್ನು ಹೇಳಲಾರೆ. ಮನೋ ದೌರ್ಬಲ್ಯದಿಂದ ಕೂಡಿರುವ ನನ್ನನ್ನು ಹೆಜ್ಜೆ ಹೆಜ್ಜೆಗೂ ಕೆರಳಿಸಿರುವ ನಿಮ್ಮ ದೇಹವನ್ನು ನಾನೆಷ್ಟು ಬಯಸುತ್ತೇನೋ ಅದಕ್ಕಿಂತಲೂ ಹೆಚ್ಚಾಗಿ ದ್ವೇಷಿ ಸುತ್ತೇನೆ. ಅವರು ಇಲ್ಲಿದ್ದಿದ್ದರೆ ಹೀಗೇಕೆ ಆಗುತ್ತಿತ್ತು. ಅವರು .." ಭಾರತಿ ಗದ್ಗದಿಸಿದಳು. ಕಂಬನಿ ಕಣ್ಣಿನಿಂದ ಜಾರಿ ಕೆನ್ನೆಯ ಮೇಲುರುಳಿತು. ಭಾರತಿಗೆ ತನ್ನ ಪತಿಯ ನೆನಪು ಬರುವ ಅವಕಾಶ ಕೊಡಬಾರದೆಂದು ಚಂದು ತಕ್ಷಣ ತಿಳಿದ. ಕಾಮೋದ್ವೇಗದಿಂದ ತೋಳ ಸೆರೆಯೊಳಗೆ ಬಂದಿರುವ ಕಾಮಿನಿಯ ಎದೆಯಲ್ಲಿ ಪ್ರೇಮ ಸಂಚಾರವಾದರೆ ತನ್ನ ಬಯಕೆ ನೆರವೇರುವುದಿಲ್ಲವೆಂದರಿತು, ಅವನು ಭಾರತಿಯ ಮುಖ ಹಿಡಿದೆತ್ತಿ ಮುದ್ದಿಸಿದ ಕೂಡಲೇ ಆನಂದ, ಪ್ರೇಮ, ತಾಯಿ, ತಂದೆ, ಸಮಾಜ, ಜಗತ್ತು ಪ್ರತಿ ಯೊಂದೂ ಅವಳ ಮನಸ್ಸಿನಿಂದ ದೂರವಾದುವು. ಚಂದುವಿನ ತೋಳ ಬಿಗಿತದ ಹೊರತು ಮತ್ತಾವುದರ ಪರಿವೆಯೂ ಅವಳಿಗಿರಲಿಲ್ಲ. ಅವಳಿಗೆ ಎಚ್ಚರವಾದಾಗ ಅವಳ ಕೈ ಅವನ ಕೊರಳನ್ನು ಹಾವಿನಂತೆ ಬಳಸಿತ್ತು. ಅವಳ ತಲೆಯ ಮೇಲೆ ಕೆನ್ನೆಯೊರಗಿಸಿ "ಈ ಬಾರಿ ಏಟು ಬೀಳುವುದೆಂದು ನಿರೀಕ್ಷಿಸಿದ್ದೆ. ಯಾಕೆ ಮಾತನಾಡುವುದಿಲ್ಲ............" ಎನ್ನುತ್ತಿರುವಾಗಲೇ ಬಿಸಿ ಹನಿಯೊಂದು ಅವನ ಕೈಮೇಲುರುಳಿತು.

"ನನ್ನ ಮಾತಿನಿಂದ ನೋವಾಯಿತೇ? ನೀನು ಅತ್ತರೆ ನನಗೂ ನೋವಾಗುತ್ತದೆ"

"ನನ್ನ ದುರ್ಬಲತೆಗಾಗಿ ಅಳುತ್ತಿದ್ದೇನೆ"

ಚಂದುವಿನ ಮುಖದಲ್ಲಿ ವಿಷಾದದ ಛಾಯೆ ಮೂಡಿ ಮರೆಯಾಯಿತು.

"ಕಾಮ ಪ್ರೇಮದ ಮೊದಲ ಮೆಟ್ಟಲಾದರೂ ಆಗಬಹುದಲ್ಲವೇ? ಒಂದಲ್ಲ ಒಂದು ದಿನ ನೀನು ನನ್ನನ್ನು ಪ್ರೀತಿಸಬಹುದಲ್ಲವೇ ?"

"ಅದು ಎಂದೆಂದಿಗೂ ಸಾಧ್ಯವಿಲ್ಲ"

ಪುರುಷನ ಸಾನ್ನಿಧ್ಯದಲ್ಲಿ ಬಹಳ ದಿನಗಳಿಂದಲೂ ಅದುಮಿದ ಆಸೆ, ಬಯಕೆಯನ್ನು ಭಾರತಿ ಆ ದಿನ ಮೆಟ್ಟಲಾರದೇ ಹೋದಳು. ನಿಸರ್ಗದ ಕರೆಗೆ 'ಓ' ಕೊಟ್ಟು ತಾನು ಪ್ರೇಮಿಸಿದಾತನಿಗೆ ತನ್ನನ್ನು ಒಪ್ಪಿಸಿ ಕೊಂಡಳು. ಅವನ ಮಾತಿನ ಮೋಡಿಗೆ, ಪ್ರೀತಿಯ ನುಡಿಗೆ ಭಾರತಿ ಮರುಳಾದಳು.

ಅವನ ತೋಳಿನಿಂದ ಹೊರಬಿದ್ದು ದೂರ ಹೋದಂತೆ ಮೋಹ ಮರೆಯಾಗಿ ವಿವೇಕ ಕಣ್ದೆರೆಯಿತು. 'ಇದೇನು ಮಾಡಿಬಿಟ್ಟೆ' ಎಂದು ಭಾರತಿ ಚಕಿತಳಾದಳು. ಆ ರಾತ್ರಿ ಹಿರಿಯರಿಗೆ ಮಾಡಿದ ಅಡಿಗೆ ಬಡಿಸಿ, ಕೆಲಸ ಮುಗಿಯುವವರೆಗೆ ದುಃಖ ಹೃದಯದಲ್ಲಿಯೇ ಹೆಪ್ಪುಗಟ್ಟಿತು. ಮಹಡಿಯಮೇಲೆ ಹೋಗಿ ರೂಮಿನ ಬಾಗಿಲು ಹಾಕಿಕೊಂಡ ಕೂಡಲೇ ಕಂಬನಿಯ ಕೋಡಿ ಹರಿಯತೊಡಗಿತು.

ಕೈ ಹಿಡಿದ ಗಂಡನಿಗೆ ಎರಡು ಬಗೆದ ಮನಸ್ಸು ಅವಳನ್ನು ಕುಕ್ಕಿ ಹಿಂಸಿಸಿತು.

"ಕ್ಷಣಿಕ ಸುಖಕ್ಕಾಗಿ ಕಾಲು ಜಾರಿದುದು ತಪ್ಪು" ಎಂದು ಒಂದು ಮನಸ್ಸು ನುಡಿದರೆ ಮತ್ತೊಂದು ಮನಸ್ಸು 'ಖಂಡಿತ ತಪ್ಪಿಲ್ಲ. ನಿಸರ್ಗದ ಬಲೆಗೆ ಬಿದ್ದ ನೀನು ಮತ್ತೇನು ಮಾಡಲೂ ಸಾಧ್ಯವಿರಲಿಲ್ಲ' ಎಂದು ಸಮಾಧಾನಪಡಿಸುತ್ತಿತ್ತು. ಎರಡು ಮನಸ್ಸಿನ ಇಕ್ಕಳದೊಳಗೆ ಸಿಕ್ಕಿ ಅವಳ ಆತ್ಮ ನೀರಿನಿಂದ ಹೊರಗೆ ತೆಗೆದ ಮೀನಿನಂತೆ ಒದ್ದಾಡಿತು.

## ೧೭

ಭಾರತಿ ಬೆಳಕು ಹರಿಯುವುದನ್ನೇ ನಿರೀಕ್ಷಿಸುತ್ತಿದ್ದಳು. ಪೂರ್ವ ದಿಕ್ಕಿನಲ್ಲಿ ನಸುಬೆಳಕಿನ ಛಾಯೆ ಕಂಡಕೂಡಲೇ ಹೊದಿಕೆ ಎಸೆದು ಕೆಳಗೆ ಬಂದಳು. ನೀರು ಕಾಯಿಸಿ ಮಡಿಯುಟ್ಟಳು. ಕಾಂಪೌಂಡಿನಲ್ಲಿದ್ದ ಹೂವುಗಳನ್ನು ಕೀಳಲು ದೇವರ ಮನೆಯಲ್ಲಿದ್ದ ಹೂವಿನ ಬುಟ್ಟಿ ತೆಗೆದುಕೊಳ್ಳಲು ಅಭ್ಯಾಸದಿಂದ ಮುಂದುವರಿದಳು. ಆದರೆ ದೇವರ ಮನೆಯ ಹೊಸಲಿನಾಚೆ ಗರ ಹೊಡೆದವಳಂತೆ ಭಾರತಿ ತಟ್ಟನೆ ನಿಂತುಬಿಟ್ಟಳು. ಪವಿತ್ರವಾದ ಸ್ಥಳಕ್ಕೆ ಪತಿತೆಯಾದ ತಾನು ಹೋಗಬಹುದೇ? ಏಕೋ ಅವಳ ಮನಸ್ಸು ಅಧೀರವಾಗಿ ಅಳುಕಿ ಹಿಂಜರಿಯಿತು. 'ನನ್ನ ಪಾಪದ ಫಲವನ್ನು ನಾನೇ ಅನುಭವಿಸುವಂತಾಗಲಿ. ಅವರು ಸುರಕ್ಷಿತವಾಗಿರಲಿ' ಎಂದು ಪ್ರಾರ್ಥಿಸಿ ದೇವರ ಮನೆಯೊಳಗೆ ಕಾಲಿಟ್ಟಳು.

ವೇದಮ್ಮನಿಗೆ ಕಾಫಿ ತೆಗೆದುಕೊಂಡು ಹೋಗಿ ಕೊಡುವಾಗ ಭಾರತಿಯ ಕೈ ಗಡಗಡನೆ ನಡುಗುತ್ತಿತ್ತು. ವೇದಮ್ಮ ಅದನ್ನು ಗಮನಿಸಿ ನಕ್ಕು,

"ಏನೇ ಭಾರತಿ, ಆಗಲೇ ಮುದುಕಿಯಾಗಿ ಹೋಗಿದೀಯಾ. ಕೈ

ಏಕೆ ನಡುಗುತ್ತಿದೆ" ಎಂದರು. ತನ್ನ ಗುಟ್ಟನ್ನು ಅವರೇನಾದರೂ ಅರಿತರೋ ಎಂಬ ಭೀತಿಯಿಂದ ಭಾರತಿ ಕಳ್ಳನೋಟ ಬೀರಿ ಅವರ ಮುಖವನ್ನು ಪರೀಕ್ಷಿಸಿದಳು. ಆದರೆ ವೇದಮ್ಮ ಕಾಫಿ ಕುಡಿಯುವುದರಲ್ಲಿ ಮಗ್ನರಾಗಿದ್ದರು.

ಗಾಳಿ ಜೋರಾಗಿ ಬೀಸಿದರೆ, ಕಿಟಕಿ, ಬಾಗಿಲುಗಳು ಗಾಳಿಯ ರಭಸಕ್ಕೆ ಸದ್ದು ಮಾಡಿದರೆ ಭಾರತಿ ಬೆಚ್ಚಿ ಸುತ್ತಲೂ ನೋಡುತ್ತಿದ್ದಳು. ಹಿರಿಯರೆದುರಿಗೆ ಚಂದುವಿನ ಕಡೆ ನೋಡುವುದಿರಲಿ, ನಿಲ್ಲುವ ಧೈರ್ಯವೂ ಅವಳಲ್ಲಿರಲಿಲ್ಲ.

ಸಂಜೆಯಾಗುತ್ತಾ ಆಕಾಶದಲ್ಲಿ ಮೋಡಗಳು ಸೇರತೊಡಗಿದವು. ಮೋಡ ದಟ್ಟವಾಗಿ ಕವಿದುದರಿಂದ ಆರು ಗಂಟೆಗೇ ಕತ್ತಲಾಯಿತು. ಸುಮಾರು ಏಳು ಗಂಟೆಯ ಹೊತ್ತಿಗೆ ಮಿಂಚು, ಗುಡುಗಿನ ಆರ್ಭಟ, ಮೊದಲಾಯಿತು ದಪ್ಪಹನಿಯೊಡನೆ ಆರಂಭವಾದ ಮಳೆ ಧಾರಾಕಾರವಾಗಿ ಸುರಿಯಲಾರಂಭಿಸಿತು. ರಂಗಣ್ಣ, ಚಂದು ಊಟ ಮಾಡುತ್ತಿದ್ದಾಗಲೇ ದೀಪಗಳೆಲ್ಲವೂ ತಟ್ಟನೆ ಆರಿಹೋದವು. ಭಾರತಿ ಕತ್ತಲೆಯಲ್ಲಿ ಎಡವುತ್ತಾ ಲಾಂದ್ರ ಹುಡುಕಿ ದೀಪ ಹತ್ತಿಸಿ ತಂದಳು. ಅವರ ಊಟವಾಗುತ್ತಲೇ ಭಾರತಿ ವೇದಮ್ಮನವರ ರೂಮಿಗೆ ಊಟ ತೆಗೆದುಕೊಂಡು ಹೋಗಿ ಬಡಿಸಿದಳು. ಬಿಳಿಯ ಸೀರೆ, ಬಿಳಿಯ ರವಿಕೆ ಧರಿಸಿ ಲಾಂದ್ರ ಹಿಡಿದು ಓಡಾಡುತ್ತಿದ್ದ ಭಾರತಿಯನ್ನು ನೋಡಿ ಚಂದುವಿಗೆ 'ಮೋಹಿನಿ'ಯ ನೆನಪಾಯಿತು. ತನ್ನ ಊಟವನ್ನೂ ಮುಗಿಸಿ ಚಿಮಣಿಯ ಬೆಳಕಿನಲ್ಲಿ ತಟ್ಟೆ ತೊಳೆಯುತ್ತಿದ್ದಂತೆ, ಹಿಂದಿನಿಂದ ಎರಡು ಕೈಗಳು ಅವಳ ಕೊರಳನ್ನು ಬಳಸಿದವು.

"ಓಹ್" ಭಾರತಿ ಬೆಚ್ಚಿದಳು.

"ನಾನು."

"ಅಬ್ಬ! ಎಷ್ಟು ಸಲಿಗೆ, ಸ್ವತಂತ್ರ!" ಆದರೆ ಆ ಸಲಿಗೆ ಕೊಟ್ಟವರು ಯಾರು? ತಾನೇ ಅಲ್ಲವೇ? ಗಂಟಿಕ್ಕಿದ ಮೋರೆಯಿಂದ ಚಂದುವಿನ ಕೈ ಕಿತ್ತೆಸೆದಳು.

"ನೀನು ಕೋಪಿಸಿಕೊಂಡರೆ ನಾನೆಲ್ಲಿಗೆ ಹೋಗಲಿ. ಈ ಮಸು ಬೆಳಕಿನಲ್ಲಿ, ಈ ಬಿಳಿ ಉಡುಗೆಯಲ್ಲಿ ನೀನು ಮೋಹಿನಿಯಂತೆ...."

"ಓ, ಸಾಕು ನಿಲ್ಲಿಸಿ."

"ನಾನು ಸ್ವಲ್ಪ ಸಹಾಯ ಮಾಡಬೇ?"

"ನೀವು ಇಲ್ಲಿಂದ ಹೊರಟುಹೋದರೆ ಅದೇ ದೊಡ್ಡ ಸಹಾಯ..." ಅವಳ ಮಾತು ಮುಗಿಯುವುದಕ್ಕೆ ಮುಂಚೆಯೇ ಚಂದು ಹೊರಟು ಹೋದ.

ಅವನು ಅಷ್ಟು ಬೇಗ ಹೊರಟುಹೋದುದನ್ನು ಕಂಡು ಭಾರತಿಗೆ ಆಶ್ಚರ್ಯ ವಾಯಿತು.

ತನ್ನ ಕೆಲಸಗಳನ್ನೆಲ್ಲಾ ಮುಗಿಸಿ ಒಂದು ಕೈಲಿ ಲಾಂದ್ರಹಿಡಿದು ಭಾರತಿ ಮಹಡಿ ಹತ್ತತೊಡಗಿದಳು. ರೂಮಿನ ಬಾಗಿಲು ಬಳಿ ಲಾಂದ್ರ ಇರಿಸಿ ಮೊಳಕಾಲೂರಿ ಕುಳಿತು ಬತ್ತಿ ಸಣ್ಣದು ಮಾಡಿದಳು. ಗೋಡೆಯ ಮೇಲೆ ಭೂತದಾಕಾರದ ನೆರಳು ಬಿತ್ತು. ಚಂದು ದೀಪದ ಇನ್ನೊಂದು ಪಕ್ಕದಲ್ಲಿ ಬಂದುನಿಂತ. ಅವನು ಬಂದುದು ಅವಳಿಗೆ ಆಶ್ಚರ್ಯವನ್ನುಂಟು ಮಾಡಲಿಲ್ಲ. ಭಾರತಿ ಎದ್ದು ನಿಂತು ಅವನನ್ನು ಕಾಣದವಳಂತೆ ತನ್ನ ರೂಮಿಗೆ ಹೊರಟಳು. ಚಂದು ಅವಳಿಗೆ ಎದುರಾಗಿ ನಿಂತ.

"ನೀವು ಹೋಗಬಹುದು."

"......................."

ಶಾಂತವಾಗಿದ್ದ ಭಾರತಿಯ ಮುಖ ಭಾವೋದ್ವೇಗಗಳ ಸುಳಿಗೆ ಸಿಕ್ಕಿ ವಿಚಿತ್ರವಾಯಿತು.

"ನನ್ನನ್ನು ಹಾಳು ಮಾಡಬೇಡಿ....ದಯವಿಟ್ಟು ಹತ್ತಿರ ಬರಬೇಡಿ. ....ದಯೆತೋರಿ...." ಚಂದು ಅವಳ ಮಾತುಗಳನ್ನು ಲಕ್ಷಿಸದೆ ಸೊಂಟದ ಸುತ್ತ ಕೈಹಾಕಿ ಹತ್ತಿರಕ್ಕೆಳೆದುಕೊಂಡ. ಗಾರುಡಿಗನ ಮೋಡಿಗೆ ಸೆರೆ ಯಾದ ಸರ್ಪದಂತೆ, ಅವನ ಸ್ಪರ್ಶದೊಡನೆ ಭಾರತಿ ಎಲ್ಲವನ್ನೂ ಮರೆತಳು. ಅವನನ್ನು ದೂರ ತಳ್ಳಲೆಂದು ಮುಂದೆ ಬಂದ ಕೈ ಅವನ ಕೊರಳನ್ನು ಬಳಸಿತು.

"ಭಾರತಿ, ನಿನ್ನನ್ನು ಬಿಟ್ಟು ನಾನು ಬದುಕಲಾರೆ. ಮನೆ, ಮಠ, ಗಂಡ ಎಲ್ಲರನ್ನೂ ತೊರೆದು ನನ್ನೊಂದಿಗೆ ಬರುವೆಯಾ?"

ಭಾರತಿ ಅವನಿಂದ ಸಿಡಿದು ನಿಂತಳು.

"ಏನು."

"ಹೇಗಿದ್ದರೂ ನಾವು ಜಾರಿದ್ದೇವೆ. ನನ್ನೊಡನೆ ಬಂದು ಬಾಳನ್ನು ಬೆಳಗು. ನೀನಿಲ್ಲದೆ ನಾನು ಇರಲಾರೆ."

ತಮ್ಮಿಬ್ಬರ ಸಂಬಂಧ ಇಷ್ಟು ದೂರದವರೆವಿಗೆ ಹೋಗಬಹುದೆಂದು ಭಾರತಿ ಎಣಿಸಿರಲಿಲ್ಲ ದಾಂಪತ್ಯ ಜೀವನದಲ್ಲಿ ತೃಪ್ತಿಪಡೆಯದ ಎಳೆಯ ಪ್ರಾಯದ ಹೆಣ್ಣು, ನಿಮಿಷ ನಿಮಿಷಕ್ಕೂ ತನ್ನನ್ನು ನೋಟದಿಂದ, ಮಾತಿ ನಿಂದ, ಸಾನ್ನಿಧ್ಯದಿಂದ, ಸ್ಪರ್ಶದಿಂದ, ಕೆರಳಿಸಿ ಉದ್ರೇಕಗೊಳಿಸುತ್ತಿದ್ದ ಗಂಡಿನ ತೋಳಿನೊಳಗೆ ಬಿದ್ದಾಗ, ಆ ಗಂಡು ತನ್ನನ್ನು ಇಲ್ಲಿಯವರೆವಿಗೆ

ಎಳೆಯಬಹುದೆಂದು ಆಕೆ ನಿರೀಕ್ಷಿಸಿರಲಿಲ್ಲ. ವಿಷಗಳಿಗೆಯಲ್ಲಿ ದಾಹ ಮೆಟ್ಟ ಲಾರದೇ ಭಾರತಿ ಅವನಿಗೆ ಶರಣಾಗತಳಾಗಿದ್ದಳು. ತನ್ನ ದುರ್ಬಲತೆಗಾಗಿ ತನ್ನಾತ್ಮವನ್ನು ಪಶ್ಚಾತ್ತಾಪದ ಬೆಂಕಿಯಲ್ಲಿ ಬೇಯಿಸುತ್ತಿದ್ದಳು. ಇನ್ನೆಂದಿಗೂ ಅವನ ಮುಖ ನೋಡುವುದಿಲ್ಲವೆಂದು ನಿರ್ಧರಿಸಿದ್ದರೂ, ಆ ಮಳೆಯ ರಾತ್ರಿಯಲ್ಲಿ ತನ್ನ ಪ್ರತಿಭಟನೆಯನ್ನು ಅಲಕ್ಷಿಸಿ, ಚಂದು ಹತ್ತಿರಕ್ಕೆಳೆದು ಕೊಂಡಾಗ ಅವಳ ನಿರ್ಧಾರ ಹುಡಿಯಾಗಿ ಅವಳ ಕೈ ಅವಳರಿಯದಂತೆ ಅವನನ್ನಪ್ಪಿತ್ತು. ಅಂತಹ ಸಮಯದಲ್ಲಿಯೂ ಅವನ ಸೂಚನೆ ಕೇಳಿ, ಆ ಚಳಿಯಲ್ಲೂ ಭಾರತಿ ಬೆವತುಹೋದಳು.

"ಏನು! ನಿಮ್ಮೊಡನೆ!" ಅವಳ ಮಾತು ತಡೆದು ಬರುತ್ತಿತ್ತು.

"ಹೌದು. ಯಾಕಾಗಬಾರದು? ಇನ್ನೆಷ್ಟು ದಿನ ನಾವು ಈ ರೀತಿ ಕಳ್ಳತನದಲ್ಲಿ ಒಬ್ಬರನ್ನೊಬ್ಬರು ಸಂಧಿಸಲು ಸಾಧ್ಯ? ಈ ತೊಡಕಿನೊಳಗಿನಿಂದ ಪಾರಾಗಬೇಕಾದರೆ ಒಂದೇ ದಾರಿ. ನಾವಿಬ್ಬರೂ ಎಲ್ಲಿಯಾದರೂ ಹೋಗಿ ಸ್ವತಂತ್ರರಾಗಿರೋಣ. ಇನ್ನೊಬ್ಬರ ಹೆದರಿಕೆಯಿಲ್ಲದೆ ಬಾಳನ್ನು ಸಾಗಿಸೋಣ. ನನಗಾಗಿ, ನಿನಗಾಗಿ ಈ ಮಾತು ಹೇಳುತ್ತಿದ್ದೇನೆ ..."

"ಆದರೆ...."

"ಮಿಕ್ಕೆಲ್ಲ ವಿಚಾರ ಮರೆತುಬಿಡು. ನಿನ್ನನ್ನು ಕಣ್ಣು ತುಂಬಾ ನೋಡಲು ಸಹ ನನಗೆ ಹೆದರಿಕೆ. ಅಂಜಿಕೆಯಿಂದ ನಿನ್ನ ಬಳಿ ಬರಬೇಕಾಗಿದೆ. ಸುತ್ತಮುತ್ತ ನೋಡಿ ನನ್ನ ಹುಡುಗಿಯನ್ನು ಕಾಣಬೇಕಾಗಿದೆ. ಈ ಬಗೆಯ ಭೀತಿಮಯ ಜೀವನ ನನಗೆ ಒಗ್ಗದು. ನಿನ್ನನ್ನು ಬೇಡಿಕೊಳ್ಳುತ್ತೇನೆ. ನನ್ನೊಡನೆ ಬಂದುಬಿಡು. ನಾನು ನಿನ್ನನ್ನು ಪ್ರೀತಿಸುತ್ತೇನೆ........"

"ಆದರೆ ನಾನು ನಿಮ್ಮನ್ನು ಪ್ರೀತಿಸುವುದಿಲ್ಲ. ಅವರನ್ನು ಬಿಟ್ಟು...."

ಚಂದು ಅಂಗೈಯಿಂದವಳ ಬಾಯಿ ಮುಚ್ಚಿ "ನನ್ನ ಪ್ರೀತಿಯಿಂದ ನೀನೆಲ್ಲವನ್ನೂ ಮರೆಯುವಂತೆ ಮಾಡುತ್ತೇನೆ. ಆನಂದನನ್ನು ಸಹ...."

"ಅದು ಎಂದೆಂದಿಗೂ ಸಾಧ್ಯವಿಲ್ಲ."

"ಸಾಧ್ಯವಿದೆ ಭಾರತಿ. ನೀನಿಲ್ಲದೆ ನಾನಿರಲಾರೆ" ಎಂದು ಅಂಗಲಾಚುತ್ತಾ ಚಂದು ಅವಳ ಭುಜದ ಮೇಲೆ ತಲೆಯೊರಗಿಸಿ 'ನನ್ನ ಸುಖ, ದುಃಖ ನಿನ್ನ ಕೈಲಿದೆ' ಎಂದ.

ಭಾರತಿ ಶಿಲೆಯಂತೆ ನಿಂತಳು. ಮಳೆಯ ಹನಿಗಳು ಹೆಂಚಿನ ಮೇಲೆ ಸದ್ದು ಮಾಡುತ್ತಾ ಬೀಳುತ್ತಿದ್ದವು. ಮಿಂಚು ಆಗಾಗ್ಗೆ ಮಿಂಚಿ, ಕೊಠಡಿಯನ್ನೆಲ್ಲಾ ಬೆಳಗಿ ಮರೆಯಾಗುತ್ತಿತ್ತು. ತಣ್ಣನೆಯ ಗಾಳಿ ಬೀಸಿ ಭಾರತಿ

ಚಳಿಯಿಂದ ನಡುಗಿದಳು.

"ನನ್ನೊಡನೆ ಬರಲು ಒಪ್ಪಿದೆಯಾ ?"

"ಇಲ್ಲ"

"ಭಾರತೀ...."

"ಊಹೂ"

"ಸರಿಯಾಗಿ ಯೋಚನೆಮಾಡಿ ಹೇಳು. ನೀನು ನಿಜವಾಗಿಯೂ ಆನಂದನನ್ನು ಪ್ರೀತಿಸಿದ್ದರೆ ನನ್ನನ್ನು ಬಯಸುತ್ತಿದ್ದೆಯಾ? ಆತನನ್ನು ಪ್ರೀತಿಸಿಯೇ ನನ್ನನ್ನು ಬಯಸಿದೆ ಎಂದೇ ಊಹಿಸೋಣ. ನಿಜವಾಗಿಯೂ ನೀನು ಪ್ರೀತಿಸಿರುವ ಆನಂದನಿಗೆ ಪುನಃ ನಿನ್ನ ದೇಹವನ್ನೊಪ್ಪಿಸಲು ಮನಸ್ಸು ಬರುತ್ತದೆಯೇ? ಯಾರನ್ನು ನೀನು ದೇವರೆಂದು ಭಾವಿಸಿರುವೆಯೋ ಅವನಿಗೆ ನಿನ್ನ ಕಲಂಕದ ದೇಹ ಒಪ್ಪಿಸುವುದು ಸರಿಯೇ? ಈ ಬಗೆಯ ದ್ರೋಹವನ್ನು ನಿನ್ನ ಅಂತರಾತ್ಮ ಒಪ್ಪುವುದೇ?........"

ಅವನ ಚುಚ್ಚು ನುಡಿಗಳನ್ನು ಕೇಳಲಾರದೇ ಭಾರತಿ ಎರಡು ಕೈಗಳಿಂದಲೂ ಕಿವಿ ಮುಚ್ಚಿ ದೈನ್ಯದಿಂದ ನುಡಿದಳು.

"ಮುಂದೆ ಮಾತನಾಡಿ ನನ್ನನ್ನು ಕೊಲ್ಲಬೇಡಿ. ನಿಮ್ಮ ಮಾತುಗಳು ನನ್ನನ್ನು ಸುಡುತ್ತಿವೆ"

"ಸತ್ಯಕ್ಕೆ ಹೆದರಿ ಮುಖ ಮುಚ್ಚಿಕೊಳ್ಳುವುದು ಸರಿಯಲ್ಲ. ಸತ್ಯಕ್ಕೆ ಕಿವಿಕೊಡದಿದ್ದರೂ ಸತ್ಯ ಎಂದಿಗೂ ಸತ್ಯವೇ. ಇರುವ ವಿಷಯವನ್ನು ಧೈರ್ಯದಿಂದ ಎದುರಿಸಬೇಕು. ಈ ಬಗೆಯ ಎಂಜಲು ನೈವೇದ್ಯ, ಹುಳು ಕೊರೆದ ಹೂವು........"

"ನಿಮ್ಮ ಕಾಲಿಗೆ ಬೀಳುತ್ತೇನೆ. ಮುಂದೆ ಮಾತನಾಡಬೇಡಿ. ಯೋಚಿಸಲು ನನಗೆ ಅವಕಾಶಕೊಡಿ" ಭಾರತಿ ದೈನ್ಯದಿಂದ ಚಂದುವನ್ನು ಬೇಡಿಕೊಂಡಳು.

ಚಂದು ಮಾತು ನಿಲ್ಲಿಸಿ ಅವಳ ಮುಖವನ್ನೇ ನೋಡತೊಡಗಿದನು. ಭಾರತಿಯ ಮನಸ್ಸಿನಲ್ಲಿ ದೊಡ್ಡ ಆಂದೋಳನ ಮೊದಲಾಯಿತು. ಚಂದುವಿನ ನುಡಿಯಲ್ಲಿ ಸತ್ಯಾಂಶವಿದೆಯೆಂಬುದನ್ನು ಅವಳ ಮನಸ್ಸು ಒಪ್ಪಿತು. ಆನಂದನನ್ನಲ್ಲದೆ ಬೇರೆ ಯಾರನ್ನೂ ಅವಳು ಪ್ರೀತಿಸಿರಲಿಲ್ಲ. ಧಾರೆಯ ದಿನ ಅಂತಃಪಟ ಮರೆಯಾದಾಗ ಆ ಶುಭ ಮುಹೂರ್ತದಲ್ಲಿ ಹಿರಿಯರ ಆಶೀರ್ವಾದದೊಡನೆ ತನ್ನ ತನು, ಮನವನ್ನು ಆನಂದನಿಗೆ ಒಪ್ಪಿಸಿದ್ದಳು. ಆನಂದ ಇಂಗ್ಲೆಂಡಿಗೆ ಪ್ರಯಾಣ ಮಾಡಿದ ನಂತರ, ಅವಳ ಪ್ರೇಮ ಎಂದಿ

ನಂತೆ ಸ್ಥಿರವಾಗಿದ್ದರೂ, ಪ್ರಾಯದ ಏರುಯೌವನದ ಸಹಜ ಆಸೆಗಳಿಂದಾಗಿ ಅವಳ ದೇಹ ಕಲಂಕಿತವಾಯಿತು. ಅವೇ ದೇಹವನ್ನು ಪುನಃ ಗಂಡನಿಗೆ ಅರ್ಪಿಸುವುದು ಸರಿಯೇ? ಆನಂದ ಭಾರತಿಯನ್ನು ತನ್ನ ಹೆಂಡತಿ ಎಂದು ಮಾತ್ರ ಭಾವಿಸಿರಲಿಲ್ಲ. ಅವನ ಸರ್ವಸ್ವವೂ ಅವಳಾಗಿದ್ದಳು. ಹೆಣ್ಣಿನೊಡನೆ ಗಂಡಿಗಿರಬಹುದಾದ ಭಾವನೆ, ಸಂಬಂಧಗಳಿಗೆಲ್ಲಾ ಭಾರತಿ ಕೇಂದ್ರವಾಗಿದ್ದಳು. ಅವಳು ಮತ್ತು ವೇದವ್ಯಾಸಹೊರತು ಅವನಿಗೆ ಬೇರಾವ ಹೆಣ್ಣಿನ ಪರಿಚಯವೂ ಇರಲಿಲ್ಲ. ಆನಂದ ತನ್ನ ಪ್ರೇಮ, ಸ್ನೇಹ, ಭಕ್ತಿ, ಮಮತೆ, ಅಕ್ಕರೆಯನ್ನೆಲ್ಲಾ ಭಾರತಿಗೆ ಸೂರೆಗೊಟ್ಟಿದ್ದನು. ಯಾರು ತನ್ನನ್ನು, ಸರ್ವಸ್ವವೆಂದು ಭಾವಿಸಿದ್ದರೋ ಅಂತಹ ಮುಗ್ಧ ಪತಿಗೆ ತನ್ನ ಕಲಂಕಿತ ದೇಹವನ್ನು ನೀಡಿ 'ನಾನು ನಿಮ್ಮವಳೇ' ಎಂದು ಹೇಳಲು ಸಾಧ್ಯವೇ?

ಚಂದು ಅವಳ ಮುಖದಲ್ಲಾಗುತ್ತಿದ್ದ ಬದಲಾವಣೆಗಳನ್ನೇ ಗಮನಿಸುತ್ತಿದ್ದ. ಯಾರಿಗೆ ಮೋಸ ಮಾಡಿದರೂ ಆನಂದನಿಗೆ ಮೋಸ ಮಾಡುವುದು ಸಾಧ್ಯವಿರಲಿಲ್ಲ. ಚಂದುವನ್ನು ಅವಳು ಪ್ರೀತಿಸಿರಲಿಲ್ಲ. ಅವನೊಡನೆ ಹಾಳು ಮುಖ ಮರೆಸಿಕೊಂಡು ಹೋಗಿಬಿಡುವುದೇ ವಾಸಿ ಎನಿಸಿತು. ಆಮೇಲೆ ಆನಂದ ತನಗನುರೂಪಳಾದವಳನ್ನು ಮದುವೆಯಾಗಿ ಸುಖವಾಗಿರಬಹುದು. ಅವರ ಸುಖವೇ ತನ್ನ ಸುಖ........

ಭಾರತಿ ಚಂದುವಿನ ಕಡೆ ತಿರುಗಿ 'ನೀವು ಹೇಳಿದಂತೆ ಆಗಲಿ. ನಿಮ್ಮೊಡನೆ ಬರುತ್ತೇನೆ' ಎಂದಳು.

ಚಂದು ಸಂತೋಷದಿಂದವಳನ್ನು ಮುದ್ದಾಡಿ 'ಈ ಅಪ್ಸರೆ ನನಗೆ ಸಿಗುತ್ತಾಳೆ. ಇದನ್ನು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ನಾಳೆ ರಾತ್ರಿ ಹತ್ತುಗಂಟೆಗೆ ಇಬ್ಬರೂ ಮನೆಬಿಟ್ಟು ಹೊರಡೋಣ. ನೀನು ಹೆಚ್ಚು ಸಾಮಾನುಗಳನ್ನು ತೆಗೆದುಕೊಳ್ಳಬೇಡ. ಒಂದೆರಡು ಬಟ್ಟೆಗಳು ಸಾಕು. ನಾನು ಎಲ್ಲಿದ್ದರೂ ನಿನ್ನನ್ನು ಸುಖವಾಗಿಟ್ಟಿರುತ್ತೇನೆ' ಎಂದ.

ಸುಖ! ಭಾರತಿ ನಕ್ಕುಬಿಟ್ಟಳು.

"ನಗುವುದಕ್ಕೆ ಏನಾಯಿತು?"

"ಊಂ....ಏನೂ ಇಲ್ಲ. ನಾಳೆ ಹತ್ತು ಗಂಟೆಗೆ......."

"ಹೌದು. ಮರೆಯಬೇಡ. ನಾನು ನಿನ್ನನ್ನು ಕಾಯುತ್ತಾ ಸಂಪಿಗೆ ಮರದ ನೆರಳಿನಲ್ಲಿ ನಿಂತಿರುತ್ತೇನೆ. ನನ್ನಲ್ಲಿ ನಂಬಿಕೆ ಇದೆಯಲ್ಲವೇ? ಆಮೇಲೆ ನಾವಿಬ್ಬರೂ ಎಂದೆಂದಿಗೂ ಒಟ್ಟಿಗೆ ಇರಬಹುದು. ನೀನು ನನ್ನವಳು..."

ಲಾಂದ್ರದಲ್ಲಿ ಎಣ್ಣೆ ಮುಗಿದುಹೋದುದರಿಂದಲೋ ಏನೋ ಮಿಣುಕುತ್ತಿದ್ದ ದೀಪ ತಟ್ಟನೆ ಆರಿಹೋಯಿತು. ಹೊರಗೆ ಮಳೆ ಧಾರಾಕಾರವಾಗಿ ಸದ್ದುಮಾಡುತ್ತಾ ಹೆಂಚುಗಳ ಮೇಲೆ ಬೀಳುತ್ತಿತ್ತು.

## ೧೮

ಬೆಳಗಾಗುವ ಹೊತ್ತಿಗೆ ಮಳೆ ಸಂಪೂರ್ಣವಾಗಿ ನಿಂತಿತ್ತು. ಆಕಾಶ ಸ್ವಚ್ಛವಾಗಿತ್ತು. ಭಾರತಿ ಎಂದಿನಂತೆಯೇ ಎದ್ದು ದಿನದ ಕೆಲಸಗಳಲ್ಲಿ ತೊಡಗಿದಳು. ವೇದಮ್ಮ ತಮ್ಮ ಕಾಲಿಗೆ ಎಣ್ಣೆ ಹಾಕಿ, ಚೆನ್ನಾಗಿ ನೀವಿಸಿದ್ದರಿಂದ ಕುಂಟುತ್ತಾ ನಿಧಾನವಾಗಿ ಓಡಾಡಲು ಸಾಧ್ಯವಾಗಿತ್ತು. ಇನ್ನೊಂದೆರಡು ದಿನ ಕಾಲಿಗೆ ವಿಶ್ರಾಂತಿ ಕೊಡುವುದು ಅಗತ್ಯವೆಂದು ಡಾಕ್ಟರು ಹೇಳಿದುದರಿಂದ ಮನೆಯ ಕೆಲಸವೆಲ್ಲ ಭಾರತಿಯ ಮೇಲೆ ಬಿದ್ದಿತ್ತು. ಭಾರತಿ ಒಂದು ಮಾತೂ ಆಡದೆ ಶಾಂತಳಾಗಿ ತನ್ನ ಕೆಲಸಗಳನ್ನು ಮಾಡಿಕೊಂಡು ಹೋಗುತ್ತಿದ್ದಳು. ಆದರೆ ಅವಳೆದೆ ಜ್ವಾಲಾಮುಖಿಯಾಗಿತ್ತು. ಚಂದುವನ್ನು ಕಂಡರೆ ಹೃದಯ ನಡುಗುತ್ತಿತ್ತು. ಬೆಳಿಗ್ಗೆ ಒಂದು ನಿರ್ಧಾರಕ್ಕೆ ಬಂದು ಶಾಂತವಾಗಿದ್ದ ಮನಸ್ಸು ಸಂಜೆಯಾಗುತ್ತಾ ಬಂದಂತೆ ಕಳವಳ, ಆತಂಕ, ಭೀತಿಯಿಂದ ಕಂಪಿಸಿತು.

ರಂಗಣ್ಣ, ಚಂದು ರಾತ್ರಿ ಊಟಕ್ಕೆ ಕುಳಿತಿದ್ದಾಗ ಅವರಿಗೆ ಬಡಿಸಲು ಬಂದ ಭಾರತಿಯ ಕೈ ನಡುಗಿತು. 'ತನ್ನ ಮಾವನಿಗೆ ಬಡಿಸುವುದು ಇದೇ ಕಡೆಯ ಬಾರಿ' ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡಳು. ಅವಳ ಕೈ ಕಂಪನ ಗಮನಿಸಿದ ಚಂದು ತಲೆ ಎತ್ತಿ ಅವಳಿಗೆ ಕಣ್ಣುಸನ್ನೆಯಲ್ಲಿಯೇ ಧೈರ್ಯ ಹೇಳಿದ. ರಂಗಣ್ಣನವರು ಭಾರತಿ ಬಡಿಸಿದ ಸೌತೆಕಾಯಿ ಹಸಿಗೊಜ್ಜಿನ ರುಚಿ ನೋಡಿ, 'ತಾಯೀ, ಗೊಜ್ಜು ನಿನ್ನ ಕೈಲಿ ಆಗುವ ಹಾಗೆ ಬೇರೆ ಯಾರ ಕೈಯಲ್ಲೂ ಆಗುವುದಿಲ್ಲ. ನಾಳೆಯೂ ಗೊಜ್ಜು ಮಾಡು' ಎಂದರು.

ಭಾರತಿಗೆ ಏನು ಉತ್ತರ ಕೊಡಬೇಕೋ ತಿಳಿಯಲಿಲ್ಲ. ತಲೆ ಕೆಳಗೆ ಮಾಡಿ ನಿಂತಳು. ಕಣ್ಣುಗಳಲ್ಲಿ ತೆಳುವಾಗಿ ನೀರಿನ ಪರೆ ಮಿನುಗಿತು. ಚಂದುವಿನ ಎದುರಿಗೆ ಹೊಗಳಿದುದರಿಂದ ನಾಚಿದಳೆಂದು ತಿಳಿದು ರಂಗಣ್ಣನವರು ಸುಮ್ಮನಾದರು. ರಂಗಣ್ಣನವರು ಊಟ ಮುಗಿಸಿ ಎದ್ದು ಹೋಗುವುದನ್ನೇ ಕಾದಿದ್ದ ಚಂದು, ಅವರು ಎದ್ದು ಹೋದೊಡನೆ

"ರಾತ್ರಿ ಹತ್ತುಗಂಟೆಗೆ ಸರಿಯಾಗಿ ಬಂದುಬಿಡು. ನಾನು ಸಂಪಿಗೆ ಮರದ ಹತ್ತಿರ ನಿಂತಿರುತ್ತೇನೆ" ಎಂದು ಭಾರತಿಗೆ ಜ್ಞಾಪಕಕೊಟ್ಟ. ಭಾರತಿ ತನ್ನೂಟ ಮುಗಿಸಿ, ಕಸ, ಮುಸರೆ ಆಚೆಗೆ ಹಾಕಿ ಮಹಡಿಯ ಮೇಲೆ ಹೊರಟಾಗ ಒಂಭತ್ತುಗಂಟೆ ಹೊಡೆಯಿತು. ಮಹಡಿಯ ಕಟ ಕಟೆಯನ್ನು ಎಡಗೈಯಿಂದ ಬಿಗಿಯಾಗಿ ಹಿಡಿದು ಮಹಡಿಯೇರತೊಡಗಿ ದಳು. ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡಳು.

"ಈ ಮನೆಯಲ್ಲಿ ಇದು ಕಡೇ ಊಟ; ಕಡೇ ರಾತ್ರಿ..." ಭಾರತಿ ರೂಮನ್ನು ಪ್ರೀತಿಯಿಂದ ನೋಡಿದಳು. ತಾನೂ, ಆನಂದ ಕಳೆದ ಅನೇಕ ಮಧುರರಾತ್ರಿಗಳಿಗೆ ರೂಮಿನಲ್ಲಿದ್ದ ಪ್ರತಿಯೊಂದು ವಸ್ತುವೂ ಸಾಕ್ಷಿಯಾ ಗಿತ್ತು. ಈ ಆರಾಮ ಕುರ್ಚಿಯೆಂದರೆ ಅವರಿಗೆಷ್ಟು ಪ್ರೀತಿ! ಮಲ್ಲಿಗೆಯ ಬಳ್ಳಿಯೊಂದು ನೆಲದಿಂದ ಹಬ್ಬಿ ರೂಮಿನ ಕಿಟಕಿಯ ಸುತ್ತ ಬಳಸಿ ಬಂದು ಕಿಟಕಿಗೆ ಹಸಿರು ತೆರೆಹಾಕಿತ್ತು. ಮಲ್ಲಿಗೆಯ ಹೂವಿನ ವಾಸನೆ ರೂಮನ್ನು ಆಕ್ರಮಿಸಿದಾಗ ಆನಂದ ಹೇಳುತ್ತಿದ್ದ.

"ಬೆಳದಿಂಗಳ ರಾತ್ರಿಯಲ್ಲಿ, ಈ ಪರಿಮಳದ ವಾತಾವರಣದಲ್ಲಿ ನನಗೆ ನಾವು ಸ್ವರ್ಗಲೋಕದಲ್ಲಿರುವೆವೇನೋ ಎಂದೆನಿಸುತ್ತದೆ. ನಿನಗೆ ಹಾಗೆನಿ ಸುವುದಿಲ್ಲವೇ?"

ಭಾರತಿ ಅವನ ಸಮಾಧಾನಕ್ಕಾಗಿ ತಲೆಯಲುಗಿಸುತ್ತಿದ್ದಳು. ಅವಳಿಗೆ ಬೆಳದಿಂಗಳಿನ ಸೌಂದರ್ಯವಾಗಲೀ, ಹೂವಿನ ಸುವಾಸನೆಯಾಗಲೀ ಬೇಕಿರಲಿಲ್ಲ. ಆನಂದನೇ ಬೆಳದಿಂಗಳು, ಅವನಿರುವ ಸ್ಥಳವೇ ಸ್ವರ್ಗ ಎಂದವಳ ದೃಢನಂಬಿಕೆಯಾಗಿತ್ತು. ಇನ್ನೇಕೆ ಆ ಸವಿನೆನಪುಗಳು! ಅವು ಇಂದಿನ ಕಹಿಯನ್ನು ಹೆಚ್ಚಿಸುತ್ತವೆಯೇ ಹೊರತು ಕಡಿಮೆಯಾಗಿಸುವುದಿಲ್ಲ. ಭಾರತಿ ತನ್ನ ಚಿಕ್ಕ ಸೂಟುಕೇಸನ್ನು ಎದುರಿಗಿಟ್ಟುಕೊಂಡು ಸಾಧಾರಣವಾದ ಎರಡು ಚೀಟಿ ಸೀರೆ, ರವಿಕೆಯನ್ನು ಮಡಿಸಿಟ್ಟಳು. ತನ್ನ ದೊಡ್ಡ ಟ್ರಂಕು ತೆಗೆದು ತನಗೆ ಬೇಕಾಗಿರುವ ಪದಾರ್ಥಗಳನ್ನು ಹುಡುಕಿ ತೆಗೆದಿಟ್ಟುಕೊಳ್ಳ ತೊಡಗಿದಳು. ಕೈಯೊಂದು ಕೆಲಸದಲ್ಲಿ ತೊಡಗಿದ್ದರೆ ಮನಸ್ಸು ಬೇರೆ ಕೆಲಸದಲ್ಲಿ ತೊಡಗಿದ್ದಿತು. ನಾಳೆ ದಿನ ಅತ್ತೆ, ಮಾವ ತಾವಿಬ್ಬರೂ ಇಲ್ಲದಿರು ವುದನ್ನು ನೋಡಿ ಏನೆಂದುಕೊಳ್ಳಬಹುದು? ಮಕ್ಕಳಂತಹ ಮನುಷ್ಯರಿಗೆ ದ್ರೋಹಮಾಡಬೇಕಾಗಿದೆ.

ಭಾರತಿ ಅತ್ತೆ ಮನೆಯಲ್ಲಿ ಕೊಟ್ಟಿದ್ದ ಒಡವೆಗಳನ್ನೆಲ್ಲಾ ತೆಗೆದು ಒಂದು ಕಡೆ ಇರಿಸಿದಳು. ಕಣ್ಣು ಗೋಡೆಯಮೇಲೆ ಹರಿಯಿತು.

ಗೋಡೆಯ ಮೇಲಿದ್ದ ಆನಂದನ ಚಿತ್ರ ಅವಳನ್ನು ನೋಡಿ ನಕ್ಕಿತು. ಆನಂದ ಇಂಗ್ಲೆಂಡಿಗೆ ಹೋಗುವುದಕ್ಕೆ ಮುಂಚೆ ತೆಗೆಸಿಕೊಂಡಿದ್ದ ಚಿತ್ರವದು. ಆನಂದನ ಚಿತ್ರ ತೆಗೆದುಕೊಳ್ಳುವ ತವಕವಾದರೂ ಮನಸ್ಸು ಹಿಂದೆಗೆಯಿತು. 'ಆ ಚಿತ್ರ ತನಗೇಕೆ? ಅವರನ್ನೇ ತ್ಯಜಿಸಿ ಹೊರಟಿರುವಾಗ ಈ ಜೀವವಿಲ್ಲದ ಚಿತ್ರದಿಂದೇನಾಗಬೇಕಾಗಿದೆ? ಆದರೂ ತನ್ನ ದೇವರ ನೆನಪಿಗೆ ಒಂದು ಚಿತ್ರವೂ ಬೇಡವೇ? ಊಹೂಂ. ತಾನು ಪಾಪಿ. ಈ ಚಿತ್ರ ತೆಗೆದುಕೊಂಡು ಹೋಗಲೂ ತನಗೆ ಯೋಗ್ಯತೆಯಿಲ್ಲ.

"ನಿಮಗಾಗಿ, ನಿಮ್ಮ ಸುಖಕ್ಕಾಗಿ ನಾನು ಕಣ್ಣುಮರೆಯಾಗಿ ಹೋಗುತ್ತಿದ್ದೇನೆ. ನೀವು ಬೇರೆ ಮದುವೆಯಾಗಿ ಸುಖವಾಗಿರಿ" ಎಂದು ಮನಸ್ಸಿನಲ್ಲೇ ಹಾರಯಿಸಿದಳು.

ಹಾಲಿನ ಗಡಿಯಾರ ಅರ್ಧಗಂಟೆ ಹೊಡೆದ ಸದ್ದು ಕೇಳಿಸಿತು. ಸದ್ದು ಕೇಳಿ ಭಾರತಿ ಬೆಚ್ಚಿದಳು. ಇನ್ನರ್ಧ ಗಂಟೆಯಲ್ಲಿ ಈ ಮನೆಯ ಋಣ ಹರಿದುಹೋಗುತ್ತದೆ.

ಕುಂಕುಮದ ಭರಣಿ ಹುಡುಕಲು ಅವಳ ಬೆರಳುಗಳು ಪೆಟ್ಟಿಗೆಯನ್ನು ತಡಕಿದವು. ಅವಳ ಕೈಗೆ ಪುಟ್ಟ ನೀಲಿ ಚೀಲವೊಂದು ಸಿಕ್ಕಿತು. ಆನಂದನಿಂದ ಬಂದ ಕಾಗದಗಳನ್ನೆಲ್ಲಾ ಭಾರತಿ ಸಿಲ್ಕಿನ ಚೀಲಕ್ಕೆ ತುಂಬಿ ರಿಬ್ಬನ್ ಕಟ್ಟಿದ್ದಳು. ಆ ಕಾಗದಗಳನ್ನು ನೋಡಿದೊಡನೆಯೇ ಅವಳ ಮನಸ್ಸು ಚಂಚಲವಾಯಿತು. ಮೊಳಕಾಲಮೇಲೆ ತಲೆಯಿಟ್ಟು ಮನಃಪೂರ್ತಿಯಾಗಿ ಅತ್ತಳು. ಸ್ವಲ್ಪ ಸಮಾಧಾನಮಾಡಿಕೊಂಡು ಕಾಗದಗಳನ್ನು ಒಂದೊಂದಾಗಿ ತೆಗೆದು ಓದತೊಡಗಿದಳು. 'ನನ್ನ ರಾಣಿ, ದೇವತೆ, ಚಿನ್ನ, ನನ್ನ ಹುಡುಗಿ,........' ಆನಂದ ಭಾರತಿಯನ್ನು ವಿಧವಿಧವಾಗಿ ಹೆಸರಿಟ್ಟು ಕೂಗಿದಂತಾಯಿತು. ಈ ಬೆಂಕಿಯಲ್ಲಿ ಬೇಯುವುದಕ್ಕಿಂತ ಸಾಯುವುದು ಮೇಲು ಎನಿಸಿತು ಭಾರತಿಗೆ. ಕಾಗದಗಳನ್ನು ಪ್ರೀತಿಯಿಂದ ತುಟಿಗೆ ತಗುಲಿಸಿ ಪುನಃ ಚೀಲದೊಳಗೆ ಹಾಕಿ ಗಂಟು ಕಟ್ಟಿದಳು.

ಅವಳ ಮನಸ್ಸು ಒದ್ದ ಚೆಂಡಿನಂತೆ ಅಲ್ಲಿಂದಿಲ್ಲಿಗೆ ಉರುಳತೊಡಗಿತು. ತನ್ನಿಂದ ಮನೆಯವರಿಗೆ ಕೆಟ್ಟ ಹೆಸರು ಬರುವುದಿಲ್ಲವೇ? ನಾಳೆ ಸಮಾಜದಲ್ಲಿ ಅವರು ತಲೆ ಎತ್ತಿಕೊಂಡು ಓಡಾಡಲು ಸಾಧ್ಯವೇ? ಜನ ಅವರನ್ನು ನೋಡಿ ನಕ್ಕು ಮುಖ ತಿರುಗಿಸುವುದಿಲ್ಲವೇ? ಅಮ್ಮ, ಅಣ್ಣ ಏನೆಂದುಕೊಳ್ಳುವರು? ತನ್ನಿಂದ ಅವರಿಗೆ ಉಪಕಾರವಿಲ್ಲದಿದ್ದರೂ ತಾನು ಅವರಮೇಲೆ ಕಲಂಕದ ಹೊರ ಹೇರಿಸುವುದು ನ್ಯಾಯವೇ? ಆದರೆ....ಆದರೆ....ಈ ಕಲಂಕದ ಮಸಿ

ಮೆತ್ತಿಕೊಂಡಿರುವ ಮುಖವನ್ನು ಆನಂದನಿಗೆ ತೋರಿಸುವುದಾದರೂ ಹೇಗೆ? ಚಂದುವಿನೊಡನೆ ಹೊರಟು ಹೋಗುವುದೇ ಸರಿ.

ಹಾಲಿನ ಗಡಿಯಾರ ರಾತ್ರಿಯ ಮೌನವನ್ನು ಒಡೆದು ಹತ್ತು ಹೊಡೆಯಿತು. ಭಾರತಿ ಎಚ್ಚೆತ್ತು ಚಿಕ್ಕ ಪೆಟ್ಟಿಗೆಯನ್ನು ಹಿಡಿದು ಮತ್ತೊಮ್ಮೆ ಆನಂದನ ಚಿತ್ರದ ಕಡೆ ನೋಡಿ ದೀಪ ಆರಿಸಿದಳು. ರೂಮಿನ ಅಗುಳಿಯನ್ನು ಸದ್ದಾಗದಂತೆ ತೆಗೆದು ಹೆಜ್ಜೆಯಮೇಲೆ ಹೆಜ್ಜೆಯಿಡುತ್ತಾ ಹೊರಗೆ ಬಂದು ಆಲಿಸಿದಳು. ಮೌನ ಮನೆಯನ್ನು ಆಳುತಿತ್ತು. ಕಣ್ಣಲ್ಲಿ ಕಣ್ಣಿಟ್ಟು ನೋಡಿದರೂ ಏನೂ ಕಾಣಿಸುತ್ತಿರಲಿಲ್ಲ. ಒಂದು ಕೈಯಿಂದ ಎದೆಯನ್ನು ಅದುಮಿ ಹಿಡಿದು ಒಂದು ಮೆಟ್ಟಲಿಳಿದಳು. ತನ್ನ ಜೀವನವೂ ಹೀಗೆಯೇ ಮೇಲಿಂದ ಒಂದೊಂದೇ ಮೆಟ್ಟಲಾಗಿ ಕೆಳಗಿಳಿಯುತ್ತಿದೆ ಎನಿಸಿತು. ಒಂದೊಂದು ಮೆಟ್ಟಲಿಳಿಯುವಾಗಲೂ ಆನಂದನ ನೆನಪು ಅವಳ ಕಾಲನ್ನು ತಡೆಯುತ್ತಿತ್ತು. ಅವನ ಅಗೋಚರ ದೇಹ ಅವಳ ಮುಂದೆ ನಿಂತು ಮನಸ್ಸನ್ನು ಹಿಂದೆಳೆಯುತ್ತಿತ್ತು. ಆನಂದನ ನೆನಪನ್ನು ತಳ್ಳಿ, ಕಾಲನ್ನು ಕಿತ್ತು, ಮುಂದಡಿಯಿಡಬೇಕಾಯಿತು. ಮಹಡಿ ಅರ್ಧ ಇಳಿಯುವ ವೇಳೆಗೆ ಭಾರತಿ ಬಳಲಿಹೋದಳು.

'ತಾನು ಎಂದೆಂದಿಗೂ ಅವರನ್ನು ನೋಡುವ ಹಾಗಿಲ್ಲವೇ? ಅವರನ್ನು ನೋಡದೇ ಬದುಕುವುದಾದರೂ ಹೇಗ? ಆ ನಗುಮುಖ, ಪ್ರೀತಿಯ ಮಾತಗಳು ಇನ್ನು ಮೇಲೆ ತನಗಿಲ್ಲವೇ? ಅವರು ತನ್ನನ್ನು ಸ್ವೀಕರಿಸುವ ಮಾತು ಹಾಗಿರಲಿ, ಕೊನೆಗೆ ಅವರ ಕ್ಷಮೆಯೂ ತನಗೆ ಬೇಡವೇ? ಪಶ್ಚಾತ್ತಾಪದಲ್ಲಿ, ಕ್ಷಮಾಯಾಚನೆಯಲ್ಲಿ ಎಂತಹ ಪಾಪವನ್ನೂ ತೊಳೆಯಬಹುದೆಂದು ಹೇಳುವಾಗ ತನ್ನ ತಪ್ಪು ಕ್ಷಮಾತೀತವಾದುದೆ? ಭಾರತಿ ದೆವ್ವ ಹಿಡಿದವಳಂತೆ ನಿಂತಲ್ಲಿಯೇ ನಿಂತುಬಿಟ್ಟಳು. ಕೊನೆಯ ಗಳಿಗೆಯವರೆಗೆ ಅವಳಿಗೆ ಆನಂದನನ್ನು ತಾನೆಷ್ಟು ಪ್ರೀತಿಸುತ್ತೇನೆಂಬುದು ತಿಳಿದಿರಲಿಲ್ಲ. ಆನಂದನನ್ನು ಮಾತ್ರವಲ್ಲ; ಅತ್ತೆ, ಮಾವ, ಕೊನೆಗೆ ಆ ಮನೆಯ ಹೆಂಚು, ತೊಲೆ, ಮಣ್ಣನ್ನು ಸಹ ತ್ಯಜಿಸಿ ಹೋಗುವುದು ಅವಳಿಗೆ ಸಾಧ್ಯವಾಗಲಿಲ್ಲ.

"ಈ ದೇಹ ಅವರಿಗೆ ಅರ್ಪಿಸುವುದಿಲ್ಲ. ಅವರ ಕ್ಷಮೆ ಕೇಳಿ ಸಾಯುತ್ತೇನೆ. ಇದೇ ಸರಿಯಾದ ಮಾರ್ಗ" ಎಂದುಕೊಂಡು ಭಾರತಿ ಅರ್ಧ ನಿಮಿಷದಲ್ಲಿ ಮೆಟ್ಟಲೇರಿದಳು. ರೂಮಿನ ಬಾಗಲನ್ನು ಹಾಕಿ ಅಗುಳಿಯನ್ನು ಭದ್ರಪಡಿಸಿ ಅವಳು ಬಿದ್ದುಕೊಂಡಳು.

ಬೆಳಗಾದ ಮೇಲೆ ಕಣ್ಣಿನ ನೋಟದಿಂದಲೇ ತನ್ನನ್ನು ಕಾಡುವ

ಚಂದುವಿನ ಮುಖವನ್ನು ನೋಡುವುದಾದರೂ ಹೇಗೆ ಎಂದು ಭಾರತಿ ಅಂಜಿದಳು. ಅವನ ನೋಟಕ್ಕೆ ತಾನು ಸೋಲಬಾರದೆಂದು ಮನಸ್ಸನ್ನು ಕಲ್ಲು ಮಾಡಿ, ತಾನವನಿಂದ ಸಾಧ್ಯವಾದಷ್ಟು ಮಟ್ಟಿಗೆ ದೂರವಿರಬೇಕೆಂದು ನಿರ್ಧರಿಸಿದಳು. ಇತರರಾರೂ ತನ್ನನ್ನು ಗಮನಿಸುತ್ತಿಲ್ಲವೆಂದು ತಿಳಿದು ಚಂದು ಅವಳ ಕಡೆ ನೋಡಿದ. ಭಾರತಿ ಅನ್ನದ ತಪ್ಪಲೆಯಿಂದ ಅನ್ನ ತೋಡಿ ತಟ್ಟೆಯೊಳಗೆ ಹಾಕುತ್ತಿದಳು. ಅವಳ ಕಣ್ಣುಗಳೆರಡೂ ಕೊಂಚ ಊದಿದ್ದಂತೆ ಚಂದುವಿಗೆ ಭಾಸವಾಯಿತು. ಕೆದರಿದ ತಲೆ, ಕೆಂದುಟಿ ಕಚ್ಚಿ ಹಿಡಿದ ಬಿಳಿಯ ಹಲ್ಲು, ಕೆಂಪಾದ ಕಣ್ಣು ನೋಡಿ ಚಂದು ಅವಳ ಮನಸ್ಸಿನ ಸ್ಥಿತಿಯನ್ನು ಅರಿತ. ಅವಳ ಮುಖ ಗಾಣಕ್ಕೆ ಕೊಟ್ಟ ಕಬ್ಬಿನಂತಾಗಿತ್ತು. ಆ ದುಃಖದಲ್ಲಿಯೂ ಒಂದು ಬಗೆಯ ಗಂಭೀರ ಚೆಲುವು ಅವಳ ಮುಖದ ಅಂದಕ್ಕೆ ಲಾವಣ್ಯದ ಲೇಪಮಾಡಿತ್ತು. ಗೂಡಿನಿಂದ ಹೊರಗೆ ಬರುವ ಇಲಿಯನ್ನು ಹೊಂಚುಹಾಕುವ ಬೆಕ್ಕಿನಂತೆ ಚಂದು ಅವಳು ಒಬ್ಬಳೇ ಸಿಕ್ಕುವ ಸನ್ನಿವೇಶವನ್ನು ಕಾಯತೊಡಗಿದನು.

ಹಗಲು ಅವನ ಹಿಡಿತದಿಂದ ಭಾರತಿ ಪಾರಾದರೂ ಮಧ್ಯಾಹ್ನ ಅವಳು ಅಡಿಗೆಮನೆಯಲ್ಲಿ ಒಂಟಿಯಾಗಿರುವ ಸಮಯ ಕಾದು ಚಂದು ಅವಳನ್ನು ಎದುರಿಸಿದ. ರಂಗಣ್ಣನವರು ಮಲಗಿರುವುದನ್ನು ದೃಢಮಾಡಿಕೊಂಡು, ವೇದಮ್ಮನವರು ಮಲಗಿದ್ದ ರೂಮಿನ ಬಾಗಿಲಿನಲ್ಲಿ ಒಂದು ಗಳಿಗೆ ನಿಂತು ನೋಡಿದನು. ವೇದಮ್ಮನವರು ಗೋಡೆಯ ಕಡೆ ಮುಖ ಮಾಡಿ ಮಲಗಿದ್ದರು. ಅವರು ಮಿಸುಕಾಡದೆ ಮಲಗಿರುವುದನ್ನು ಒಂದು ಗಳಿಗೆ ನಿಂತು ಗಮನಿಸಿ ಚಂದು ಅಡಿಗೆ ಮನೆಯೊಳಗೆ ಬಂದ. ಮಧ್ಯಾಹ್ನದ ತಿಂಡಿ ಮಾಡಲು ಭಾರತಿ ಒಲೆ ಹೊತ್ತಿಸುತ್ತಿದ್ದಳು. ಬೀಸಣಿಗೆ ಬೀಸುತ್ತಿದ್ದ ಕೈಯನ್ನು ಚಂದು ಮೃದುವಾಗಿ ಹಿಡಿದು ತನ್ನ ಕಡೆ ತಿರುಗಿಸಿಕೊಂಡ. ಭಾರತಿ ಅವನ ಕಡೆ ತಿರುಗದೇ ಹೇಳಿದಳು.

"ನನ್ನಲ್ಲಿ ಕನಿಕರ ತೋರಿಸಿ ಕಾಡಬೇಡಿ........"

ನಿರಾಶೆ, ಛಲದಿಂದ ಚಂದುವಿಗೆ ಆವೇಶ ಬಂದಂತಾಗಿತ್ತು. ಅವಳ ಕೈಯಲ್ಲಿದ್ದ ಬೀಸಣಿಗೆಯನ್ನು ಕಿತ್ತೆಸೆದು, ಭಾರತಿಯನ್ನು ಬಿಗಿದಪ್ಪಿ

"ನಿನ್ನೆ ನೀನೇಕೆ ಬರಲಿಲ್ಲ? ನನಗೆ ನಿರಾಶೆ ಮಾಡಬೇಡ ಭಾರತಿ. ನನ್ನ ಸರ್ವಸ್ವ ನೀನು....... "

ಅವನ ಉದ್ವೇಗದ ಮಾತುಗಳು, ಆವೇಶದ ಮುಖ, ಬಿರುಸಾದ ದನಿ ಕೇಳಿ ಭಾರತಿ ಹೆದರಿಕೆಯಿಂದ ಸುತ್ತಲೂ ನೋಡಿದಳು. ಅವನಪ್ಪಿಗೆ ಅವಳ

ಪಾಲಿಗೆ ಕಠೋರವಾಗಿತ್ತು.

"ನಿನ್ನೆ ಕಳೆದುದನ್ನು ಮರೆತುಬಿಡೋಣ. ಈ ದಿನವಾದರೂ ನನ್ನೊಡನೆ ಬಂದುಬಿಡು. ನನ್ನ ಜೀವನದ ಕೊನೆಯ ಗಳಿಗೆಯವರೆಗೂ ನಾನು ನಿನಗಾಗಿ ಕಾಯುತ್ತೇನೆ. ನಿನಗಾಗಿ ಬದುಕಿ ಸಾಯುತ್ತೇನೆ"

"ಇಲ್ಲ. ನಾನು ನಿಮ್ಮೊಡನೆ ಬರುವುದಿಲ್ಲ"

ಚಂದು ಹುಚ್ಚನಂತೆ ಅವಳನ್ನು ಹಿಡಿದು ಅಲುಗಿಸಿ,

"ನನ್ನೊಡನೆ ಬಂದೇ ಬರಬೇಕು. ಬಂದೇ ಬರುವಿಯಲ್ಲವೆ" ಎಂದ.

"ಇಲ್ಲ, ಇಲ್ಲ, ಇಲ್ಲ"

"ನೀನು ಬರದಿದ್ದರೆ ನಿನ್ನನ್ನು ಕೊಂದುಬಿಡುತ್ತೇನೆ" ಆವೇಶದ ಭರದಲ್ಲಿ ಚಂದು ಬಾಯಿಗೆ ಬಂದಂತೆ ಮಾತನಾಡತೊಡಗಿದ.

"......................"

"ನೀನು ನನಗೂ ಬೇಡ. ಆನಂದನಿಗೂ ಬೇಡ"

"ಹಾಗಾದರೂ ಮಾಡಿದರೆ ನಿಮಗೆ ಪುಣ್ಯ ಬರುತ್ತದೆ"

"ಕೊನೆಯ ಬಾರಿ ನಿನ್ನನ್ನು ಕೇಳಿಕೊಳ್ಳುತ್ತೇನೆ"

"ಉ ಹೂಂ. ಎಂದೆಂದಿಗೂ ನಾನು ನಿಮ್ಮೊಡನೆ ಬರುವುದಿಲ್ಲ. ನನ್ನ ಶತ್ರುವಿನೊಡನೆ ನಾನು ಉಳಿದ ಆಯುಷ್ಯವನ್ನು ಕಳೆಯಲಾರೆ. ಇದೇ ಕೊನೆಯ ಉತ್ತರ"

"ಭಾರತಿ, ನಿನಗಾಗಿ..............."

ಚಂದುವಿನ ಮಾತು ಬಾಯಲ್ಲಿಯೇ ತಟ್ಟನೆ ನಿಂತುಹೋಯಿತು. ಬಾಗಿಲಿಗೆ ಮುಖ ಮಾಡಿಕೊಂಡು ನಿಂತಿದ್ದ ಅವನಿಗೆ ವೇದಮ್ಮ ಅಡಿಗೆ ಮನೆಯ ಬಾಗಿಲು ಹಿಡಿದು ನಿಂತಿರುವುದು ಕಾಣಿಸಿತು ಭಾರತಿಯ ಬೆನ್ನು ಬಾಗಿಲಿಗೆ ಇದ್ದುದರಿಂದ ಅವಳಿಗೆ ವೇದಮ್ಮ ಗೋಚರವಾಗಲಿಲ್ಲ. ಅವನಪ್ಪಿಗೆಯಲ್ಲಿದ್ದ ಅವಳಿಗೆ ಅವನ ಬಿಗಿತ ಸಡಿಲವಾದುದೂ, ಅವನ ಮಾತು ತಟ್ಟನೆ ನಿಂತುದೂ ಅನುಮಾನಾಸ್ಪದವಾಗಿ ತೋರಲು, ಅವನಿಂದ ದೂರ ಚಿಮ್ಮಿ ಹಿಂದಿರುಗಿದಳು. ವೇದಮ್ಮ ದಿಗ್ಭ್ರಮೆ ಹಿಡಿದವರಂತೆ ನಿಂತಿದ್ದರು. ಎವೆ ಪಿಳುಕಿಸದೆ ನೆಟ್ಟ ನೋಟದಿಂದ ಒಳಗಿನ ದೃಶ್ಯವನ್ನು ನೋಡುತ್ತಿದ್ದರು. ಅವರ ಮುಖ ಬಿಳುಪೇರಿತ್ತು. ಹಣೆಯ ಮೇಲೆ ಬೆವರಿನ ಹನಿಗಳು ಮೂಡಿದವು. ಏನೋ ಹೇಳಲು ಪ್ರಯತ್ನಿಸಿದರು. ಗಂಟಲಿನಿಂದ ಸದ್ದು ಹೊರಡಲಿಲ್ಲ. ತುಟಿಗಳು ಮಾತ್ರ ಅಲುಗಾಡಿದವು. ಕೈಗಳಿಂದ ಬಾಗಿಲನ್ನು ಬಿಗಿಯಾಗಿ ಹಿಡಿದು ಒಂದು ಗಳಿಗೆ ಬಾಗಿಲೊರಗಿ

ನಿಂತರು. ಕ್ರಮೇಣ ಬಿಳುಪೇರಿದ ಮೋರೆ ಕೆಂಪಾಯಿತು. ಚೈತನ್ಯ ವನ್ನೆಲ್ಲಾ ಒಟ್ಟುಗೂಡಿಸಿ, ಬಹಳ ನಿಧಾನವಾಗಿ ಆ ಜಾಗದಿಂದ ಸರಿದು ಹೋದರು.

ಅವರು ಕಣ್ಮರೆಯಾದ ಬಹಳ ಹೊತ್ತಿನವರೆಗೂ ಚಂದು, ಭಾರತಿ ಹಾಗೆಯೇ ನಿಂತಿದ್ದರು. ಚಂದು ಮೊದಲು ಎಚ್ಚೆತ್ತು ಭಾರತಿಯ ಕಡೆ ನೋಡಿದ. ಭಾರತಿ ಶೂನ್ಯ ದೃಷ್ಟಿಯಿಂದ ಅಡಿಗೆ ಮನೆಯ ಮಸಿಯನ್ನು ನೋಡುತ್ತಿದ್ದಳು. ಸಾವಿನ ಯೋಚನೆ ಅವಳ ಕಣ್ಣುಗಳಲ್ಲಿ ಇಣುಕುತ್ತಿತ್ತು. ಚಂದು ಅದರ ಸುಳಿವು ತಿಳಿದು ಕೇಳಿದ.

"ಭಾರತಿ, ಈಗೇನು ಮಾಡುವೆ ?"

"ಪೂರ್ತಿ ಮುಳುಗಿದವರಿಗೆ ಚಳಿ ಎಲ್ಲಿಂದ ಬಂತು"

"ಅಕ್ಕ ನಮ್ಮನ್ನು ನೋಡಿದಾಳೆ. ಅಕ್ಕನಿಗೆ ಈ ವಿಷಯ ತಿಳಿದ ಮೇಲೆ ಭಾವ, ಆನಂದ ಎಲ್ಲರಿಗೂ ಗೊತ್ತಾಗುತ್ತದೆ. ಮುಂದಿನ ಪರಿಣಾಮ ಯೋಚಿಸಿ, ನನ್ನೊಡನೆ ಬಂದರೆ ನಾನು ಕರೆದುಕೊಂಡು ಹೋಗಲು ಸಿದ್ಧ. ಮುಂದೆ ದೊಡ್ಡ ಹಗರಣಕ್ಕೆ ಅವಕಾಶ ಕೊಡದೆ ನನ್ನೊಡನೆ ಬಂದುಬಿಡು. ಈ ವಿಷಯ ತಿಳಿದ ಮೇಲೆ ಆನಂದ ನಿನ್ನನ್ನು ಕಣ್ಣೆತ್ತಿಯೂ ನೋಡಲಾರ."

ಭಾರತಿ ಉತ್ತರ ಕೊಡದೆ ತಲೆ ಅಲುಗಿಸಿ ತನ್ನ ಅಸಮ್ಮತಿಯನ್ನು ಸೂಚಿಸಿದಳು.

"ಸ್ವಲ್ಪ ದೂರಾಲೋಚನೆ ಮಾಡಿ ಉತ್ತರ ಕೊಡು. ದುಡುಕಿ ಹೇಳ ಬೇಡ. ನಾನು ಹೋದಮೇಲೆ ನಿನ್ನನ್ನು ಸುಮ್ಮನೆ ಇರಗೊಡುವುದಿಲ್ಲ. ಕೊಂಕು ಮಾತುಗಳಿಂದ ಜೀವ ಹಿಂಡುತ್ತಾರೆ. ಜೀವನವೆಂದರೆ ನರಕ ಎನ್ನು ವಷ್ಟು ಜಿಗುಪ್ಸೆ ಬರುವ ಹಾಗೆ ಮಾಡುತ್ತಾರೆ. ನನ್ನೊಡನೆ ಬಂದರೆ ಈ ಸಮಸ್ಯೆಗಳಿಗೆ ಅವಕಾಶವಿರುವುದಿಲ್ಲ"

"ನಾನು ನಿಮ್ಮೊಡನೆ ಬರುವುದಿಲ್ಲ"

"ನೀನಿನ್ನೂ ಹುಡುಗಿ. ಮುಂದೆ ಜೀವನದಲ್ಲಿ ಅನುಭವಿಸಬೇಕಾದ ಸುಖ, ಸಂತೋಷಗಳು ಬಹಳ ಇವೆ. ಒಂದು ದುಡುಕಿಗಾಗಿ ನಿನ್ನ ಜೀವನ ವನ್ನೇ ಬಲಿಯಾಗಿ ಕೊಡುತ್ತೀಯಾ ? ನಿನ್ನ ಒಳ್ಳೆಯದಕ್ಕಾಗಿಯೇ ನಾನು ಈ ಮಾತುಗಳನ್ನು ಹೇಳುತ್ತಿದ್ದೇನೆ"

"ಖಂಡಿತ ನಾನು ಬರುವುದಿಲ್ಲ. ಅವರು ನನ್ನನ್ನು ಕೊಂದರೂ ನಾನು ಇಲ್ಲೇ ಸಾಯುತ್ತೇನೆ"

ಅವಳ ಮನಸ್ಸನ್ನು ತಿರುಗಿಸುವುದು ಸಾಧ್ಯವಿಲ್ಲವೆಂದು ತಿಳಿದ ಮೇಲೆ

ಚಂದು ಸುಮ್ಮನಾದ. ಅವಳಿಂದ ಬೀಳ್ಕೊಡುವಾಗ ಅವನ ಧ್ವನಿ ಗದ್ಗದ ವಾಯಿತು. ಮಗುವಿನಂತೆ ಇದ್ದ ಹುಡುಗಿಯನ್ನು ಪ್ರೀತಿಸಿ, ಕಾಡಿ, ಬೇಡಿ, ತನ್ನವಳನ್ನಾಗಿ ಮಾಡಿಕೊಂಡು ಅವಳ ಹಾಲಿನಂತಹ ಸಂಸಾರಕ್ಕೆ ಹುಳಿ ಹಿಂಡಿದುದಕ್ಕಾಗಿ ಕೊನೆಯ ಗಳಿಗೆಯಲ್ಲಿ ಅವನಿಗೆ ತನ್ನ ವಿಷಯಕ್ಕೇ ನಾಚಿಕೆ ಯಾಯಿತು. ಅವನು ಭಾರತಿಯನ್ನು ನಿಜವಾಗಿಯೂ ಪ್ರೀತಿಸಿದ್ದ. ಅವನ ಪ್ರೀತಿ ಅವನಲ್ಲಿಯೇ ಉಳಿದಿದ್ದರೆ ಚೆನ್ನಾಗಿರುತ್ತಿತ್ತು. ಭಾರತಿ ಮದುವೆ ಯಾದ ಹುಡುಗಿಯೆಂದು ಅವನು ತನ್ನ ಪ್ರೀತಿಗೆ ಕಡಿವಾಣ ಹಾಕಿದರೂ, ಆ ಪ್ರೇಮದಲ್ಲಿದ್ದ ಕಾಮದ ಕಿಡಿ ಉಜ್ವಲವಾಗಿ, ತನ್ನ ಪಾಲನ್ನು ಬೇಡಿತು. ಹದಿನೆಂಟು ವರ್ಷದ ಹುಡುಗಿಗೆ ಮುಂದೆ ಜೀವನದಲ್ಲಿ ಬೆಳಕು ಕಾಣಿಸದಂತೆ ಅವಳಿಗೂ ಅವಳ ಗಂಡನಿಗೂ ನಡುವೆ ಚಂದು ಅಡ್ಡ ಗೋಡೆಯಂತೆ ಬಂದಿದ್ದ. ತನ್ನ ಪ್ರೀತಿಯನ್ನು ವ್ಯಕ್ತಪಡಿಸದೇ ಅವನು ತನ್ನಲ್ಲೇ ಅಡಗಿಸಬಹುದಾ ಗಿತ್ತು. ಅದು ಮಿತಿಮೀರಬಹುದು ಎಂಬ ಸುಳಿವು ತಿಳಿದು ಅವಳಿಂದ ದೂರ ಹೋಗಬಹುದಾಗಿತ್ತು. ಆದರೆ ಸ್ವಾರ್ಥಿಯಾಗಿ, ಹಸುಳೆಯಂತಹ ಹುಡುಗಿಯ ಬಾಳನ್ನು ಮಣ್ಣುಗೂಡಿಸಿದ್ದ.

## ೧೯

ವೇದಮ್ಮನವರು ದುರ್ದಾನ ತೆಗೆದುಕೊಂಡವರಂತೆ ಧಡಧಡನೆ ರಂಗಣ್ಣನವರು ಮಲಗಿ ನಿದ್ರಿಸುತ್ತಿದ್ದ ರೂಮಿಗೆ ಬಂದರು. ರಂಗಣ್ಣನವರು ಸುಖನಿದ್ರೆಯಲ್ಲಿ ಮೈಮರೆತಿದ್ದರು. ಆವೇಶದ ಭರದಲ್ಲಿ ತಮ್ಮ ಕಾಲಿಗೆ ನೋವಾಗಿದೆಯೆಂಬುದನ್ನು ವೇದಮ್ಮನವರು ಮರೆತಿದ್ದರು. ಗಂಡ ನಿದ್ರಿ ಸುತ್ತಿರುವುದನ್ನು ನೋಡಿ, ವೇದಮ್ಮ ಮಂಚದ ಬಳಿಯಿದ್ದ ಕುರ್ಚಿಯ ಮೇಲೆ ಕುಳಿತುಕೊಂಡರು. ಅವರ ಮನಸ್ಸಿನಲ್ಲಿ ವಿಧವಿಧವಾದ ಭಾವನೆಗಳು ಉಕ್ಕೇರುತ್ತಿದ್ದವು. ತಮ್ಮ ಪ್ರೀತಿಯ ಸೊಸೆ ಮಗನಿಗೆ ಮಾಡಿದ ದ್ರೋಹ ಅವರಿಗೆ ಬಲವಾದ ಪೆಟ್ಟುಕೊಟ್ಟಿತ್ತು. ತಮ್ಮ ಮಗನಂತೆಯೇ ಭಾವಿಸಿದ್ದ ಚಂದುವಿನಲ್ಲಿ ಅವರಿಗೆ ಮಗ, ಸೊಸೆಗಿಂತಲೂ ಹೆಚ್ಚು ನಂಬಿಕೆಯಿತ್ತು. ತಾವು ಪ್ರೀತಿಸಿದ್ದ ಇಬ್ಬರು ವ್ಯಕ್ತಿಗಳು ತಮ್ಮ ಸಂಸಾರಕ್ಕೆ ಮಾಡಿದ ಅನ್ಯಾಯ ಅವರ ಬುದ್ಧಿಯನ್ನೂ, ಶಾಂತಿಯನ್ನೂ ಶೂನ್ಯಗೊಳಿಸಿತು. ಗಲ್ಲಕ್ಕೆ ಕೈಕೊಟ್ಟು ವೇದಮ್ಮ ಸುಮಾರು ಕಾಲುಗಂಟೆಯ ಹೊತ್ತು ಅಲು ಗದೆ ಕುಳಿತಿದ್ದರು.

ಮುಸುಗುಬೀರಿ ಮೂಟೆಯಂತೆ ಮಲಗಿದ್ದ ರಂಗಣ್ಣನವರು ಹೊರ ಳಾಡಿ ಕಣ್ಣು ಬಿಟ್ಟರು. ಕೂಡಲೇ ಅವರಿಗೆ ಮಂಚದ ಪಕ್ಕದಲ್ಲಿ ಕುರ್ಚಿಯ ಮೇಲೆ ದುಗುಡದಿಂದ ಕುಳಿತಿದ್ದ ವೇದಮ್ಮನ ಮುಖ ಕಾಣಿಸಿತು.

"ನೀನೇ, ಇದೇನು ಇಲ್ಲಿ ಕುಳಿತಿದೀಯಾ?" ಎಂದೊಡನೆ ಅದು ವರೆವಿಗೂ ತಡೆದಿದ್ದ ದುಃಖ ಉಕ್ಕಿಬಂದಿತು ಅವರಿಗೆ. ವೇದಮ್ಮ ಮುಖ ಮುಚ್ಚಿಕೊಂಡು ಬಿಕ್ಕಿ ಅಳತೊಡಗಿದರು. ರಂಗಣ್ಣನವರಿಗೆ ಗಾಬರಿ ಯಾಯಿತು. ಹೊದಿಕೆ ಎಸೆದು ಹಾಸಿಗೆಯ ಮೇಲೆ ಎದ್ದು ಕುಳಿತು, ಹೆಂಡತಿಗೆ

"ಏನಾಯಿತು? ಹೇಳಬಾರದೆ?" ಎಂದರು.

ವೇದಮ್ಮನವರ ಅಳುವಿನಲ್ಲಿ ಮಾತು ತಡೆದು ತಡೆದು ಬಂತು.

"ಮನೆಹಾಳು ಲೌಡಿ ......ಹೀಗೆ ಆಗುತ್ತಾಳೇಂತ ... ...ಅವನು ........ಹಾವಿಗೆ ಹಾಲೆರೆದ ಹಾಗಾಯಿತು ....ಎದೆ ಒಡೆಯಲ್ಲವೆ?"

ವೇದಮ್ಮನವರ ಕತ್ತರಿಸಿದ ಮಾತುಗಳನ್ನು ರಂಗಣ್ಣನವರು ಅಪಾರ್ಥ ಮಾಡಿಕೊಂಡು ಗಾಬರಿಯಿಂದ,

"ಏನಾಯಿತೇ? ಕೇಬಲ್ ಏನಾದರೂ ಬಂದಿತೇ? ಆನಂದನಿಗೆ ಏನೆ ಒಡೆಯಿತೇ? ಅಯ್ಯೋ ಭಗವಂತಾ ....... ..." ರಂಗಣ್ಣನವರ ಮುಖ ಹುಚ್ಚುಚ್ಚಾಯಿತು.

"ಅಪದ್ಧ ನುಡಿಯಬೇಡಿ. ಆನಂದ ಹುಷಾರಾಗಿದಾನೆ. ನಿಮ್ಮ ಸೊಸೆ ಮಾಡಿರುವ ಕೆಲಸ ಕೇಳಿದಿರಾ? ಮಗಳಿಗಿಂತ ಹೆಚ್ಚು ಅಂತ ಭಾವಿಸಿದ್ದೆ. ನಂಬಿಸಿ ಕತ್ತು ಕತ್ತರಿಸುತ್ತಾಳೇಂತ ಯಾರು ಭಾವಿಸಿದ್ದರು? ಆನಂದನನ್ನು ಕೂಡ ನಾನು ಇವನನ್ನು ಸಾಕಿದಷ್ಟು ಮುದ್ದಿನಿಂದ ಬೆಳೆಸ ಲಿಲ್ಲ....ಅವನಿಂದ ನಾನು"

"ಯಾರ ವಿಷಯ ನೀನು ಮಾತನಾಡುತ್ತಿದೀಯ?"

ವೇದಮ್ಮನ ಅಳು ಮಾಯವಾಗಿ ಕೋಪ, ರೋಷ ಉಕ್ಕಿಬಂದವು.

"ಯಾರೇನು, ನಿಮ್ಮ ಸೊಸೆ ವಿಷಯ ಹೇಳ್ತಿದೀನಿ. ನಿಮ್ಮ ಸೊಸೆ, ಚಂದುವಿನ ಸಲ್ಲಾಪಾನ ಈಗ ಸ್ವಲ್ಪ ಹೊತ್ತಿನ ಹಿಂದೆ ಅಡಿಗೆ ಮನೆಯಲ್ಲಿ ನಾನೇ ನೋಡಿ ಬಂದೆ."

"ನಿನಗೆ ಬುದ್ಧಿ ಸರಿಯಾಗಿದೆ ತಾನೇ?"

"ಎಲ್ಲಕ್ಕೂ ನನ್ನ ನಿಂದಿಸಬೇಡಿ. ನನಗೆ ಬುದ್ಧಿ ಸರಿಯಾಗಿಲ್ಲದಿದ್ದರೆ ಮೂಗು ಮೂರುತುಂಡು ಮಾಡಿ"

"ಕನಸೇನಾದರೂ ಬಿತ್ತೇ?"

"ಅಯ್ಯೋ, ಖಂಡಿತ ಇಲ್ಲಾಂದ್ರೆ. ತುಂಬಾ ಬಾಯಾರಿಕೆಯಾಯಿತು. ಭಾರತಿಗೆ ಯಾಕೆ ತೊಂದರೆ ಕೊಡಬೇಕೂಂತ ನಾನೇ ನಿಧಾನವಾಗಿ ನಡೆದುಕೊಂಡು ಅಡಿಗೆ ಮನೆಯ ಬಾಗಿಲಿಗೆ ಬಂದೆ. ಮುಂದೆ ಹೇಳುವುದಕ್ಕೆ ನನಗೆ ನಾಚಿಕೆಯಾಗುತ್ತದೆ. ಕುಲಗೆಟ್ಟ ಪಾಪಿ ಅವನ ತೋಳಿನಲ್ಲಿದ್ದಳು. ಅವನು ಅವಳನ್ನಪ್ಪಿಕೊಂಡು ಏನೇನೋ ಹೇಳುತ್ತಾ ಇದ್ದ........ ......."

"ವೇದಾ, ಎಚ್ಚರಿಕೆಯಿಂದ ಮಾತನಾಡು"

ವೇದಮ್ಮನವರು ಈ ಮಾತು ಕೇಳಿ ಜ್ವಾಲಾಮುಖಿಯಾದರು.

"ಭಾರತಿ ಹಾದರ ಮಾಡಿದರೂ ಸುಳ್ಳು ಹೇಳುವುದಿಲ್ಲ. ಅವಳ ಕೈಲಿ ನಾನು ಕಂಡ ದೃಶ್ಯ ಸುಳ್ಳು ಎನಿಸಿದರೆ ನಾನವಳ ಕಾಲು ಹಿಡಿದು ಕ್ಷಮೆ ಕೇಳುತ್ತೇನೆ. ನಿಮಗೆ ಇನ್ನೂ ನಂಬಿಕೆ ಬಾರದಿದ್ದರೆ ಆನಂದನ ಮೇಲೆ ಆಣೆಯಿಟ್ಟು ಹೇಳುತ್ತೇನೆ"

ರಂಗಣ್ಣನವರು ಮಡದಿಯನ್ನು ನಂಬದಾದರು. ವೇದಮ್ಮನಿಗೆ ಆನಂದನ ಮೇಲೆ ಎಷ್ಟು ಪ್ರೇಮವಿದೆ ಎಂಬುದನ್ನು ಅವರು ಅರಿತಿದ್ದರು. ಮಗನ ಮೇಲೆ ಆಣೆ ಇಡಬೇಕಾದರೆ? ಆದರೂ ಭಾರತಿ ಹೀಗೆ ಮಾಡಿರಬಹುದೇ?

ರಂಗಣ್ಣನವರ ದೃಷ್ಟಿಕೋನವೇ ಬದಲಾಯಿಸಿತು.

"ಚಂದು ಮದುವೆಯಾಗದ ಹುಡುಗ. ಭಾರತಿ ಎಂದಿಗೂ ಹೀಗೆ ಮಾಡುವವಳಲ್ಲ. ಭಾರತಿ ಲಕ್ಷಣವಾದ ಹುಡುಗಿ. ಚಂದುವೇ ಅವಳನ್ನು ಕೆಣಕಿ, ಬಲವಂತಮಾಡಿ ಮೈ ಮೇಲೆ... "

"ಚೆನ್ನಾಯಿತು. ಬಲವಂತವಂತೆ. ತಾನಾಗಿಯೇ ಬಲಿದು ಹೋದವಳಿಗೂ ನನಗೆ ವ್ಯತ್ಯಾಸ ತಿಳಿಯುವುದಿಲ್ಲವೇ? ತಾಯಿ ತೋಳಲ್ಲಿ ಮಲಗಿದ ಮಗುವಿನ ಹಾಗೆ ಇವಳು ನಿಶ್ಚಿಂತೆಯಿಂದ ಅವನೆದೆಗೊರಗಿ ಭುಜದ ಮೇಲೆ ತಲೆಯಿಟ್ಟಿದ್ದಳು. ಬಲವಂತಮಾಡಿ ಮೈ ಮೇಲೆ ಕೈ ಹಾಕಿದರೆ ಇವಳು ಸುಮ್ಮನಿರುತ್ತಿದ್ದಳೇ? ಕೂಗಿ ಗಲಾಟೆ ಮಾಡುತ್ತಿರಲಿಲ್ಲವೇ?"

ರಂಗಣ್ಣನವರಿಗೆ ಹೆಂಡತಿಯ ಮಾತಿನಲ್ಲಿ ಸತ್ಯಾಂಶವಿದೆಯೆನಿಸಿತು.

"ಆನಂದ ಈ ವಿಚಾರ ತಿಳಿದರೆ.... "

"ಸದ್ಯ, ಹಾಗೆ ಮಾತ್ರ ಮಾಡಬೇಡಿ. ಹೆಂಡತೀನ ತಲೆ ಮೇಲಿಟ್ಟುಕೊಂಡು ಮೆರೆಸುತ್ತಿದ್ದ. ಅವಳ ರೂಪ, ಗುಣ ಎಷ್ಟು ಹೊಗಳಿದರೂ ಅವ

ನಿಗೆ ತೃಪ್ತಿಯಿಲ್ಲ. ನಿನ್ನ ಹೆಂಡತಿ ಹಾದರಗಿತ್ತಿ ಅಂತ ಬರೆದರೆ, ಅವನು ಜೀವನದಲ್ಲಿ ಜುಗುಪ್ಸೆ ಹೊಂದಿ ಬಾರದೇ ಅಲ್ಲಿಯೇ ನಿಂತುಬಿಟ್ಟರೆ ನಮ್ಮ ಗತಿಯೇನು? ಅಥವಾ ಮನಸ್ಸಿನ ಬೇಜಾರಿನಿಂದ ಇನ್ನೇನಾದರೂ ಮಾಡಿ ಕೊಂಡರೆ? ಆನಂದ ಇಲ್ಲಿಗೆ ಹಿಂದಿರುಗಿ ಬರುವವರೆವಿಗೂ ನಾವೂ ಅವನಿಗೆ ಯಾವುದನ್ನೂ ತಿಳಿಸುವುದು ಬೇಡ "

"ನೀನು ಹೇಳುವುದನ್ನು ನಂಬುವುದು ಕಷ್ಟವಾಗಿದೆ"

"ಅವಳನ್ನೇ ಕರೆದು ತರುತ್ತೇನೆ. ಅವಳು ಧೈರ್ಯವಾಗಿ ಇಲ್ಲ ಎಂದು ಹೇಳಿದರೆ ನಾನು ನೀವು ಹೇಳಿದ ಹಾಗೆ ಮಾಡುತ್ತೇನೆ" ಎನ್ನುತ್ತಾ ವೇದಮ್ಮ ನವರು ಧಡಧಡನೆ ಮೆಟ್ಟಲೇರಿ ಮುಚ್ಚಿದ್ದ ಬಾಗಿಲಿನ ಮೇಲೆ ಹೊಡೆದು,

"ಕೆಳಗೆ ಬರಬೇಕಂತೆ. ಇವರು ಕೂಗುತ್ತಿದಾರೆ" ಎಂದರು.

ಒಳಗಿನಿಂದ ಉತ್ತರ ಬರಲಿಲ್ಲ. ವೇದಮ್ಮ ಎರಡು ಮೂರು ಬಾರಿ ಕೂಗಿ ಯಾವ ಉತ್ತರವೂ ಬಾರದಿರಲು ಕೆಳಗಿಳಿದು ಬಂದು,

"ಅವಳು ರೂಮಿನಲ್ಲಿ ಬಾಗಿಲು ಹಾಕಿಕೊಂಡು ಕುಳಿತಿದಾಳೆ. ಎಷ್ಟು ಕೂಗಿದರೂ ಮಾತನಾಡುವುದಿಲ್ಲ" ಎಂದರು.

ರಂಗಣ್ಣನವರು ಕೋಲನ್ನು ಕೈಲಿ ಹಿಡಿದು ನಿಧಾನವಾಗಿ ಮಹಡಿ ಹತ್ತಿದರು. ಅವರು ಮಹಡಿ ಹತ್ತಿ ಐದಾರು ವರ್ಷಗಳಾಗಿದ್ದವು. ರಂಗಣ್ಣ ನವರು ಮಹಡಿಯೇರಿದಾಗ ಅವರ ಕಾಲುಗಳು ನಡುಗುತ್ತಿರುವುದನ್ನು ನೋಡಿ ವೇದಮ್ಮ ಹೆದರಿ,

"ಅವಳು ಹಾಳಾಗಿ ಹೋಗಲಿ. ನೀವು ಮಹಡಿ ಹತ್ತೋಕೆ ಹೋಗಿ ಬಿದ್ದೀರಿ. ಬೇಡಿ" ಎಂದರು.

"ನಿನ್ನ ಮಾತಿನಲ್ಲಿ ನನಗೆ ನಂಬಿಕೆ ಇಲ್ಲ" ಎನ್ನುತ್ತಾ ರಂಗಣ್ಣ ಮುಂದುವರಿದರು. ವೇದಮ್ಮ ಅವರನ್ನು ಹಿಂಬಾಲಿಸಿದರು. ರಂಗಣ್ಣ ನವರು ರೂಮಿನ ಬಾಗಿಲಿನಲ್ಲಿ ನಿಂತು,

"ತಾಯಿ, ಸ್ವಲ್ಪ ಹೊರಗೆ ಬರುತ್ತೀಯಾ" ಎಂದು ಕೂಗಿದರು. ಸ್ವಲ್ಪ ಹೊತ್ತು ಮೌನ, ಅನಂತರ ರೂಮಿನ ಬಾಗಿಲು ನಿಧಾನವಾಗಿ ತೆರೆಯಿತು.

ರಂಗಣ್ಣನವರು ಸೊಸೆಯ ಕಡೆ ನೋಡಿದರು. ಭಾರತಿ ತಲೆ ತಗ್ಗಿಸಿ ಬಾಗಿಲಿನಲ್ಲಿ ನಿಂತಿದ್ದಳು. ಮುಖದಲ್ಲಿ ಪ್ರೇತಕಳೆ ಸುರಿಯುತ್ತಿತ್ತು.

"ಮಗೂ, ಇವಳು ನಿನ್ನ ವಿಚಾರ ವಿಷಯವೊಂದನ್ನು ತಿಳಿಸಿದ್ದಾಳೆ. ಅದನ್ನು ನಾನು ನಂಬಲಾರೆ. ನೀನು ಸುಳ್ಳು ಹೇಳುವುದಿಲ್ಲ ಎಂದು ನನಗೆ

ಗೊತ್ತು. ನೀನು ಹೇಳಿ ನನ್ನ ಮನಸ್ಸನ್ನು ಹಗುರಮಾಡು." ರಂಗಣ್ಣನವರು ಮಾತು ನಿಲ್ಲಿಸಿ ಸೊಸೆಯ ಕಡೆ ದೈನ್ಯದಿಂದ ನೋಡಿದರು. ತಗ್ಗಿಸಿದ ತಲೆಯನ್ನು ಭಾರತಿ ಮೇಲೆತ್ತಲಿಲ್ಲ. ಕಣ್ಣೀರಿನ ಹೊರತು ಅವರಿಗೆ ಬೇರೆ ಯಾವ ಉತ್ತರವೂ ದೊರೆಯಲಿಲ್ಲ. ರಂಗಣ್ಣನವರು ಸೊಸೆಯನ್ನು ನಾನಾ ವಿಧವಾಗಿ ಪ್ರಶ್ನಿಸಿ ಅವಳಿಂದ ಮಾತು ಹೊರಡಿಸಲು ಪ್ರಯತ್ನಿಸಿದರು. ಆದರೆ ಭಾರತಿ ಮೂಕಿಯಾಗಿದ್ದಳು. ಕಣ್ಣಿನಿಂದ ನೀರಿನ ಬುಗ್ಗೆ ಚಿಮ್ಮುತ್ತಿತ್ತೇ ಹೊರತು ಮಾತು ಹೊರಡಲಿಲ್ಲ ರಂಗಣ್ಣನವರು ಕೋಲೂರಿಕೊಂಡು ಮಹಡಿಯನ್ನಿಳಿದರು. ವೇದಮ್ಮ ಗಂಡನ ಹಿಂದೆಯೇ ಇಳಿದು ಬರುತ್ತಾ ಭಾರತಿಗೆ ಕೇಳಿಸುವಂತೆಯೇ ಗಟ್ಟಿಯಾಗಿ ಹೇಳಿದರು.

"ಅವಳಿಗೆ ತಾನು ಮಾಡಿದ್ದು ತಪ್ಪು ಅಲ್ಲ ಎಂದು ಹೇಳಲು ಬಾಯಿಲ್ಲಿದೆ? ತಾನು ಮಾಡಿದುದು ತಪ್ಪು ಎಂದು ಅವಳಿಗೆ ಗೊತ್ತು. ಅದು ಹೇಗೆ ಇಲ್ಲ ಎಂದು ಧೈರ್ಯವಾಗಿ ಹೇಳುತ್ತಾಳೆ. ನಾನೇ ಪ್ರತ್ಯಕ್ಷ ನೋಡಿ ಬಂದಿದೀನಿ. ಈ ವಿಷಯ ಆನಂದನಿಗೆ ತಿಳಿದರೆ ಹೇಗೆ ಸಹಿಸುತ್ತಾನೋ ಆ ದೇವರಿಗೇ ಗೊತ್ತು."

ರಂಗಣ್ಣನವರು ಮಾತನಾಡಲಿಲ್ಲ. ದುಃಖ ಅವರ ನಾಲಿಗೆಯನ್ನು ಕಟ್ಟಿತ್ತು.

"ಇವಳನ್ನು ಬಿಟ್ಟುಬಿಡಬಹುದು ಅಂತ ತೋರುತ್ತದೆ. ಚಂದು, ಇವಳ ಸಂಬಂಧ ಎಷ್ಟು ದಿನದಿಂದಲೋ ಯಾರಿಗೆ ಗೊತ್ತು? ನಾನು ಕಾಲು ಮುರಿದುಕೊಂಡು ಮಲಗಿದ್ದು ತೂಕಡಿಸುವವನಿಗೆ ಹಾಸಿಗೆ ಹಾಸಿಕೊಟ್ಟ ಹಾಗಾಗಿರಬೇಕು. ಇವಳನ್ನು ನಾಳೆಯೇ ತವರುಮನೆಗೆ ಅಟ್ಟಬಿಡೋಣ. ಆಮೇಲೆ ರೂಪ ಇಲ್ಲದಿದ್ದರೂ ಬೇಡ, ನಡತೆ ಚೆನ್ನಾಗಿರುವ ಹುಡುಗಿಯನ್ನು ತಂದು ಆನಂದನಿಗೆ ಮದುವೆ ಮಾಡೋಣ. ರೂಪವತೀನ ತಂದು, ಬಿಳೀ ಚರ್ಮಕ್ಕೆ ಮೋಸ ಹೋಗಿ ಈಗ ಅನುಭವಿಸಿದುದು ಸಾಕು........"

ರಂಗಣ್ಣನವರು ತಲೆಯ ಮೇಲೆ ಕೈ ಹೊತ್ತು ಕುಳಿತುಬಿಟ್ಟಿದ್ದರು. ಅವರು ಬಾಯಿಯಲ್ಲಿ ಯಾವ ಮಾತನ್ನು ಆಡಿ ತೋರಿಸದಿದ್ದರೂ, ಅವರಿಗೆ ಭಾರತಿಯ ಬಗ್ಗೆ ತಮ್ಮ ಮಗನಲ್ಲಿದ್ದಷ್ಟೇ ಪ್ರೀತಿ, ಗೌರವಗಳಿದ್ದವು. ರಂಗಣ್ಣನವರಲ್ಲಿದ್ದ ಅಭಿಮಾನದ ಹೊಳೆಗೆ ಭಾರತಿಯ ವ್ಯಭಿಚಾರ ಅಡ್ಡ ಕಟ್ಟೆ ಹಾಕಿತ್ತು. ಮಗಳೆಂದು ಭಾವಿಸಿದ್ದ ಸೊಸೆ, ಆನಂದನ ಮುದ್ದಿನ ಹುಡುಗಿ ಹೀಗೆ ಮಾಡಬಹುದೆಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ. ಅವರ ಹೃದಯ ಅವಳ ಕೃತ್ಯದಿಂದ ನೊಂದಿತು. ಹೆಂಡತಿಯಂತೆ ಅವರಿಗೆ

ಸೊಸೆಯ ಮೇಲೆ ಕೋಪ ಬರಲಿಲ್ಲ. ಬದಲು ಸೊಸೆಯ ಬಗ್ಗೆ ಕನಿಕರ, ವ್ಯಥೆಯುಂಟಾಯಿತು. ಹೆಂಡತಿಯ ಮಾತಿಗೆ ಅವರು ನೋವಿನಿಂದ ನುಡಿದರು.

"ನನಗೆ ಏನು ಮಾಡುವುದಕ್ಕೂ ಗೊತ್ತಾಗುವುದಿಲ್ಲ. ಏನು ಮಾಡಬೇಕೆನಿಸಿದರೂ ನನ್ನನ್ನು ಕೇಳಬೇಡ. ನಿನ್ನ ಇಷ್ಟ ಬಂದ ಹಾಗೆ ಮಾಡಿಬಿಡು."

"ಈಗ ಒಂದು ಕೆಲಸ ಮಾಡಿ. ಅವಳ ತಂದೆಗೆ ಈಗಲೇ ಒಂದು ಕಾಗದ ಬರೆಯಿರಿ. ಅವಳ ಪುಣ್ಯಕೆಲಸಾನ ವಿವರಿಸಿ 'ನಿಮ್ಮ ಮಗಳನ್ನು ತಕ್ಷಣ ಬಂದು ಕರೆದುಕೊಂಡು ಹೋಗಿ. ನನಗೂ, ನಿಮಗೂ ಸಂಬಂಧ ಕಡಿದುಹೋಯಿತು. ನಮ್ಮ ಹುಡುಗನಿಗೆ ನಾವು ಬೇರೆ ಮದುವೆ ಮಾಡುತ್ತೇವೆ' ಎಂದು ಬರೆಯಿರಿ. ಈ ಹಾದರದ ಹೆಣ್ಣು ನಮ್ಮ ಮನೆ ಬಿಟ್ಟು ಹೋದರೆ ಸಾಕು. ಸತ್ತುಹೋದಳು ಎಂದು ತಲೆಗೆ ಸ್ನಾನ ಮಾಡಿಬಿಡುತ್ತೇನೆ. ಆನಂದ ಈ ಪೆಟ್ಟಿನಿಂದ ಹೇಗೆ ಚೇತರಿಸಿಕೊಳ್ಳುತ್ತಾನೋ? ಇವಳ ರೂಪ ನೋಡಿ ಮೆಚ್ಚಿ ಮಾಡಿಕೊಂಡ. ಅವನು ಮದುವೆ ಬೇಡಾ ಎಂದ. ನಾನೇ ಅವನ ಕೊರಳಿಗೆ ಉರುಲು ಹಾಕಿದೆ . .... .." ವೇದಮ್ಮನವರು ಮನಸ್ಸಿನಲ್ಲಿ ತುಂಬಿದ್ದ ಆಕ್ರೋಶ, ಕ್ರೋಧವನ್ನೆಲ್ಲಾ ಹೊರಗೆ ಚೆಲ್ಲಿ ಸುಮ್ಮನಾದರು. ರಂಗಣ್ಣನವರ ದುಃಖ ಚಿಂತೆಯೊಳಗೆ ಅಡಗಿ ಭಾರವಾಗಿತ್ತು.

ಅಂದಿನಿಂದ ಭಾರತಿಗೆ ನರಕ ಹಿಂಸೆ ಮೊದಲಾಯಿತು. ವೇದಮ್ಮನವರು ಸೊಸೆಯನ್ನು ಅಡಿಗೆಯ ಮನೆಯೊಳಗೆ ಸೇರಿಸುತ್ತಿರಲಿಲ್ಲ. ಒಂದು ಸಲ ತಾನು ಬಿಡಿಸಿಕೊಂಡು ತಂದಿದ್ದ ಹೂವುಗಳನ್ನು ದೇವರಿಗೆ ಪೂಜೆ ಮಾಡದೇ ಆಚೆಗೆ ಬಿಸಾಡಿದುದನ್ನು ನೋಡಿ, ಭಾರತಿ ಅಂದಿನಿಂದ ಯಾವ ಕೆಲಸಗಳಿಗೂ ಕೈಹಾಕಲಿಲ್ಲ. ಅತ್ತೆ ಮಾಡಿ ಹಾಕಿದುದನ್ನು ತಿನ್ನುವುದು, ಮಹಡಿಯ ಮೇಲೆ ರೂಮು ಬಾಗಿಲು ಹಾಕಿಕೊಂಡು ಕುಳಿತಿರುವುದರ ಹೊರತು ಬೇರೆ ಯಾವ ಕೆಲಸವೂ ಅವಳಿಗಿರಲಿಲ್ಲ.

ರಂಗಣ್ಣನವರ ಕಾಗದ ತಲುಪಿದ ಕೂಡಲೇ ಸೀತಾರಾಮಯ್ಯನವರು ದಿಕ್ಕುತೋರದೆ ಓಡಿ ಬಂದರು. ಅವರು ಮನೆಗೆ ಬಂದಾಗ ಮಧ್ಯಾಹ್ನ ಹನ್ನೆರಡು ಗಂಟೆಯಾಗಿತ್ತು. ಮುಖದಿಂದ ಸುರಿಯುತ್ತಿದ್ದ ಬೆವರು ಒರೆಸಿಕೊಳ್ಳುತ್ತಾ ಸೀತಾರಾಮಯ್ಯನವರು 'ಬಾಗಿಲು' ಎಂದರು. ರಂಗಣ್ಣನವರು ಎದ್ದು ಬಾಗಿಲು ತೆಗೆದರು. ಬೀಗರಿಬ್ಬರೂ ಒಂದು ಗಳಿಗೆ ಒಬ್ಬರ ಮುಖವನ್ನೊಬ್ಬರು ನೋಡಿದರು. ಮರುಕ್ಷಣವೇ ರಂಗಣ್ಣನವರು ಯಾವ ಮಾತನ್ನೂ

ಆಡವೆ ಒಳಗೆ ಹೊರಟುಹೋದರು. ರಂಗಣ್ಣನವರ ಔದಾಸೀನ್ಯ ಸೀತಾರಾಮಯ್ಯನವರ ಕೆನ್ನೆಗೆ ಹೊಡೆದಂತಾಯಿತು.

ರಂಗಣ್ಣನವರು ವೇದಮ್ಮನವರ ಬಳಿಗೆ ಬಂದು 'ಸೀತಾರಾಮಯ್ಯ ಬಂದಿದಾರೆ' ಎಂದರು.

"ಎಲ್ಲಾ ಹೇಳಿ 'ನಿಮ್ಮ ಮಗಳನ್ನು ಕರೆದುಕೊಂಡು ಹೋಗಿ' ಎಂದು ಹೇಳಿಬಿಡಿ"

"ಅವರಿಗೆ ಹೇಳಬೇಕಾಗಿರುವುದನ್ನೆಲ್ಲಾ ನೀನೇ ಹೇಳಿಬಿಡು. ನನ್ನ ಕೈಲಿ ಯಾವ ಮಾತೂ ಆಡಲು ಸಾಧ್ಯವಿಲ್ಲ" ಎಂದು ರಂಗಣ್ಣನವರು ಖಂಡಿತವಾಗಿ ಹೇಳಿಬಿಟ್ಟರು.

ವೇದಮ್ಮನವರು ಬಿರುಗಾಳಿಯಂತೆ ಹೊರಗೆ ನುಗ್ಗಿಬಂದು ಸೀತಾ ರಾಮಯ್ಯನವರನ್ನು ಎದುರಿಸಿದರು. ಸೀತಾರಾಮಯ್ಯನವರು ವರಾಂಡದ ಒಂದು ಮೂಲೆಯಲ್ಲಿ ನಿಂತಿದ್ದರು. ವೇದಮ್ಮ ಎರಡೇ ವಾಕ್ಯಗಳಲ್ಲಿ ತಮ್ಮ ಅಭಿಪ್ರಾಯ ತಿಳಿಸಿದರು.

"ನಿಮ್ಮ ಮಗಳನ್ನು ಕರೆದುಕೊಂಡು ಹೋಗಿ. ನಮ್ಮ ಹುಡುಗನಿಗೆ ಬೇರೆ ಮದುವೆ ಮಾಡುತ್ತೇವೆ" ಹಿಂದಿನ ಆದರ, ಗೌರವ ಮಾಯವಾಗಿತ್ತು.

ರಂಗಣ್ಣನವರ ಅನಾದರ ಗಮನಿಸಿರೋ ಸೀತಾರಾಮಯ್ಯನವರು ಕುಗ್ಗಿ ಹೋಗಿದ್ದರು. ಪದಿವು, ಬಳಲಿಕೆಯ ಮೇಲೆ ಎದೆ ಇರಿಯುವಂತಹ ಮಾತುಗಳು! ಅವರ ಕಣ್ಣುಗಳು ಪನಿಗೂಡಿದವು.

"ತಾಯಿಾ, ನಮ್ಮ ಹುಡುಗಿಯ ತಪ್ಪಾದರೂ ಏನು ... ..."

"ತಪ್ಪು! ಹಾದರ ಮಾಡೋದು ತಪ್ಪು ಎಂದು ನೀವು ಅವಳಿಗೆ ಕಲಿ ಸಲಿಲ್ಲವೇನೋ? ರೂಪ ಇದ್ದರೇನು ಬಂದಿತು? ನಡತೆ ಚೆನ್ನಾಗಿಲ್ಲದ ರೂಪಕ್ಕೆ ಬೆಂಕಿ ಹಾಕಿದರು. ನಮ್ಮ ವಂಶವನ್ನೆಲ್ಲಾ ಹಾಳು ಮಾಡಿದಳು. ನಾನೇ ಕಣ್ಣಾರೆ........"

ಸೀತಾರಾಮಯ್ಯನವರು ಶರಟಿನ ತುದಿಯಿಂದ ಕಣ್ಣೀರೊರಸಿ ಕೊಂಡು, ನಡುಗುತ್ತಿದ್ದ ದನಿಯಲ್ಲಿ ಹೇಳಿದರು

"ಭಾರತಿ ಅಂತಹ ಹುಡುಗಿಯಲ್ಲ......."

"ಹಾಗಾದರೆ ನಾನು ಸುಳ್ಳು ಹೇಳ್ತಿದೀನಿ ಅಂತ ನಿಮ್ಮ ಭಾವನೆಯೇನು? ಇನ್ನೊಬ್ಬರು ಈ ವಿಚಾರ ಹೇಳಿದ್ದರೆ ನಾನು ನಂಬುತ್ತಿರಲಿಲ್ಲ. ನನ್ನ ಕಣ್ಣು ಎಂದಿಗೂ ನನಗೆ ಮೋಸ ಮಾಡುವುದಿಲ್ಲ. ಆಗಲಿ. ನಾನೇ ಸುಳ್ಳು ಹೇಳು ವವಳು. ನಿಮ್ಮ ಸತ್ಯಸಂಧೆ, ಆ ಪತಿವ್ರತೆ ಇದಾಳಲ್ಲಾ ಅವಳು ದೇವರ

ಮುಂದೆ ನಿಂತು, ಕೈಲಿ ತಾಳಿ ಹಿಡಿದು ಪ್ರಮಾಣ ಮಾಡಲಿ. ಆಗ ನಾನು ಅವಳ ಕಾಲು ಹಿಡಿಯುತ್ತೇನೆ........" ಎನ್ನುತ್ತಾ ವೇದಮ್ಮನವರು ಧಡ ಧಡನೆ ಮಹಡಿಯೇರಿ ರೂಮಿನ ಬಾಗಿಲನ್ನು ತಟ್ಟಿದರು. ಒಳಗಿನಿಂದ ಸದ್ದು ಬರಲಿಲ್ಲ. ಸೀತಾರಾಮಯ್ಯನವರು ವೇದಮ್ಮನನ್ನು ಹಿಂಬಾಲಿಸಿ ಮಹಡಿ ಹತ್ತಿ ಬಂದರು. ವೇದಮ್ಮನವರ ತಟ್ಟುವಿಕೆಗೆ ಯಾವ ವಿಧವಾದ ಪ್ರತಿ ಕ್ರಿಯೆಯೂ ಬಾರದಿರುವುದನ್ನು ನೋಡಿ ತಾವೇ ಮುಂದುವರಿದು ಬಾಗಿಲಿನ ಬಳಿ ನಿಂತು ಹೇಳಿದರು.

"ಭಾರತಿ, ನಿನ್ನಲ್ಲಿ ತಪ್ಪಿಲ್ಲದಿದ್ದರೆ ಹೊರಗೆ ಬಂದು ದೇವರ ಮುಂದೆ ನಿಂತು ಪ್ರಮಾಣ ಮಾಡು"

ಸೀತಾರಾಮಯ್ಯನವರು ಐದು ನಿಮಿಷ ಕಾದರು. ಒಳಗಿನಿಂದ ಉತ್ತರವಾಗಲೀ, ಸದ್ದಾಗಲೀ ಬರಲಿಲ್ಲ. ಮುಚ್ಚಿದ ಬಾಗಿಲು ಅವಳ ಅಪ ರಾಧವನ್ನು ಎತ್ತಿ ತೋರಿಸಿತು. ವೇದಮ್ಮ ವ್ಯಂಗ್ಯವಾಗಿ ನುಡಿದರು.

"ಹೊರಗೆ ಬಂದು ಮುಖ ತೋರಿಸಲು ಧೈರ್ಯವೆಲ್ಲಿದೆ? ವ್ಯಭಿಚಾರ ಮಾಡಿ, ಚಿಕ್ಕಮನೇಲಿ ಬಾಗಿಲು ಹಾಕಿಕೊಂಡು ಕುಳಿತರೆ ಪುಣ್ಯ ಬರೋದಿಲ್ಲ. ಮಗಳನ್ನು ನಿಮ್ಮ ಜೊತೇಲಿ ಕರೆದುಕೊಂಡು ಹೋಗಿ. ನಮಗೂ ಅವ ಳಿಗೂ ಋಣಾನುಬಂಧ ಹರಿದು ಹೋಯಿತು."

ಸೀತಾರಾಮಯ್ಯನವರು ವ್ಯಾಕುಲದಿಂದ ಬಾಗಿಲಿನ ಕಡೆ ನೋಡಿ ದರು. ಮಗಳ ಮೌನ, ನಿರುತ್ತರ ಅವಳು ತಪ್ಪಿತಸ್ಥಳೆಂದು ಕೂಗಿ ಹೇಳು ತ್ತಿದ್ದವು. ಉಕ್ಕುವ ಪ್ರಾಯದ, ಸುಂದರಿಯಾದ ಮಗಳನ್ನು ಮನೆಯ ಲ್ಲಿಟ್ಟುಕೊಳ್ಳುವುದೆಂದರೆ ಅವರಿಗೂ ಅಂಜಿಕೆಯಾಯಿತು. ಮುಂದೆಯೂ ಅವಳ ಮಡುಕಿನಿಂದಾಗಿ ತಮ್ಮ ಕುಲೀನ, ಪವಿತ್ರವಾದ ಮನೆ ಅಪವಿತ್ರ ವಾದರೆ? ಹಾಗೆಂದು ಮಗಳನ್ನು ಅತ್ತೆಯ ಮನೆಯಲ್ಲೇ ಬಿಟ್ಟು ಹೋಗುವ ಮನಸ್ಸು ಇರಲಿಲ್ಲ. ಸೀತಾರಾಮಯ್ಯನವರು ಮನೆಯಿಂದ ಹೊರಟಾಗಲೇ ಸರೋಜಮ್ಮ ಕಲ್ಲುಮನಸ್ಸಿನಿಂದ ನುಡಿದಿದ್ದರು. "ಅವಳದೇ ತಪ್ಪಾಗಿದ್ದರೆ ಅವಳನ್ನು ಖಂಡಿತ ಕರೆದುತರಬೇಡಿ. ಎಲ್ಲಿಯಾದರೂ ಹಾಳು ಭಾವಿಯ ಆಶ್ರಯ ಹೋಗಲಿ ವ್ಯಭಿಚಾರ ಮಾಡುವ ಮಗಳು ನನ್ನ ಮಗಳಲ್ಲ. ಕುಲಕ್ಕೆ ಮೃತ್ಯು" ಎಂದು ಅವರು ಶಪಿಸಿದ್ದರು.

ಹೆಂಡತಿಯ ಕಟುನುಡಿಯ ಬೆಂಕಿಯಲ್ಲಿ ಅವರ ಮನಸ್ಸು ಹಣ್ಣಾ ಯಿತು. ಭಾರತಿಯನ್ನು ಹೊರಗೆ ಬರುವಂತೆ ಮಾಡಿದ ಪ್ರಯತ್ನಗಳು ವಿಫಲ ವಾದವು. ಕೊನೆಗೆ ಮುಚ್ಚಿದ ಬಾಗಿಲನ್ನು ತಮ್ಮ ಕೈಗಳಿಂದ ಗುದ್ದಿ

"ನೀನು ನನ್ನ ಮಗಳಲ್ಲ. ನಮ್ಮ ಪಾಲಿಗೆ ಸತ್ತುಹೋದೆ........" ಎಂದು ವೇದಮ್ಮನ ಕಡೆ ತಿರುಗಿ 'ಇಂದಿನಿಂದ ನನ್ನ ಮಗಳು ಸತ್ತು ಹೋದಳು. ಬೇಕಾದರೆ ಮನೆಯಲ್ಲಿರಿಸಿಕೊಂಡು ಪರಿಚಾರಿಕೆ ಮಾಡಿಸಿ. ಬೇಡವಾದರೆ ಬೀದಿಗೆ ಓಡಿಸಿಬಿಡಿ. ಹಾದರ........... ಹೂಂ. ಹಾದರ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಾಳೆ. ಇಲ್ಲವಾದರೆ ವಿಷಹಾಕಿ ಕೊಂದು ಬಿಡಿ" ಎಂದು ದಡದಡನೆ ಮಹಡಿಯಿಳಿದು ಬಂದು ಚಪ್ಪಲಿ ಮೆಟ್ಟಿ ಕೊಂಡರು. ಒದ್ದೆಯಾಗಿದ್ದ ಕಣ್ಣು, ಕೆನ್ನೆ ಒರೆಸಿಕೊಂಡು ಹಿಂದಿರುಗಿ ಯಾರನ್ನೂ ನೋಡದೇ ಸರಸರನೇ ಹೊರಟುಹೋದರು

"ಈ ಹಾಳು ಶನಿ ನಮಗೇ ಗಂಟುಬಿತ್ತು" ಎಂದು ವೇದಮ್ಮ ಜುಗುಪ್ಸೆಯಿಂದ ಹೇಳಿಕೊಂಡರು.

## ೨೦

ಅಂದಿನಿಂದ ಭಾರತಿಗೆ ತಪ್ಪದೆ ವಾರಕ್ಕೊಂದು ಕಾಗದ ಬರುತ್ತಿತ್ತು ಗಂಡನಿಗೆ ಕಾಗದ ಬರೆಯಲು ಕುಳಿತಾಗ ಭಾರತಿಯ ಮನಸ್ಸು ತನ್ನ ತಪ್ಪನ್ನು ಕಾಗದದಲ್ಲಿ ಬರೆದು ಕ್ಷಮಾಯಾಚನೆ ಮಾಡಲು ತವಕಿಸುತ್ತಿತ್ತು. ಆದರೆ ಕೈ ಓಡುತ್ತಿರಲಿಲ್ಲ. ಕಣ್ಣು ಮಂಜಾಗಿ ಕೈ ಕಂಪಿಸುತ್ತಿತ್ತು.

"ಈ ಸಲ ಬೇಡ. ಇನ್ನೊಂದು ಸಲ ಖಂಡಿತ ಬರೆಯುತ್ತೇನೆ" ಎಂದು ಕೊಂಡು ಸುಮ್ಮನಾಗುತ್ತಿದ್ದಳು. ಆದರೆ ಪ್ರತಿಬಾರಿಯೂ ಪತ್ರ ಬರೆಯಲು ಕುಳಿತಾಗ ಅವಳ ಹೃದಯ ಅಧೀರವಾಗುತ್ತಿತ್ತು.

ವೇದಮ್ಮ ಮೊದಲು ಸೊಸೆಯನ್ನು ಎಷ್ಟು ಪ್ರೀತಿಸುತ್ತಿದ್ದರೋ ಈಗ ಸೊಸೆಯನ್ನು ಅಷ್ಟೇ ದ್ವೇಷ, ತಿರಸ್ಕಾರದಿಂದ ಕಾಣುತ್ತಿದ್ದರು. ವೇದಮ್ಮ ವ್ಯಂಗ್ಯವಾದ ಮಾತುಗಳಿಂದ ಭಾರತಿಯನ್ನು ನೋಯಿಸುತ್ತಿದ್ದರು. ಒಂದು ಬಾರಿ ರಂಗಣ್ಣನವರು ಹೆಂಡತಿಯ ವ್ಯಂಗ್ಯದ ನುಡಿಗಳನ್ನು ಸಹಿಸಲಾರದೆ ಹೇಳಿದರು.

"ಆನಂದ ಬಂದ ಮೇಲೆ ಏನಾದರೂ ಮಾಡಿಕೊಳ್ಳಲಿ. ನೀನೇಕೆ ಚುಚ್ಚು ಮಾತುಗಳಿಂದ ಆ ಹುಡುಗಿಯನ್ನು ನೋಯಿಸುತ್ತೀಯೆ?"

ವೇದಮ್ಮನವರು ಹಸಿದ ಹುಲಿಯಂತೆ ಆರ್ಭಟಿಸಿದರು. "ಅವಳ ಕೃತ್ಯದಿಂದ ನನ್ನ ಮನಸ್ಸೆಷ್ಟು ನೊಂದಿದೆ ಎಂಬುದು ನಿಮಗೇನು ಗೊತ್ತು? ನನ್ನ ಸೊಸೆ ಸಾಕ್ಷಾತ್ ಲಕ್ಷ್ಮಿ ಅಂತ ಭಾವಿಸಿದ್ದೆ. ನನ್ನ ಹೊಟ್ಟೆ ಉರಿಸಿ

ದ್ದಾಳೆ. ಅವಳನ್ನ ನೀರು, ನೆರಳಿಲ್ಲದ ಕಡೆ ಕಡಿದು ಬಂದರೂ ಪಾಪ ಬರು ವುದಿಲ್ಲ. ಇನ್ನು ಮೇಲೆ ನನ್ನ ವಿಚಾರಕ್ಕೆ ಬರಬೇಡಿ"

ರಂಗಣ್ಣನವರು ಅಂದಿನಿಂದ ಬಾಯಿ ತೆಗೆಯಲಿಲ್ಲ. ವೇದಮ್ಮನವರು ಸೊಸೆಯನ್ನು ಅಡಿಗೆ ಮನೆಯೊಳಗೆ ಸೇರಿಸುತ್ತಿರಲಿಲ್ಲ. ಕೀಳು ಜಾತಿಯವರಿಗೆ ಅನ್ನ ಹಾಕುವಂತೆ ಭಾರತಿಯನ್ನು ಹೊರಗೆ ಕೂರಿಸಿ ಅನ್ನ ಹಾಕುತ್ತಿದ್ದರು. ಸಂಪ್ರದಾಯಕ್ಕೆ ಕಟ್ಟುಬಿದ್ದ ಮನಸ್ಸು ಅವಳನ್ನು ನೋಡಲು ಹೇಸುತ್ತಿತ್ತು.

ಭಾರತಿಯೂ ಸಾಧ್ಯವಾದ ಮಟ್ಟಿಗೆ ಮನೆಯವರಿಂದ ದೂರವಿರುತ್ತಿ ದ್ದಳು. ಆದರೆ ಊಟ, ತಿಂಡಿಗಾಗಿಯಾದರೂ ಅವಳು ಕೆಳಗೆ ಬರಲೇ ಬೇಕಾಗಿತ್ತು. ಮನಸ್ಸು ಬಂದ ದಿನ ಊಟ ಮಾಡುತ್ತಿದ್ದಳು. ಇಲ್ಲದಿದ್ದರೆ ಉಪವಾಸವಿರುತ್ತಿದ್ದಳು. ಸರಿಯಾಗಿ ಆಹಾರವಿಲ್ಲವೆ, ಸಂತೋಷವಿಲ್ಲವೆ ಅವಳ ದೇಹ ನೀರು ಕಾಣದ ಗಿಡದಂತಾಯಿತು. ಮುಖ ಖಾಯಿಲೆಯವ ರಂತೆ ಬಿಳಿಚಿಕೊಂಡಿತು. ತುಂಬಿದ ಕೆನ್ನೆ ಬಾಡಿತು. ತಲೆಗೂದಲು 'ಆರೈಕೆ' ಯಿಲ್ಲದೆ, ಸಿಕ್ಕು ಸಿಕ್ಕಾಗಿ ಕೆಂಚು ಬಣ್ಣಕ್ಕೆ ತಿರುಗಿತು. ಅವಳ ದೇಹದಲ್ಲಿ ಮೂಳೆ, ಚರ್ಮದ ಹೊರತು ಬೇರೇನೂ ಉಳಿದಿರಲಿಲ್ಲ. ಪಶ್ಚಾ ತ್ತಾಪದ ಬೆಂಕಿಯಲ್ಲಿ ಅವಳ ದೇಹ, ಆತ್ಮ, ಮನಸ್ಸು ಬೇಯುತ್ತಿತ್ತು. ಕಣ್ಣುಗಳು ಮಾತ್ರ ಯಾರದೋ ದರ್ಶನಕ್ಕಾಗಿ ಕಾದಿದ್ದವು. ಆನಂದನ ಭಾವಚಿತ್ರ ನೋಡುವುದರಲ್ಲಿ ದಿನದ ಬಹುಭಾಗ ಕಳೆದು ಹೋಗುತ್ತಿತ್ತು. ಆನಂದ ತನ್ನನ್ನು ಕ್ಷಮಿಸುವುದಿಲ್ಲನೆಂದು ಅವಳು ದೃಢವಾಗಿ ನಂಬಿ ದ್ದಳು. ಆದರೂ ತನ್ನ ಕರ್ತವ್ಯ ತಾನು ಮಾಡಿಬಿಡುವುದು ಸರಿ ಎಂದು ಅವಳು ನಿರ್ಧರಿಸಿದಳು. ಏರುವ ಯೌವನದಲ್ಲಿ, ದುರ್ಬಲ ಗಳಿಗೆಯಲ್ಲಿ ಕಾಲು ಜಾರಿ ಬಿದ್ದುದಕ್ಕಾಗಿ, ತನ್ನ ಜೀವನ ವ್ಯರ್ಥವಾದುದಕ್ಕಾಗಿ ಅವಳಿಗೆ ದುಃಖವಾಗುತ್ತಿತ್ತು. ಬದುಕಿನ ಬಟ್ಟಲಿನಿಂದ ಸಾಧ್ಯವಾದಷ್ಟು ರಸಹೀರಿ ಸುಖಿಯಾಗಿರಬೇಕೆಂಬ ಹಂಬಲ ಅವಳಿಗಿತ್ತು. ಆದರೆ ಅದೊಂದು ವಿಷಗಳಿ ಗೆಯಿಂದಾಗಿ ಅವಳ ಆಸೆ, ಆಕಾಂಕ್ಷೆಗಳೆಲ್ಲ ಬೂದಿಯಾಗಿದ್ದವು. ಇನ್ನು ಅವಳ ಪಾಲಿಗೆ ಉಳಿದದ್ದು ಕ್ಷಮೆ, ಸಾವು. ಮಾಡಿದ ತಪ್ಪು ಒಪ್ಪಿಕೊಂಡು, ಕ್ಷಮಾಯಾಚನೆ ಮಾಡಿ, ಆನಂದನ ಮುಖವನ್ನು ಕಣ್ಣು ತುಂಬ ನೋಡಿ ಸಾವನ್ನಪ್ಪುವುದೇ ಶ್ರೇಷ್ಠವಾದ ಮಾರ್ಗವೆನಿಸಿತ್ತು ಭಾರತಿಗೆ.

ಭಾರತಿ ಮಹಡಿಯಲ್ಲಿದ್ದ ಆನಂದನ ಕಾಗದವನ್ನು ನಾಲ್ಕನೆಯ ಬಾರಿ ಓದುತ್ತಿದ್ದಳು. ಆನಂದ ತನ್ನ ಪ್ರೇಮವನ್ನೆಲ್ಲಾ ಆ ಪುಟ್ಟ ಕಾಗದದಲ್ಲಿ ನೆಯ್ದಿದ್ದ. ಭಾರತಿಯನ್ನು ನೋಡುವ ಆತುರ, ಕಾತರ ವ್ಯಕ್ತಪಡಿಸಿ

ಕೊನೆಯಲ್ಲಿ "ಚಿನ್ನ, ಇನ್ನು ನಾಲ್ಕು ತಿಂಗಳು ಹೇಗಾದರೂ ಸಹಿಸಿಬಿಡು. ಆಮೇಲೆ ಬ್ರಹ್ಮ ಇರಲಿ, ಯಮ ನಹ ನನ್ನಿಬ್ಬರನ್ನೂ ಬೇರ್ಪಡಿಸಲಾರ. ಇನ್ನು ನಾಲ್ಕೇ ತಿಂಗಳು" ಎಂದು ಕಾಗದ ಮುಗಿಸಿದ.

ಕೊನೆಯ ವಾಕ್ಯಗಳನ್ನು ಓದುವಾಗ ಭಾರತಿಯ ಮುಖದ ಮೇಲೆ ವಿಷಾದದ ಛಾಯೆ ಮೂಡಿತು. ಈ ವಾಕ್ಯಗಳನ್ನು ಬರೆದ ವ್ಯಕ್ತಿಯೇ ನಾಲ್ಕು ತಿಂಗಳ ನಂತರ ತನ್ನನ್ನು ಕಣ್ಣೆತ್ತಿಯೂ ನೋಡದೆ ಕಾಲಿನಿಂದ ಒತ್ತರಿಸಬಹುದು ಎಂದುಕೊಂಡಳು. ಅವರು ತನ್ನಲ್ಲಿಟ್ಟಿದ್ದ ಅಪಾರ ಪ್ರೀತಿ ಯನ್ನು ತಾನೇ ಕೈಯಾರ ಹೊಸಕಿ ಹಾಕಿದುದಕ್ಕಾಗಿ ಅವಳಿಗೆ ದುಃಖ ವಾಯಿತು. ಎಂತಹ ಭಾಗ್ಯ ಕಳೆದುಕೊಂಡ ನಿರ್ಭಾಗ್ಯೆ ತಾನು ಎನಿಸಿತು. ಅತ್ತೆ, ಮಾವನೆದುರಿಗೆ ತಲೆ ಎತ್ತಿ ಧೈರ್ಯದಿಂದ ಓಡಾಡುವ ಶಕ್ತಿಯಿಲ್ಲ ದಿದ್ದರೂ, ಅವರೆದುರಿಗೆ ಸುಳಿದಾಡುವ ಶಕ್ತಿಯಾದರೂ ಅವಳಲ್ಲುಳಿದಿತ್ತು. ಆನಂದ ಹಿಂದಿರುಗಿ ಬರುವ ದಿನ ಸಮೀಪಿಸುತ್ತಿದ್ದಂತೆ ಅಂಜಿಕೆ, ಭೀತಿ ಯಿಂದ ಅವಳ ಮನಸ್ಸು ನಡುಗಿತು. ಆನಂದನ ಎದುರಿಗೆ ಹೋಗುವು ದಾದರೂ ಹೇಗೆ? ಎದೆಯ ಬಡಿತವೇ ನಿಂತು ಹೋದರೆ ಏನು ಗತಿ! ಭಾರತಿ ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಒದ್ದಾಡಿ ಕೈಕೈ ಹಿಸುಕಿಕೊಂಡಳು. ತನ್ನ ಸಮಾಧಿಯನ್ನು ತಾನೇ ತೋಡಿಕೊಂಡಿದ್ದಕ್ಕಾಗಿ ಅವಳಿಗೆ ವ್ಯಥೆಯಾಯಿತು.

ಅವನ ಆಗಮನದ ದಿನ ಹತ್ತಿರವಾದಂತೆ ಭಾರತಿಯ ಕಳವಳ ಹೆಚ್ಚಿತು. ಗಂಡನನ್ನು ನೋಡದೆ ಆತ್ಮಹತ್ಯೆ ಮಾಡಿಕೊಂಡು ಬಿಡಬೇ ಎಂದು ಕೆಲವು ಬಾರಿ ಯೋಚಿಸಿದಳು ಆಕೆ. ಆದರೆ ಗಂಡನನ್ನು ಕಾಣದೇ ಸಾಯಲು ಅವಳ ಮನಸ್ಸು ಒಪ್ಪಲಿಲ್ಲ.

ಆನಂದ ತಾನು ಬೊಂಬಾಯಿಗೆ ಹಡಗಿನಲ್ಲಿ ಬರುವ ತಾರೀಖನ್ನು ಸೂಚಿಸಿ ತಂದೆಗೆ ಕಾಗದ ಬರೆದಿದ್ದ. ಕಾಗದ ಓದಿ ರಂಗಣ್ಣನವರು ತಲೆಯ ಮೇಲೆ ಕೈ ಹೊತ್ತು,

"ವೇದೂ ......." ಎಂದು ಹೆಂಡತಿಯನ್ನು ಕೂಗಿದರು.

"ಏನು ?"

"ಆನಂದ ಕಾಗದ ಬರೆದಿದಾನೆ ......."

"ಏನು ಬರೆದಿದಾನೆ" ವೇದಮ್ಮ ಆತುರದಿಂದ ಕೇಳಿದರು.

"ನೀನೇ ಓದಿಕೋ" ರಂಗಣ್ಣನವರು ಕಾಗದವನ್ನು ಹೆಂಡತಿಯ ಕೈಗೆ ಕೊಟ್ಟರು. ವೇದಮ್ಮ ಕಾಗದ ನೋಡಿ,

"ನಿಮ್ಮ ಬುದ್ಧಿ ಯಾಕೋ ತಿರುಗುತ್ತಿರುವ ಹಾಗಿದೆ. ಕಾಗದ

ಇಂಗ್ಲಿಷಿನಲ್ಲಿ ಬರೆದಿದಾನೆ. ನನಗೇನು ಅರ್ಥವಾಗುತ್ತದೆ." ಎಂದರು.

"ಓ, ನನ್ನ ಬುದ್ಧಿ ನನ್ನ ಸ್ವಾಧೀನದಲ್ಲಿಲ್ಲ. ಕೊಡು ಇಲ್ಲಿ" ಎಂದು ರಂಗಣ್ಣನವರು ಕಾಗದ ತೆಗೆದುಕೊಂಡರು.

"ಇನ್ನು ಹದಿನೈದು ದಿವಸಕ್ಕೆ ಸರಿಯಾಗಿ, ಶುಕ್ರವಾರ ಆನಂದ ಬೊಂಬಾಯಿಗೆ ಬರುತ್ತಾನೆ. ನಿಮ್ಮನ್ನೆಲ್ಲಾ ನೋಡಿ ತುಂಬಾ ದಿನವಾಯಿತು. ಬೆಂಗಳೂರಿಗೆ ಬರುವವರೆವಿಗೆ ನನ್ನ ಮನಸ್ಸು ತಡೆಯುವುದಿಲ್ಲ. ಆದುದ ರಿಂದ ನನ್ನ ....... "

"ಅದಕ್ಕೇನಂತೆ. ಧಾರಾಳವಾಗಿ ಬೊಂಬಾಯಿಗೆ ಹೋಗಿ ಮಗನ್ನ ಎದುರುಗೊಂಡು ಬನ್ನಿ"

"ಸ್ವಲ್ಪ ಪೂರ್ತಿ ಕೇಳು. ನಾನೊಬ್ಬನೇ ಅಲ್ಲ. ಅವನ ಹೆಂಡತೀನೂ ...." ರಂಗಣ್ಣನವರು ಉಗುಳು ನುಂಗಿ ಹೆಂಡತಿಯ ಮುಖ ನೋಡಿದರು. ಬೀಸಿದ ಕೂಡಲೇ ಬೂದಿ ಹಾರಿ ಭಗ್ಗನೆ ಹತ್ತಿಕೊಳ್ಳುವ ಕೆಂಡದಂತೆ, ಭಾರತಿಯ ಸುದ್ದಿ ಬಂದ ಕೂಡಲೇ ವೇದಮ್ಮ ಸಿಡುಕಿದರು.

"ಅಂತೂ ಅವನಿಗೆ ನಮ್ಮನ್ನು ಕಾಣುವ ಆತುರಕ್ಕಿಂತಲೂ ತನ್ನ ಹೆಂಡತೀನ ಕಾಣುವ ಆತುರವೇ ಹೆಚ್ಚಾಗಿದೆ. ತನ್ನ ರಂಭೇನ ಬೊಂಬಾ ಯಿಗೆ ಕರೆದುಕೊಂಡು ಬರಲೆಂದೇ ನಿಮ್ಮನ್ನು ಬರಹೇಳಿದಾನೆ............" ಮಾತನಾಡುತ್ತಾ ವೇದಮ್ಮನವರ ರೋಷ ಮಾಯವಾಗಿ ಕಂಠ ಗದ್ಗದ ವಾಯಿತು. "ಈ ವಯಸ್ಸೇ ಹಾಗೆ ಅನ್ನಿ. ಹೆಂಡತಿ ಅಂದರೆ ಕಲ್ಲುಸಕ್ಕರೆ ಎಂದು ಭಾವಿಸುವ ವಯಸ್ಸು. ಹೆಂಡತಿ ಅಂದರೆ ಅವನಿಗೆ ಅದೇನು ಪ್ರೀತಿ, ಹುಚ್ಚು! ತನ್ನ ಹೆಂಡತಿ ಸಮಾನ ಯಾರೂ ಇಲ್ಲ ಎಂದು ಮೆರೆಯುತ್ತಿದ್ದ. ಅವಳನ್ನು ಎಷ್ಟು ಬಗೆಯಾಗಿ ಸಿಂಗರಿಸಿದರೂ ತೃಪ್ತಿಯಿಲ್ಲ. ಅವಳಲ್ಲಿ ಎಷ್ಟೊಂದು ಪ್ರೀತಿ ಇಟ್ಟುಕೊಂಡಿದ್ದನೋ, ಆ ಮೂಳಿ ಎಲ್ಲವನ್ನೂ ನೆಲಸಮ ಮಾಡಿಬಿಟ್ಟಳು........" ವೇದಮ್ಮನವರು ಕಣ್ಣೊಗೆಸಿಕೊಂಡು ಹೇಳಿದರು "ಸೊಸೆ ಅಂದರೆ ಮಗಳು ಅಂತ ತಿಳಿದಿದ್ದೆ. ನಾವಿಬ್ಬರೂ ಅತ್ತೆ, ಸೊಸೆಯಾಗಿರಲಿಲ್ಲ. ಅವಳನ್ನು ಮನಸ್ಸಿಗೆ ತುಂಬಾ ಹಚ್ಚಿಕೊಂಡಿದ್ದೆ. ಅವಳಲ್ಲಿ ನಾನೆಷ್ಟು ಪ್ರೀತಿ ಇಟ್ಟಿದ್ದೆ! ಮನೆ ಬೆಳಕು ಎಂದು ಭಾವಿಸಿದ್ದೆ. ನಾವು ಹೆಚ್ಚು ಪ್ರೀತಿಸುವವರು ದ್ರೋಹ ಮಾಡಿದರೆ ತುಂಬಾ ಬೇಜಾರಾಗು ತ್ತದೆ. ಆದರೆ ಅವಳು ಮಾತ್ರ....ಎಲ್ಲಕ್ಕೂ ಬೆಂಕಿಯಿಟ್ಟಳು. ಇನ್ನು ಚಂದು, ಚಂದುವನ್ನು ಪ್ರೀತಿಸಿದಷ್ಟು ಆನಂದನನ್ನೂ ಪ್ರೀತಿಸಲಿಲ್ಲ....ಚಂದು..... ಅಯ್ಯೋ ಚಂದು ಹೀಗೆ ಮಾಡ್ತಾನೇಂತ ನಾನು ತಿಳಿದಿರಲಿಲ್ಲ. ಇಷ್ಟು

ದೊಡ್ಡ ಪ್ರಪಂಚದಲ್ಲಿ ಅವನಿಗೆ ನನ್ನ ಸೊಸೆಯೇ ಬೇಕಾಯಿತೆ........?" ಮುಂದೆ ಮಾತನಾಡಲಾರದೇ ವೇದಮ್ಮ ಅಳುತ್ತಾ ಒಳಗೆ ಹೊರಟು ಹೋದರು.

ಬಹಳ ಹೊತ್ತಿನವರೆಗೆ ರಂಗಣ್ಣನವರು ಹಾಸಿಗೆಯಲ್ಲೇ ಕುಳಿತಿದ್ದರು. ತಮ್ಮ ಅಶಕ್ತಿಯಿಂದಾಗಿ ಬೊಂಬಾಯಿಗೆ ಬರಲು ಸಾಧ್ಯವಿಲ್ಲವೆಂದು ಮಗನಿಗೆ ಕಾಗದ ಬರೆದರು. ಹೆಂಡತಿಯೆದುರಿಗೆ ಕಾಗದವನ್ನು ಓದಿ,

"ಆನಂದನಿಗೆ ಈ ಕಾಗದ ಓದಿ ನಿರಾಶೆಯಾಗಬಹುದಲ್ಲವೇ" ಎಂದರು.

"ಇಲ್ಲಿ ಕಾದಿರುವ ನಿರಾಶೆಯನ್ನು ಎದುರಿಸುವ ಎದೆ ಅವನಿಗಿದ್ದರೆ ಸಾಕು" ಎಂದರು ವೇದಮ್ಮ ವ್ಯಾಕುಲದಿಂದ.

ಗಂಡ ಸಧ್ಯದಲ್ಲಿಯೇ ಬರುವನೆಂಬ ಸುದ್ದಿ ಭಾರತಿಯನ್ನು ಸುಖ, ದುಃಖದ ಮಡಿಲಿನಲ್ಲಿ ನೂಕಿತ್ತು. ಬಹಳ ದಿನಗಳಿಗೆ ಭೇಟಿಮಾಡುವ ಗಂಡನನ್ನು ನೋಡುವೆನೆಂಬ ಸಂತೋಷಕ್ಕಿಂತಲೂ ಅವಳಿಗೆ ದುಃಖ ಹೆಚ್ಚಾಗಿದ್ದಿತು. "ಹೇಗಾದರೂ ಅವರು ಬಂದರೆ ಸಾಕು. ನನ್ನ ಪಾಪವನ್ನೆಲ್ಲಾ ಅವರಿಗೆ ನಿವೇದಿಸಿ ಅವರು ಹೇಳಿದ ಹಾಗೆ ಮಾಡುತ್ತೇನೆ. ಅನಂತರ ನಾನೇ ಬೇಕಾದರೂ ಅವರಿಗೆ ಇನ್ನೊಂದು ಮದುವೆ ಮಾಡಿಕೊಳ್ಳಲು ಸೂಚಿಸುತ್ತೇನೆ......" ಮದುವೆ! ತಾನು ಪ್ರೀತಿಸುವ ವ್ಯಕ್ತಿಯನ್ನು ಬೇರೊಬ್ಬಳ ಪಾಲು ಮಾಡಬೇಕೆ?

ಕೂಡಲೇ ಭಾರತಿಯ ಹೃದಯ ಮತ್ಸರದಿಂದ ಕುದಿಯಿತು.

ಅವರು ತನ್ನನ್ನು ಮನೆಯಿಂದ ಕಳುಹಿಸಿದ ಮೇಲೆ ಹೋಗುವುದಾದರೂ ಎಲ್ಲಿಗೆ! ತಾಯಿಯ ಮನೆಗೆ ಹೋಗುವುದಂತೂ ಸಾಧ್ಯವಿಲ್ಲ ಹುಟ್ಟಿದ ವಂಶಕ್ಕೆ ಅಗೌರವ ತಂದ ವ್ಯಭಿಚಾರಿಣಿ ಪುನಃ ತವರಿಗೆ ಹೋಗುವುದು ಸರಿಯಲ್ಲ. ಗಂಡ ತನ್ನನ್ನು ಬಿಟ್ಟ ಮೇಲೆ ಜೀವನ ನಡೆಸುವುದಾದರೂ ಹೇಗೆ? ಜೀವನಾಂಶ ಕೊಡಬಹುದಲ್ಲವೇ' ಆಗ ಯಾವುದಾದರೂ ಆಶ್ರಮ ಸೇರಿ ಬಿಡುವುದು ಸರಿಯಾದ ಮಾರ್ಗ. ಜೀವನಾಂಶ! ಸಕಲ ಸೌಭಾಗ್ಯವಾಗಿದ್ದ ಗಂಡನಿಗೆ ಎರಡು ಬಗೆದು ಈ ಜೀವನಾಂಶದ ಯೋಚನೆ ಮಾಡುವ ಗತಿ ಬಂದಿದೆ ...

ಭಾರತಿ ತನ್ನ ದುರ್ಗತಿ ನೆನೆದು ಅತ್ತಳು.

ಆನಂದ ಬರುವ ದಿನ ಸಮೀಪವಾಗುತ್ತಿದ್ದಂತೆ ಭಾರತಿ ವಿಧ ವಿಧದಿಂದ ತನ್ನನ್ನು ತಾನೇ ಸಮಾಧಾನಮಾಡಿಕೊಂಡರೂ, ಅವಳಿಗೆ ಒಳಗೊಳಗೇ ಹೆದರಿಕೆಯಾಗುತ್ತಿತ್ತು. ಗಂಡ ತನ್ನನ್ನು ದಂಡಿಸಬಹುದಾಗಲಿ,

ಬಿಟ್ಟು ಬಿಡುವುದಾಗಲಿ ಹೆದರಿಕೆಯಿಲ್ಲದಿದ್ದರೂ ಗಂಡನ ವಿಷಯಕ್ಕೇ ಅವಳಿಗೆ ಭೀತಿಯುಂಟಾಗಿತ್ತು. ಈ ವಿಷಯ ಕೇಳಿ ಅವರ ಮನಸ್ಸಿಗೆಷ್ಟು ನೋವಾಗುವುದೋ, ಈ ಏಟು ಹೇಗೆ ಸಹಿಸುವರೋ ಎಂದು ಅವಳು ಹಗಲಿರುಳೂ ಕೊರಗುತ್ತಿದ್ದಳು. ಕುಳಿತಲ್ಲಿ ಕುಳಿತುಕೊಳ್ಳಲಾರದೆ, ನಿಂತಲ್ಲಿ ನಿಲ್ಲಲಾರದೆ, ಭ್ರಮಿಷ್ಟಳಂತೆ, ಪಂಜರಬದ್ಧ ಪಶುವಿನಂತೆ ಕೊಠಡಿಯನ್ನು ಸುತ್ತುತ್ತಿದ್ದಳು.

## ೨೧

ಟ್ರೈನು ಬರುವುದಕ್ಕೆ ಒಂದು ಗಂಟೆ ಮುಂಚಿತವಾಗಿ ರಂಗಣ್ಣನವರು ಸ್ಟೇಷನ್ನಿಗೆ ಬಂದರು. ಆನಂದನ ಸ್ನೇಹಿತರು ನಾಲ್ಕಾರು ಜನ ಗೆಳೆಯ ನನ್ನು ಎದುರುಗೊಳ್ಳಲು ನಿಲ್ದಾಣಕ್ಕೆ ಬಂದಿದ್ದರು. ರಂಗಣ್ಣನವರನ್ನು ನೋಡಿ ಎಲ್ಲರೂ ಅವರ ಬಳಿ ನಿಂತು ಮಾತನಾಡಿಸತೊಡಗಿದರು. ಆದರೆ ರಂಗಣ್ಣನವರಲ್ಲಿ ಮಗ ಬರುವನೆಂಬ ಉತ್ಸಾಹವಾಗಲೀ, ಆನಂದವಾಗಲೀ ಇರಲಿಲ್ಲ. ಮಗ ಬರುವನೆಂಬ ಉತ್ಸಾಹ ಸೊಸೆಯ ಅನಾಚಾರದಲ್ಲಿ ಮುಳುಗಿ ಹೋಗಿತ್ತು. ಅವಳ ಕೃತ್ಯವನ್ನು ಮಗನಿಗೆ ಹೇಳುವುದು ಹೇಗೆ ಎಂಬುದು ಒಂದು ದೊಡ್ಡ ಸಮಸ್ಯೆಯಾಗಿತ್ತು. 'ಎಲ್ಲಾ ಅವನಿಗೇ ಬಿಟ್ಟಿದೇನೆ. ಏನಾದರೂ ಮಾಡಿಕೊಳ್ಳಲಿ' ಎಂದು ಮನಸ್ಸು ಔದಾಸೀನ್ಯದ ಮುಸುಕು ಹಾಕಿಕೊಳ್ಳುತ್ತಿತ್ತು. ಆದರೂ ಆನಂದನಿಗೆ ಈ ವಿಚಾರ ತಿಳಿದ ಮೇಲೆ ಜೀವವೇ ಬೇಡವೆನಿಸಿದರೇನು ಗತಿ ಎಂಬ ದಿಗಿಲು ಅವರನ್ನು ಬೆಚ್ಚಿ ಬೀಳುವಂತೆ ಮಾಡುತ್ತಿತ್ತು.

ಆನಂದನ ಸ್ನೇಹಿತ ಗೋಪೀನಾಥ ರಂಗಣ್ಣನವರಿಗೆ ಹೇಳಿದ "ನಿಮ್ಮ ಮಗ ತುಂಬ ಅದೃಷ್ಟಶಾಲಿ, ಸರ್. ಇನ್ನು ಮುಂದೆ ದೊಡ್ಡ ಕೆಲಸವಾಗುತ್ತದೆ........" ಮಾತು ನಿಲ್ಲಿಸಿ ಪ್ರತ್ಯುತ್ತರ ನಿರೀಕ್ಷಿಸಿದ.

ಯಾವುದೋ ಯೋಚನೆಯಲ್ಲಿದ್ದ ರಂಗಣ್ಣನವರು 'ಆಂ ... ಹೂಂ ....' ಎಂದು ಗೊಣಗಿದರು.

"ಅಂದಹಾಗೆ ನಿಮ್ಮ ಸೊಸೆ ಯಾಕೆ ಬರಲಿಲ್ಲ"

ರಂಗಣ್ಣನವರು ಗೋಪೀನಾಥನನ್ನು ತೀಕ್ಷ್ಣವಾಗಿ ನೋಡಿದರು. ಅವನ ಮಾತು ವ್ಯಂಗ್ಯವಲ್ಲವಷ್ಟೆ?

"ಏಕೋ ಬರಲಿಲ್ಲ" ಎಂದು ತೇಲಿಸಿ ಉತ್ತರಕೊಟ್ಟರು.

ದೂರದಲ್ಲಿ ಟ್ರೈನಿನ ಹೊಗೆ ಕಾಣಿಸಿದೊಡನೆ ಕಳವಳ, ಸಂತೋಷ ಉಕ್ಕಿ ಬಂದವು ರಂಗಣ್ಣನವರಿಗೆ. ಗೋಪೀನಾಥ, ಸುಬ್ಬು, ವಾಸು ಉತ್ಸಾಹ

ದಿಂದ ಮುಂದೆ ಸರಿದರು. ರಂಗಣ್ಣನವರು ಮಾತ್ರ ನಿಂತಿದ್ದ ಜಾಗದಿಂದ ಕದಲಲಿಲ್ಲ.

ಆನಂದ ಸೆಕೆಂಡ್‌ಕ್ಲಾಸ್ ಕಂಪಾರ್ಟ್‌ಮೆಂಟಿನ ಬಾಗಿಲು ತೆಗೆದು, ಬಾಗಿಲಿನಲ್ಲಿ ಮುಗುಳುನಗೆ ಬೀರುತ್ತಾ ನಿಂತಿದ್ದ. ಟ್ರೈನು ನಿಲ್ಲುವುದಕ್ಕೆ ಮುಂಚೆಯೇ 'ಹಲೋ' ಎಂದು ಕೂಗಿ ಕೈಬೀಸಿದ ಗೆಳೆಯರಿಗೆ ಪ್ರತ್ಯುತ್ತರವಾಗಿ ಕೈಬೀಸಿದರೂ, ಅವನ ಕಣ್ಣುಗಳು ಹೆಂಡತಿಯನ್ನು ಹುಡುಕಿದವು. ಹೆಂಡತಿಯಾಗಲಿ, ತಂದೆಯಾಗಲಿ ಕಾಣದಿರಲು ಅವನ ಮುಖ ಸಪ್ಪಗಾಯಿತು. ಭಾರತಿ, ತಂದೆ ಬಾರದಿರಲು ಕಾರಣವೇನು? ಭಾರತಿ ಕಾಗದದಲ್ಲಿ ತಾನು ಸ್ಟೇಷನ್ನಿಗೆ ಬರುವುದಾಗಿ ಬರೆದಿದ್ದಳು. ಹುಷಾರಾಗಿದ್ದಾಳೋ ಇಲ್ಲವೋ? ಆನಂದ ಈ ಯೋಚನೆಯಲ್ಲಿರುವಾಗಲೇ ಟ್ರೈನು ನಿಂತಿತು.

ಅವನ ಸ್ನೇಹಿತರು ಓಡಿ ಬಂದು ಆನಂದನ ಕೈಕುಲುಕಿದರು. ಗೋಪೀನಾಥ ಹೂವಿನಹಾರ ಅವನ ಕೊರಳಿಗೆ ಹಾಕಿದ. ಸ್ನೇಹಿತರ ಗುಂಪಿನಿಂದ ನಾಲ್ಕು ಮಾರು ದೂರದಲ್ಲಿ ನಿಂತು ರಂಗಣ್ಣನವರು ಮಗನನ್ನೇ ದಿಟ್ಟಿಸಿ ನೋಡಿದರು. ಅವರಿಗೆ ಉತ್ಸಾಹದಿಂದ ಹಾರಿಹೋಗಿ ಅವನ ಕೈ ಹಿಡಿಯ ಬೇಕೆನಿಸಲಿಲ್ಲ.

"ಮಗು, ಮೈ ಕೈ ತುಂಬಿಕೊಂಡು ಚೆನ್ನಾಗಿ ಆಗಿದ್ದಾನೆ" ಎಂದುಕೊಂಡರು ಅವರು. ನಿಜಕ್ಕೂ ಆನಂದ ಮೊದಲಿಗಿಂತಲೂ ಲಕ್ಷಣವಾಗಿ ಕಾಣುತ್ತಿದ್ದ. ಇಂಗ್ಲೆಂಡಿನ ಹವ, ಆಹಾರದಿಂದಾಗಿ ಆನಂದನಿಗೆ ಮೈ ಬಂದಿತ್ತು. ಕೆನ್ನೆಗಳೆರಡೂ ತುಂಬಿಕೊಂಡಿದ್ದುವು. ಆನಂದ ಮೊದಲಿಗಿಂತಲೂ ಕೆಂಪಾಗಿದ್ದ. ಕಂದುಬಣ್ಣದ ಉಲ್ಲನ್ ಸೂಟಿನಲ್ಲಿದ್ದ ಆನಂದ ಆಕರ್ಷಣೀಯವಾಗಿ ಕಾಣುತ್ತಿದ್ದ.

ಸ್ನೇಹಿತರ ಕೈಯಲ್ಲಿ ಮಾತನಾಡುತ್ತಿದ್ದಾಗಲೇ ಅವನ [illegible] ಅಕಸ್ಮಾತ್ ಸ್ವಲ್ಪ ದೂರದಲ್ಲಿ ನಿಂತಿದ್ದ [illegible] ಮೇಲೆ ಬಿತ್ತು. [illegible] ಸಂತೋಷದಿಂದ ಅವನ ಕಣ್ಣುಗಳರಳಿದ[illegible] ಗೆಳೆಯರ ಗ[illegible] ತಂದೆಯ ಬಳಿ ಹಾರಿಬಂದು 'ಅಣ್ಣಾ, ಭಾರತಿ ಎಲ್ಲಿ' ಎಂದು ಕೇಳಿದ [illegible] ಉತ್ಸಾಹ, ಉಲ್ಲಾಸ ರಂಗಣ್ಣನವರನ್ನು ಅಣಕಿಸಿತು.

"ಭಾರತಿ ಬರಲಿಲ್ಲ"

"ಅದೇಕೆ? ಹುಷಾರಾಗಿದಾಳೆ ತಾನೆ? ಬರುತ್ತೀನಿ ಅಂತ ನನಗೆ ಕಾಗದ ಬರೆದಿದ್ದಳಲ್ಲಾ......" ಆನಂದ ಕಳವಳದಿಂದ ನುಡಿದ.

"ಹೂಂ. ಏನೋ ಬರಲಿಲ್ಲ. ನಡಿ ಹೋಗೋಣ" ರಂಗಣ್ಣನವರ

ಔದಾಸೀನ್ಯ ಆನಂದನ ಹೃದಯವನ್ನು ತಟ್ಟಿತು. ತಂದೆ ಅದೇಕೋ ಎಂದಿನಂತಿಲ್ಲವೆಂದು ಅವನಿಗೆ ತಿಳಿಯಿತು.

"ಗೋಪಿ, ಬರ್ತೀನಪ್ಪಾ ಪುನಃ ಸಿಗುತ್ತೇನೆ"

ಗೋಪಿ ಹಾಸ್ಯ ಮಾಡುತ್ತಾ "ಈಗಲೇ ನಮ್ಮ ಕೈಗೆ ನೀನೆಲ್ಲಿ ಸಿಗುತ್ತೀಯ? ಇನ್ನು ಒಂದು ತಿಂಗಳು ನೀನು ರಾಣೀಸಾಹೇಬರ ಜನಾನಾದಲ್ಲಿ ಸೆರೆಯಾಳು" ಎಂದ. ಉಳಿದವರು ಗೋಪಿಯ ಮಾತು ಕೇಳಿ ನಕ್ಕರು. ಆನಂದ ಹರ್ಷ, ಸಂಕೋಚದಿಂದ ಗೋಪಿಯ ಬೆನ್ನು ತಟ್ಟಿ,

"ಸರಿಯಾಗಿ ಊಹಿಸಿದೆ ಕಣಮ್ಮ" ಎಂದ.

ಆ ಮಾತು ಕೇಳಿ ರಂಗಣ್ಣನವರು ಬೇರೆ ಕಡೆ ಮುಖ ತಿರುಗಿಸಿದರು.

ರಂಗಣ್ಣನವರು ಜಟಕಾ ಸ್ಟಾಂಡ್ ಬಳಿ ಹೊರಟಿದುದನ್ನು ಕಂಡು ಆನಂದ ತಂದೆಯನ್ನು ತಡೆದು "ಜಟಕಾ ಬೇಡಣ್ಣ. ತುಂಬಾ ನಿಧಾನವಾಗುತ್ತದೆ. ಟ್ಯಾಕ್ಸಿಯಲ್ಲಿ ಹೋಗೋಣ" ಎಂದು ಟ್ಯಾಕ್ಸಿ ಗೊತ್ತುಮಾಡಿದ. ಟ್ಯಾಕ್ಸಿಯಲ್ಲಿ ರಂಗಣ್ಣನವರು ಒಂದು ಬಾರಿ ಮಗನ ಆರೋಗ್ಯ ವಿಚಾರಿಸಿ ಸುಮ್ಮನಾದರು. ಪುನಃ ಬಾಯಿ ತೆರೆಯಲಿಲ್ಲ.

"ಇದೇಕೆ, ಹೀಗೆ............" ಎನ್ನುವಂತೆ ಆನಂದ ತಂದೆಯ ಕಡೆ ನೋಡಿದ. ಟ್ಯಾಕ್ಸಿ ಮನೆಯ ಮುಂದೆ ನಿಂತ ಕೂಡಲೇ ಆನಂದ ಕೆಳಗೆ ಧುಮುಕಿದ. ವೇದಮ್ಮ ಮುಂಬಾಗಿಲಿನಲ್ಲಿ ನಿಂತಿದ್ದರು. ಮಗನನ್ನು ಕಂಡ ಕೂಡಲೇ ಅವರು ನಕ್ಕು ಎರಡು ಹೆಜ್ಜೆ ಮುಂದೆ ಬಂದರು. ಮುಖದ ಮೇಲಿದ್ದ ದುಗುಡ, ದುಃಖದೊಡನೆ ಬೆರೆತ ಆ ಕೃತಕ ನಗು ತೆರೆದ ಪುಸ್ತಕದಂತೆ ಆನಂದನಿಗೆ ಗೋಚರವಾಯಿತು. ಕಣ್ಣುಗಳು ಒಳ ಬಾಗಿಲಿನ ಕಡೆ ನೋಡಿದವು. ಮನೆಯಲ್ಲಿ ತಾಯಿ, ತಂದೆಯನ್ನು ಬಿಟ್ಟು ಬೇರೊಬ್ಬರ ಸುಳಿವೇ ಇದ್ದಂತೆ ತೋರಲಿಲ್ಲ. ಹಾಗಾದರೆ ಭಾರತಿ ತೌರುಮನೆಗೇನಾದರೂ ಹೋಗಿರುವಳೇ? ಆನಂದನಿಗೆ ಸಿಟ್ಟೇರಿತು. ತಾನು ಬರುವುದನ್ನು ಕೇಳಿಯೂ ತಾಯಿಯ ಮನೆಗೆ ಹೋಗಬೇಕೇ? ಇಲ್ಲವೆ ಒಳಗೆಲ್ಲಿಯಾದರೂ ಅಡಗಿ ಕುಳಿತು ತನ್ನನ್ನು ಪರೀಕ್ಷೆ ಮಾಡುತ್ತಿರುವಳೇ?

ವೇದಮ್ಮ ಮಗನ ತಲೆ ಸವರುತ್ತಾ 'ಹುಷಾರಾಗಿದೀಯಾಪ್ಪ' ಎಂದರು.

ತಾಯಿಯ ಪ್ರಶ್ನೆ ಮಗನ ಕಿವಿಗೆ ಬೀಳಲಿಲ್ಲ. 'ಅಮ್ಮ, ಭಾರತಿ ಎಲ್ಲಿ?"

"ಮಹಡಿಯ ಮೇಲಿರಬೇಕು"

ಆನಂದ ನಾಲ್ಕು ಮೆಟ್ಟಲುಗಳನ್ನು ಒಂದು ಬಾರಿಗೆ ಹಾರುತ್ತಾ

ಮೇಲೆ ಹೋದ. ರೂಮಿನ ಬಾಗಿಲು ಮುಂದೆ ಮಾಡಿತ್ತು.

"ಭಾರತೀ........"ಎಂದು ಕೂಗುತ್ತಾ ಬಾಗಿಲು ತಳ್ಳಿದ. ಭಾರತಿ ತಲೆ ತಗ್ಗಿಸಿ ಒಂದು ಮೂಲೆಯಲ್ಲಿ ನಿಂತಿದ್ದಳು. ಆನಂದನ ಬಾಯಿಂದ ಮಾತು ಹೊರಡಲಿಲ್ಲ. ಗರಬಡಿದವನಂತೆ ಹೆಂಡತಿಯನ್ನೇ ನೋಡುತ್ತಾ ನಿಂತುಬಿಟ್ಟ.

ಎದುರಿಗೆ ನಿಂತಿದ್ದವಳು ಭಾರತಿಯೇ ಹೌದೋ, ಅಲ್ಲವೋ ಎಂದು ಸಂದೇಹವಾಯಿತು ಆನಂದನಿಗೆ.

ಹಿಂದಿನ ಭಾರತಿಗೂ, ಈಗಿನ ಭಾರತಿಗೂ ಸ್ವಲ್ಪವೂ ಹೋಲಿಕೆಯಿರಲಿಲ್ಲ. ಆಕಾಶದಲ್ಲಿ ಹಾರಾಡುವ ಹಕ್ಕಿಯಂತಿದ್ದ ಭಾರತಿ ಈಗ ರೆಕ್ಕೆ ಮುರಿದು, ಗಾಯ ಹೊಂದಿ ನೆಲದ ಮೇಲೆ ಬಿದ್ದು ಹೊರಳಾಡುವ ಪಕ್ಷಿಯಂತಿದ್ದಳು. ಆನಂದ ಕೆಲವು ಕ್ಷಣ ಮಾತನಾಡದೇ ಅವಳನ್ನೇ ದಿಟ್ಟಿಸಿ ನೋಡಿದ.

"ಭಾರತಿ ......."

ಭಾರತಿ ನಿದಾನವಾಗಿ ತಲೆ ಎತ್ತಿದಳು. ಅವಳ ಎರಡು ಕಣ್ಣುಗಳಿಂದಲೂ ನೀರು ಹರಿಯುತ್ತಿತ್ತು. ಆನಂದ ಚಕಿತನಾದ.

"ಭಾರತಿ ನಿನಗೇನಾಗಿದೆ? ನಾನು ಬಂದಾಗಲೂ ನೀನು ಅಳಬೇಕೇ? ನೀನೇಕೆ ಹೀಗಾಗಿರುವೆ .......?" ಎನ್ನುತ್ತಾ ಹತ್ತಿರ ಬಂದ. ಅವಳ ಗಲ್ಲ ಹಿಡಿದು ಮುಖ ತನ್ನ ಕಡೆ ತಿರುಗಿಸಿಕೊಂಡ. ಭಾರತಿ ಮುಖ ತಿರುಗಿಸಿ ತನ್ನೆರಡು ಕೈಗಳಿಂದಲೂ ಮುಖ ಮುಚ್ಚಿಕೊಂಡಳು.

"ಭಾರತಿ .... ಇಲ್ಲಿ ನೋಡು ... ಭಾರತಿ ..."

"ಮಗೂ.... ..." ತಾಯಿಯ ದನಿ ಕೆಳಗಿನಿಂದ ಕೇಳಿಸಿತು. ಆನಂದ ಆತುರದಿಂದ 'ಭಾರತೀ ಚಿನ್ನ....ಸ್ವಲ್ಪ ..'

"ಆನಂದ, ಸ್ವಲ್ಪ ಬಾ ಇಲ್ಲಿ" ತಾಯಿ ಮತ್ತೊಮ್ಮೆ ಕೂಗಿದರು.

ಆನಂದ ಭಾರತಿಯನ್ನು ಬಿಟ್ಟು ಸ್ವಲ್ಪ ದೂರ ನಿಂತು ಅವಳ ಕಡೆ ನೋಡಿದ. ಭಾರತಿ ಮುಖದಿಂದ ಕೈ ತೆಗೆದಿರಲಿಲ್ಲ. ಬೆರಳುಗಳ ಸಂದಿಯಿಂದ ನೀರು ಹರಿದು ಬರುತ್ತಿತ್ತು. ಅವಳ ಕೈಗಳಿಗೆ ಹತ್ತಿಕೊಂಡಿದ್ದ ಚಿನ್ನದ ಬಳೆ ಮೊಣಕೈ ಬಳಿ ಸರಿದಿತ್ತು. ಬೆರಳಿನ ಮೂಳೆಗಳು ಎದ್ದು ಕಾಣುತ್ತಿದ್ದವು.

"ಆನಂದ........" ವೇದಮ್ಮ ಪುನಃ ಕೂಗಿದರು.

ಆನಂದ ಭಾರವಾದ ಮನಸ್ಸಿನಿಂದ ಕೆಳಗಿಳಿದು ಹೋದ. ಆನಂದ

ಕೆಳಗೆ ಬಂದ ಕೂಡಲೇ ತಾಯಿ ಹೇಳಿದರು.

"ಮಗು, ಬಟ್ಟೆ ಬಿಚ್ಚಿ ಬಾ ಊಟ ಮಾಡುವಿಯಂತೆ. ನಿನಗೆ ಇಷ್ಟವಾದ ಹುರುಳೀಕಾಯಿಪಲ್ಯ, ಆಲೂಗೆಡ್ಡೆ ಹುಳಿ ಮಾಡಿದೀನಿ."

ಆನಂದ ದಿಕ್ಕುತೋಚದೆ ತಾಯಿಯ ಕಡೆ ನೋಡಿದ. ಮರೆತು ತಾನು ಬೇರೆಯವರ ಮನೆಗೆ ಬಂದಿಲ್ಲವಷ್ಟೆ? ಸಂತೋಷ ತುಂಬಿ ತುಳುಕುತ್ತಿದ್ದ ಮನೆಯಲ್ಲಿ ವಿಚಿತ್ರ ಮೌನ ರಾಜ್ಯವಾಳುತ್ತಿತ್ತು. ಎಲ್ಲರ ಮುಖಗಳೂ ಆನಂದನಿಗೆ ವಿಚಿತ್ರವಾಗಿ ಕಂಡವು. ಮನೆಯವರು ಹಿಂದಿನಂತೆ ನಲಿಗೆಯಿಂದಿರದೆ ಏನೋ ಒಂದು ಬಗೆಯಾಗಿದ್ದರು.

ರಂಗಣ್ಣನವರು ರೂಮಿನ ಬಾಗಿಲು ಹಾಕಿಕೊಂಡು ಮಲಗಿಬಿಟ್ಟಿದ್ದರು. ಆನಂದ ಮುಚ್ಚಿದ ಬಾಗಿಲನ್ನು ನೋಡಿ ತಾಯಿಯ ಕಡೆ ನೋಡಿದ.

"ಅಮ್ಮ, ನೀನಾದರೂ ಇರುವ ಸಂಗತಿ ತಿಳಿಸಮ್ಮ, ನನ್ನಾಣೆಯಿದೆ. ಭಾರತಿ ಏಕೆ ಹಾಗಿದ್ದಾಳೆ? ಮಾತನಾಡಿಸಿದರೆ ಯಾಕೋ ಮಾತೇ ಆಡೋದಿಲ್ಲ. ಸುಮ್ಮನೆ ಅಳುತ್ತಾಳೆ. ಅವಳಿಗೇನಾಗಿದೆ?........" ಆನಂದ ದೈನ್ಯದಿಂದ ಬೇಡಿದ.

"ಮೊದಲು ನೀನು ಊಟ ಮಾಡು. ಉಳಿದ ವಿಷಯ ಆಮೇಲಾಗಲಿ" ವೇದನ್ನು ಅಪ್ಪಣೆ ಕೊಡುವ ಧ್ವನಿಯಲ್ಲಿ ಹೇಳಿದರು.

ಆನಂದ ಮರುಮಾತನಾಡದೇ ಊಟಕ್ಕೆ ಕುಳಿತ. ಒಂದು ತುತ್ತೂ ಗಂಟಲಿನಲ್ಲಿ ಇಳಿಯಲಿಲ್ಲ.

ಅಬ್ಬ! ಆತನು ತನ್ನ ಮನೆಯವರನ್ನು ನೋಡಲು ಅದೆಷ್ಟು ಆತುರದಿಂದ ಇದ್ದ! ತಂದೆ, ಹೆಂಡತಿ ತನ್ನನ್ನು ಎದುರುಗೊಳ್ಳಲು ಬೊಂಬಾಯಿಗೆ ಬರಬಹುದೆಂದುಕೊಂಡಿದ್ದ. ಅವರು ಬೊಂಬಾಯಿಗೆ ಬರವುದಿಲ್ಲವೆಂದು ತಿಳಿದಾಗಲೇ ಆತನ ಉತ್ಸಾಹಕ್ಕೆ ತಣ್ಣೀರೆರಚಿದ ತಾಗಿತ್ತು. ಏನು ಅನಾನುಕೂಲವಾಯಿತೋ ಎಂದು ತಾನೇ ಸಮಾಧಾನಮಾಡಿಕೊಂಡಿದ್ದ. ಬೊಂಬಾಯಿಯಿಂದ ಬೆಂಗಳೂರಿಗೆ ಹೊರಟಾಗ ಅದೆಷ್ಟು ಬಣ್ಣದ ಕನಸು ಕಟ್ಟಿದ್ದ! ಬೆಂಗಳೂರು ಸಮೀಪಿಸುತ್ತಿದ್ದಂತೆ ಭಾರತಿಯನ್ನು ಅದೆಷ್ಟು ಭಂಗಿಯಲ್ಲಿ ಚಿತ್ರಿಸಿಕೊಂಡಿದ್ದ! ತನಗಿಷ್ಟವಾದ ನೇರಿಳೆ ಬಣ್ಣದ ಜಾರ್ಜೆಟ್ ಸೀರೆ ಉಟ್ಟು, ಬಿಳೀ ಸ್ಯಾಟಿನ್ ಜೋಲ ಹಾಕಿ, ಕೈಲಿ ವ್ಯಾನಿಟಿಬ್ಯಾಗ್ ಹಿಡಿದು, ಹೆರಳುಹಾಕಿ ಹೂ ಮುಡಿದು ನಿಂತಿದ್ದ ಭಾರತಿಯ ಚಿತ್ರ ಅವನ ಒಳಗಣ್ಣಿಗೆ ಕಾಣಿಸುತ್ತಿತ್ತು. ಅವಳು ಅದೆಷ್ಟು ಆತುರದಿಂದ ತನ್ನನ್ನು ನಿರೀಕ್ಷಿಸುತ್ತಿರಬಹುದು! ಕಣ್ಣಿನಲ್ಲಿ ಉಲ್ಲಾಸದ ಹೊಳೆ ಹರಿಯಿಸಿ, ಸ್ನೇಹದ ಮಿಂಚು

ಮಿನುಗಿಸುತ್ತಾ, ತುಟಿಯರಳಿಸಿ ಬೆಡಗಿನಿಂದ ತನ್ನನ್ನು ಎದುರು ನೋಡು ತ್ತಿರಬಹುದಲ್ಲವೇ ?

ನಿಲ್ದಾಣದಲ್ಲಿ, ಮನೆಯ ಬಾಗಿಲಿನಲ್ಲಿ ಹೆಂಡತಿಯನ್ನು ಕಾಣದೇ ಅವನ ಉತ್ಸಾಹ ಕುಗ್ಗಿಹೋಯಿತು. ಅನಂತರ ಅವಳ ವೇಷ, ಭೂಷಣ, ಸ್ಥಿತಿ ನೋಡಿ ದಿಗ್ಭ್ರಾಂತನಾದ. ತಾನು ಬರುವ ದಿನವಾದರೂ ಒಂದು ಒಳ್ಳೇ ಸೀರೆ ಬೇಡವೇ? ಕೊನೆಗೆ ಶುಭ್ರವಾದ ಚೀಟಿಯ ಸೀರೆ! ಭಾರತಿ ಕೊಳೆಯಾಗಿದ್ದ ಚೀಟಿ ಸೀರೆ ಉಟ್ಟಿದ್ದಳು. ತಲೆ ಕೆದರಿತ್ತು. ಆನಂದನಿಗೆ ಯಾವುದೂ ಅರ್ಥವಾಗಲಿಲ್ಲ.

ಊಟ ಮುಗಿದ ಕೂಡಲೇ ಆನಂದ ತಾಯಿಗೆ 'ಅಮ್ಮ, ಈಗಲಾ ದರೂ ಹೇಳು. ಇನ್ನು ತಡಮಾಡಿ ನನ್ನ ಕೊಲ್ಲಬೇಡ' ಎಂದು ಅಂಗಲಾಚಿದ.

ವೇದಮ್ಮ ಮುಖಕ್ಕೆ ಸೆರಗು ಹಚ್ಚಿ ಅಳತೊಡಗಿದರು. ತಾಯಿಯ ಅರ್ಥವಿಹೀನ ಅಳು ಆನಂದನನ್ನು ಗಾಬರಿಗೊಳಿಸಿತು.

"ಏನಾಯಿತಮ್ಮ? ಹೇಳಬಾರದೇ ?"

ವೇದಮ್ಮ ಅಳುವನ್ನು ಆಗಾಗ್ಗೆ ನುಂಗುತ್ತಾ ಹೇಳಿದರು 'ಇವಳನ್ನು ಮಗಳು ಅಂತ ಭಾವಿಸಿದ್ದೆ. ಹೆಂಡತಿ ಎಂದರೆ ಪ್ರಾಣಕ್ಕಿಂತಲೂ ಹೆಚ್ಚಾಗಿ ........ನೀನು ಪ್ರೀತಿಸುತ್ತಿದ್ದೆ........ಎಲ್ಲರನ್ನೂ ಒಂದೇ ಸಲ ಮುಳುಗಿಸಿ ಬಿಟ್ಟಳು........ಚಂದುವಿನೊಡನೆ ಹಾದರ....'

"ಏನು !" ಆನಂದ ಸಿಡಿದೆದ್ದ. ಅವನ ಸರ್ವಾಂಗವೂ ಕಂಪಿಸುತ್ತಿತ್ತು.

"ಅಮ್ಮ, ನಿನ್ನ ನಾಲಗೆ ಹತೋಟಿಯಲ್ಲಿರಲಿ" ಆನಂದನ ದನಿ ಕಠೋರ ವಾಗಿತ್ತು. ಅವನು ತಾಯಿಯನ್ನು ಎಂದೂ ಇಷ್ಟು ಬಿರುಸಾಗಿ, ಒರಟಾಗಿ ಮಾತನಾಡಿಸಿರಲಿಲ್ಲ. ವೇದಮ್ಮನವರಿಗೆ ಮಗನ ಮೃದು ಸ್ವಭಾವದ ಪರಿ ಚಯವಾಗಿತ್ತೇ ಹೊರತು ಈ ಆವೇಶದ ಮೂರ್ತಿಯ ಪರಿಚಯವಿರಲಿಲ್ಲ. ಆನಂದನ ದನಿ ಕೇಳಿ ವೇದಮ್ಮನವರು ಚಕಿತರಾಗಿ ತಲೆ ಎತ್ತಿ ನೋಡಿದರು.

ಆನಂದನ ಮುಖದಲ್ಲಿ ಶಿಲೆಯ ಕಾಠಿಣ್ಯವಿತ್ತು. ಅವನ ಹಲ್ಲುಗಳು ಉಕ್ಕಿಬಂದ ಕೋಪದಲ್ಲಿ ಕೆಳದುಟಿಯನ್ನು ಕಚ್ಚಿದ್ದವು. ಕಣ್ಣುಗಳು ರೌದ್ರ ವಾಗಿದ್ದವು ಅವನ ಸ್ವರೂಪ, ಬಾಲದ ಮೇಲೆ ಮಲಗಿ ಅರ್ಧ ದೇಹ ಮೇಲೆತ್ತಿ ಹೆಡೆ ಬಿಚ್ಚಿ ಬುಸುಗುಟ್ಟುತ್ತಾ, ಇನ್ನೇನು ಶತ್ರುವನ್ನು ತನ್ನ ಹೆಡೆ ಯಿಂದ ಅಪ್ಪಳಿಸಲಿರುವ ಸರ್ಪದ ನೆನಪನ್ನು ತರುತ್ತಿತ್ತು.

ಅವನ ಸ್ವರೂಪ ನೋಡಿ ಬೆದರಿ ವೇದಮ್ಮ ಹಿಂದೆ ಸರಿದರು. ಬಾಯಿ ಬತ್ತಿಹೋಯಿತು. ತಾಯಿ, ಮಗ ಒಂದು ಗಳಿಗೆ ಒಬ್ಬರನ್ನೊಬ್ಬರು

ದಿಟ್ಟಿಸಿ ನೋಡಿದರು. ಚೈತನ್ಯ ತಂದುಕೊಂಡು ವೇದಮ್ಮನವರೇ ಮೊದಲು ಮಾತನಾಡಿದರು.

"ಮಗೂ, ಸುಳ್ಳು ಹೇಳುವುದರಿಂದ ನನಗಾಗುವ ಲಾಭವೇನಪ್ಪಾ?"

ಅಷ್ಟು ಹೇಳುವ ಹೊತ್ತಿಗೆ ಅವರ ದೇಹ ಬೆವರಿಹೋಯಿತು. ಅವರ ಮಾತು ಪೂರ್ತಿಯಾದ ಕೂಡಲೇ ಆನಂದ ತಟ್ಟನೆ ಹೊರಗೆ ಬಂದ. ಅವನು ಮಹಡಿ ಹತ್ತಿದ ರಭಸಕ್ಕೆ ಮನೆಯೆಲ್ಲಾ ಅದುರಿ ಪ್ರತಿಧ್ವನಿಸಿತು.

ಆನಂದ ಬಿರುಗಾಳಿಯಂತೆ ರೂಮಿನೊಳಗೆ ನುಗ್ಗಿ ಭಾರತಿಯ ಕಡೆ ನೋಡಿದ.

"ಅಮ್ಮ ಹೇಳುವುದು ನಿಜವೇ?" ಅವನ ಧ್ವನಿಯಲ್ಲಡಗಿದ್ದ ಗಡಸು ಭಾರತಿಯ ಕಿವಿಗೆ ಕಾದ ಸೀಸದಂತಿತ್ತು. ಭಾರತಿ ಉತ್ತರ ಕೊಡವೇ ತಲೆಯನ್ನು ಮತ್ತಷ್ಟು ತಗ್ಗಿಸಿದಳು. ಹೆಂಡತಿ ಮಾತನಾಡದಿರುವುದನ್ನು ನೋಡಿ ಆನಂದ ಕಿಡಿಯಾದ.

"ನಿನಗೆ ಮಾತನಾಡಲು ಬರುವುದಿಲ್ಲವೇ?"

ಪುನಃ ಮೌನ ಅವನನ್ನಣಕಿಸಿತು. ಆನಂದ ಭಾರತಿಯ ಹತ್ತಿರ ಧಾವಿಸಿ ಬಂದ. ಅವನ ಕಣ್ಣುಗಳಲ್ಲಿ ಕೊಲೆಯಿತ್ತು.

"ಪಾಪಿ" ಎನ್ನುತ್ತಾ ಭಾರತಿಯ ಕೆನ್ನೆಯ ಮೇಲೆ ಬಲವಾಗಿ ಹೊಡೆದ. ಅವನ ಐದು ಬೆರಳುಗಳೂ ರಕ್ತರಹಿತವಾಗಿದ್ದ ಕೆನ್ನೆಯ ಮೇಲೆ ಮೂಡಿದವು. ಭಾರತಿ ತಲೆ ಎತ್ತಿ ಆನಂದನ ಮುಖ ನೋಡಿ 'ನನ್ನ ತಪ್ಪಿಗೆ ಈ ಶಿಕ್ಷೆ ಸಾಲದು' ಎಂದಳು. ಅವಳ ಕಣ್ಣಾಲಿಗಳು ನೀರಿನಲ್ಲಿ ತೇಲುತ್ತಿದ್ದವು. ಆ ಮಾತು ಕೇಳಿ ಅವನ ಆವೇಶ ಒಂದೇ ಬಾರಿಗೆ ಇಳಿದುಹೋಯಿತು. ಅವನ ಕೋಪ ಒಂದೇ ಏಟಿನಲ್ಲಿ ಮುಕ್ತಾಯವಾಯಿತು. ಕೋಪದ ಬದಲು ದುಃಖ ಅವನಲ್ಲಿ ಮನೆ ಮಾಡಿತು. ಆನಂದ ಕುರ್ಚಿಯ ಮೇಲೆ ದೊಪ್ಪನೆ ಕುಸಿದು ಬಿದ್ದು ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡ. ಭಾರತಿ ಗಂಡನ ಕಡೆ ಕರುಣೆಯಿಂದ ನೋಡಿದಳು. ಆನಂದ ಐದು ನಿಮಿಷ ಹಾಗೆಯೇ ಕುಳಿತಿದ್ದು, ಅನಂತರ ದೈನ್ಯನಾಗಿ ಕೇಳಿದ.

"ಅಯ್ಯೋ! ಭಾರತಿ, ಹಾಗೇಕೆ ಮಾಡಿದೆ? ನನ್ನ ಪ್ರೇಮ ನಿನಗೆ ಸಾಕಾಗಿರಲಿಲ್ಲವೇ? ನಾನು ನಿನ್ನನ್ನು ಸಾಕಷ್ಟು ಪ್ರೀತಿಸಲಿಲ್ಲವೇ!"

ಮ್ಲಾನ ವದನದಲ್ಲಿ ವಿಷಾದದ ನಗು ಮೂಡಿತು.

'ಪ್ರೇಮ! ನಾನು ಪ್ರೇಮಕ್ಕಾಗಿ ಹಾಗೆ ಮಾಡಲಿಲ್ಲ. ದಾಂಪತ್ಯದ ಹೊಸ ಬಾಳಿನಲ್ಲಿ ನನಗೆ ತೃಪ್ತಿ ಸಿಕ್ಕಿರಲಿಲ್ಲ. ವಿರಹದ ಕಿಚ್ಚಿನಲ್ಲಿ ಬೆಂದು,

ನಿಸರ್ಗದೊಡನೆ ಹೋರಾಡುತ್ತಿರುವಾಗಲೇ............ಆತ ಬಂದ. ಹೆಜ್ಜೆ ಹೆಜ್ಜೆಗೂ ನನ್ನನ್ನು ಕೆಣಕಿದ. ಕೆರಳಿದ ಲಾಲನೆಯನ್ನು ದಮನ ಮಾಡಲು ಯತ್ನಿಸಿದೆ. ಆದರೆ ನಿಸರ್ಗದ ಕರೆಯ ಮುಂದೆ ನನ್ನ ಸಂಯಮ ಓಮ್ಮೆ ಟ್ಟಿತು. ನನ್ನ ದೇಹ ಪತಿತವಾಯಿತು. ವಿಧಿ ರಚಿಸಿದ್ದ ಸನ್ನಿವೇಶಗಳಿಗೆ ಬಲಿಯಾದೆ. ಆತ ತನ್ನೊಡನೆ ನನ್ನನ್ನು ಕರೆದೊಯ್ಯಲು ಸಿದ್ಧನಾಗಿದ್ದ. ಆದರೆ ನಾನು ನಿರಾಕರಿಸಿದೆ. ನಿಮ್ಮ ಕ್ಷಮೆ ನನಗೆ ಅವಶ್ಯಕವಾಗಿತ್ತು. ನಾನು ನನ್ನ ತಪ್ಪನ್ನು ಸಮರ್ಥಿಸುತ್ತಿಲ್ಲ. ನನ್ನನ್ನು ಸ್ವೀಕರಿಸಿ ಎಂದು ಕೇಳಿಕೊಳ್ಳುತ್ತಿಲ್ಲ. ನಿಮ್ಮ ಕ್ಷಮೆಯೊಂದು ನನಗೆ ಸಿಕ್ಕಿದರೆ ಸಾಕು. ಹಿರಿಯರ ಆಶೀರ್ವಾದದೊಡನೆ ಗುಣ, ನಡತೆಯಲ್ಲಿ ನಿಮಗನುರೂಪಳಾದ ....ಹೌದು ನಿಮಗೆ ಸರಿಯಾದ ಹುಡುಗಿಯ ಕೈಹಿಡಿದು ಸುಖವಾಗಿ ಬಾಳಿ. ನಾನು ನಿಮ್ಮ ಜೀವನದಲ್ಲಿ ದುಸ್ವಪ್ನವೆಂದು ತಿಳಿದು ಮರೆತುಬಿಡಿ. ಆದರೆ ಒಂದು ಮಾತ್ರ ನಿಮ್ಮ ನೆನಪಿನಲ್ಲಿರಲಿ. ನನ್ನ ದೇಹ ಪತಿತವಾಗಿದ್ದರೂ ಮನಸ್ಸು ನಿಮ್ಮದು. ನನ್ನ ಹೃದಯದ ಪ್ರೇಮ ಎಂದೆಂದಿಗೂ ನಿಮ್ಮದು ..... .....' ಭಾರತಿಗೆ ಗಂಟಲುಬ್ಬಿ ಬಂತು.

"ಈ ಮನೆಯಿಂದ ಹೊರಡಲು ನನಗೆ ಅನುಮತಿ ಕೊಡಿ"

ಆನಂದ ಹೆಂಡತಿಯ ಕಡೆ ನೋಡಿದ. "ಎಲ್ಲಿಗೆ ಹೋಗುತ್ತೀಯ ಭಾರತಿ? ತಾಯಿಯ ಮನೆಗೆ?"

"ಊಹೂಂ. ಎಲ್ಲಿಗಾದರೂ ಹೋಗುತ್ತೇನೆ"

"ಜೀವನಕ್ಕೆ.......... ..........?"

"ಅದರ ಯೋಚನೆ ನನಗಿಲ್ಲ"

ಆನಂದ ನೆಲ ನೋಡುತ್ತ ಸುಮ್ಮನೆ ಕುಳಿತ. ಅವನ ಮನಸ್ಸು ಏನೋ ಒಂದು ಅಳುಕು, ಕಳವಳದ ಸುಳಿಗೆ ಸಿಕ್ಕಿ ಗಿರ್ರನೆ ತಿರುಗತೊಡ ಗಿತು. ಕಣ್ಣು ಕತ್ತಲಿಟ್ಟಿತು. ಆನಂದ ತತ್ತರಿಸುತ್ತ ಎದ್ದು ನಿಂತ.

"ನಾನು ಹೋಗಬಹುದೇ?" ಭಾರತಿ ಮೃದುವಾಗಿ ಕೇಳಿದಳು.

"ನನಗೆ ಯೋಚಿಸಲು ಅವಕಾಶ ಕೊಡು" ಎನ್ನುತ್ತ ಆನಂದ ಹೊರಗೆ ಬಂದ. ಮಹಡಿಯ ಕಟಕಟೆ ಹಿಡಿದು ತೂರಾಡುತ್ತಾ ಕೆಳಗಿಳಿದು ಬಂದು ರೂಮಿನ ಬಾಗಿಲನ್ನು ಹಾಕಿಕೊಂಡ. ಸಿಗರೇಟನ್ನು ಬಾಯಲ್ಲಿ ಕಚ್ಚಿ ಬೆಂಕಿ ಹೊತ್ತಿಸಿದ. ಸುರುಳಿ ಸುರುಳಿಯಾಗಿ ಹೊಗೆ ಮೇಲೇಳತೊಡಗಿತು. ಆನಂದನ ಮನಸ್ಸು ಮತ್ತೆ ಲಂಡನ್ನಿಗೆ ಹಾರಿತು. ಅಂದು........

## ೨೩

ಕಾರ್ಖಾನೆಯಿಂದ ಮನೆಗೆ ಹೊರಟಾಗ ಆನಂದನ ಮನಸ್ಸು ಉಲ್ಲಾಸ ದಿಂದ ನಲಿದಾಡುತ್ತಿತ್ತು. ಕ್ರಿಸ್‌ಮಸ್ ಮತ್ತು ಹೊಸ ವರ್ಷದ ಸ್ವಾಗತ ಕ್ಕಾಗಿ ಹದಿನೈದು ದಿನ ರಜ ಸಿಕ್ಕಿತ್ತು. ಇನ್ನು ಹದಿನೈದು ದಿನ ಮೊದಲಿ ನಂತೆ ದೇಹದ ರಕ್ತ ಹೆಪ್ಪು ಕಟ್ಟಿಸುವ ಚಳಿಯಲ್ಲಿ ಎದ್ದು 'ಬ್ರೆಕ್‌ಫಾಸ್ಟ್' ಮುಗಿಸಿ ಕಾರ್ಖಾನೆಗೆ ಹೊರಡಬೇಕಾಗಿರಲಿಲ್ಲ. ಅಬ್ಬ! ಆ ಚಳಿ! ಆ ಮಂಜು! ಮನೆಗಳ ಮೇಲೆ, ರಸ್ತೆಗಳ ಮೇಲೆ ಆಳೆತ್ತರದ ಹಿಮ ಸುರಿದು ನಿಂತಿರುತ್ತಿತ್ತು. ಇನ್ನು ಹದಿನೈದು ದಿನ ಇಷ್ಟು ಹೊತ್ತಿಗೇ ಏಳಬೇಕೆಂಬ ನಿಯಮವಿಲ್ಲ. ಬೆಂಕಿಯ ಮುಂದೆ ಕುಳಿತು ಮೈ ಕೈ ಕಾಸಿಕೊಳ್ಳಬಹುದು. ಬಿಸಿನೀರಿನ ಚೀಲಗಳನ್ನು ಮೈಮೇಲಿರಿಸಿಕೊಂಡು ಬೆಚ್ಚಗೆ ಮಲಗಬಹುದು.

ಆನಂದ ರೂಮಿನೊಳಗೆ ಬಂದ. ಟೀ ಮಾಡಿಕೊಂಡು ಕುಡಿದ. ಮೇಜಿನ ಮೇಲೆ ಕಾಲು ನೀಡಿ ಕುಳಿತ. ಇಂಗ್ಲೆಂಡಿಗೆ ಬಂದಾಗಿನಿಂದಲೂ ಭಾರತಿಯ ನೆನಪು ಅವನನ್ನು ಕೊರೆಯುತ್ತಿತ್ತು. ಅವಳ ಸಾಮೀಪ್ಯವನ್ನು ಅವನ ತರುಣ ದೇಹ ಬಯಸುತ್ತಿತ್ತು. ಆನಂದ ತನ್ನ ಬಯಕೆಗಳನ್ನು ಅದುಮಲು ಪ್ರಯತ್ನಿಸಿದಷ್ಟೂ, ಅವನ ಬಯಕೆಗಳು ಕೆರಳಿ ಹೆಡೆಯೆತ್ತಿ ನಿಲ್ಲುತ್ತಿದ್ದವು. ದೈಹಿಕ ಆಕರ್ಷಣೆ ಅಂಗಾಂಗಗಳನ್ನೆಲ್ಲಾ ವ್ಯಾಪಿಸಿ ಉರಿ ಯುತ್ತಿತ್ತು. ಕೈ ಹಿಡಿದ ಹೆಂಡತಿಗೆ ದ್ರೋಹ ಮಾಡಲು ಮನಸ್ಸು ಒಪ್ಪಲಿಲ್ಲ. ಭಾರತಿಯ ಮೇಲಿದ್ದ ಅತಿಶಯ ಪ್ರೇಮ ಅವನ ಕಾಮದ ಕುದುರೆಗೆ ಕಡಿ ವಾಣ ಹಾಕಿ ಹಿಂದಕ್ಕೆಳೆಯುತ್ತಿತ್ತು.

ಗಡಿಯಾರದಲ್ಲಿ ಐದು ಗಂಟೆ ಹೊಡೆಯಿತು. ಆನಂದ ಬಾಯಲ್ಲಿ ಸಿಗರೇಟು ಕಚ್ಚಿ ಹೊರಗೆ ಬಂದ. ಎದುರಿಗೆ ಸಿಕ್ಕಿದ ಮನೆಯೊಡತಿಗೆ ನಮಸ್ಕರಿಸಿದ.

ಬೀದಿಯಲ್ಲಿ ಜನರ ಸಂಖ್ಯೆ ಅಧಿಕವಾಗಿತ್ತು. ಆನಂದ ಒಂದಾದ ಮೇಲೊಂದರಂತೆ ಸಿಗರೇಟು ಸೇದುತ್ತಾ ಅನ್ಯಮನಸ್ಕನಾಗಿ ಹೆಜ್ಜೆಯಿಡು ತ್ತಿದ್ದ. ಹಳದೀ ಬಣ್ಣದ ಹರಕಲು ಫ್ರಾಕ್ ಹಾಕಿಕೊಂಡಿದ್ದ ಐದು ವರ್ಷದ ಹುಡುಗಿಯೊಂದು ಅವನ ಧ್ಯಾನಕ್ಕೆ ಭಂಗ ತಂದಿತು. ಆ ಮಗು ಆನಂದನ ಮುಂದೆ ಕೆಂಪು ಡೇಲಿಯಾ ಹೂವನ್ನು ಹಿಡಿದು

"ಹೂವು ಕೊಳ್ಳುವಿರಾ" ಎಂದು ಕೇಳಿತು.

ಆನಂದ ಮಗುವಿನ ಕಡೆ ನೋಡಿದ. ಹಸಿವಿನ ಕಿಚ್ಚಿನಲ್ಲಿ ಅದರ ಮುಖ ಬೆಂದು ಹೋಗಿತ್ತು. ಸರಿಯಾಗಿ ಬಟ್ಟೆಗಳಿಲ್ಲದೆ ಮಗು ನಡುಗುತ್ತಿತ್ತು. ಆದರೂ ಆ ನೀಲಿಯ ಕಣ್ಣುಗಳಲ್ಲಿ ಅದೇನು ಹೊಳಪು! ಕೆಂಪು ಕೂದಲು ಮಗುವಿನ ಮುಗ್ಧತೆಗೆ ಮೆರಗು ಕೊಟ್ಟಿತ್ತು. ಆನಂದ ಹೂವು ಕೈಗೆ ತೆಗೆದುಕೊಂಡು ಒಂದು ಷಿಲಿಂಗ್ ಹುಡುಗಿಯ ಕೈಗೆ ಕೊಟ್ಟ. ಹಿರಿಯರು ಬಾಯಿಪಾಠ ಮಾಡಿಸಿದ್ದಂತೆ ಹುಡುಗಿ "ದೇವರು ನಿಮಗೆ ಒಳ್ಳೆಯದು ಮಾಡಲಿ" ಎಂದು ಹೇಳಿ ಓಡಿಹೋಯಿತು.

ಆನಂದ ಹೈಡ್ ಪಾರ್ಕಿನ ಕಡೆ ನಡೆದ. ಪಾರ್ಕಿನಲ್ಲಿ ಬರಿದಾಗಿದ್ದ ಬೆಂಚೊಂದರ ಮೇಲೆ ಕುಳಿತು ಸುತ್ತಲೂ ನೋಡಿದ.

ನವತರುಣಿಯೊಬ್ಬಳು ಅಮೆರಿಕನ್ ಸೈನಿಕನೊಬ್ಬನ ಕೈಹಿಡಿದು ಹರಟುತ್ತಾ ಕೊಳದ ಬಳಿ ನಡೆದಿದ್ದಳು. ಐದಾರು ಚಿಕ್ಕ ಮಕ್ಕಳು ಬೆಚ್ಚಗೆ ಬಟ್ಟೆ ಧರಿಸಿ ಕಣ್ಣಾಮುಚ್ಚಾಲೆಯಾಡುತ್ತಿದ್ದರು. ಚಿಕ್ಕ ತಾಯಿಯೊಬ್ಬಳು ತನ್ನ ಮಗುವನ್ನು 'ಪ್ರ್ಯಾಮ್'ನಲ್ಲಿ ಕೂರಿಸಿ ತಳ್ಳುತ್ತಿದ್ದಳು. ಎದುರಿನಲ್ಲಿದ್ದ ಬೆಂಚಿನ ಮೇಲೆ ಆನಂದನಿಗೆ ಬೆನ್ನುಮಾಡಿ ಇಬ್ಬರು ಹೈಸ್ಕೂಲು ವಿದ್ಯಾರ್ಥಿನಿಯರು ಯಾವುದೋ ಚಿತ್ರದ ಪುಸ್ತಕ ನೋಡುವುದರಲ್ಲಿ ಮೈಮರೆತಿದ್ದರು. ಅವರ ಪಿಸುಮಾತು, ನಗೆ ಆನಂದನಿಗೆ ಆಗಾಗ್ಗೆ ಕೇಳಿಸುತ್ತಿದ್ದವು. ಮುದುಕನೊಬ್ಬನು ಕೋಲು ಹಿಡಿದು ಏಕಾಂಗಿಯಾಗಿ ಓಡಾಡುತ್ತಿದ್ದ. ಹುಲ್ಲಿನ ಮೇಲೆ ಪ್ರೇಮಿಗಳಿಬ್ಬರು ಕಾಲು ನೀಡಿ ಕುಳಿತು ಪ್ರೇಮಾಲಾಪದಲ್ಲಿ ಪ್ರಪಂಚವನ್ನೇ ಮರೆತಿದ್ದರು. ಆನಂದ ಆ ಪ್ರೇಮಿಗಳನ್ನೇ ಎವೆಯಿಕ್ಕದೇ ನೋಡುತ್ತಾ ಕುಳಿತ. ಅವನ ಮನಸ್ಸು ತನ್ನಿಂದ ಬಹುದೂರದಲ್ಲಿದ್ದ ಭಾರತಿಯನ್ನು ನೆನೆಯಿತು. ಆ ಬ್ರಿಟಿಷ್ ಯುವತಿ ನೇವೀ ಬ್ಲೂ ಲಂಗ ಹಾಕಿ, ಅದೇ ಬಣ್ಣದ ಕೋಟು ಹಾಕಿದ್ದಳು. ಅವಳ ನೀಳವಾದ ಬಿಳಿಯ ಕೊರಳು ಕೋಟಿನ ಮೇಲೆ ಹಂಸದ ಕೊರಳಿನಂತೆ ಕಾಣುತ್ತಿತ್ತು. ಜೇನಿನ ಬಣ್ಣದ ಅಲೆಗೂದಲು ಗಾಳಿಗೆ ಹಾರಾಡುತ್ತಿತ್ತು. ಆಕೆ ತನ್ನಿನಿಯನಿಗೆ ಏನೋ ಹೇಳಿ ನಸುನಕ್ಕಳು. ಹುಲ್ಲಿನ ಮೇಲೆ ಅರೆಮಲಗಿದ್ದ ಹುಡುಗ ತಟ್ಟನೆ ಎದ್ದು ಹುಡುಗಿಯನ್ನು ಬರಸೆಳೆದು ಮುತ್ತಿಟ್ಟ.

ಆನಂದ ಬೆವರಿಹೋದ. ಆ ದೃಶ್ಯ ನೋಡಬಾರದೆಂಬಂತೆ ಬೇರೆ ಕಡೆ ತಿರುಗಿದ. ಆದರೆ ಯಾವುದೋ ಆಸೆ ಆಕರ್ಷಕ ಶಕ್ತಿಯಂತೆ ಅವನನ್ನು ಮತ್ತೆ ಆ ಕಡೆಗೇ ನೋಡುವಂತೆ ಮಾಡಿತು. ಅವನು ಮತ್ತೆ

ನೋಡಿದಾಗ ಹುಡುಗಿ ಪರ್ಸಿನಲ್ಲಿದ್ದ ಕನ್ನಡಿಯಲ್ಲಿ ಮುಖ ನೋಡಿ ಕೊಳ್ಳುತ್ತಾ ತುಟಿಗೆ ರಂಗು ಬಳಿದುಕೊಳ್ಳುತ್ತಿದ್ದಳು. ಹುಡುಗ ಸಣ್ಣ ಸಣ್ಣ ಕಲ್ಲುಗಳನ್ನು ಆರಿಸಿ ತಮಾಷೆ ಮಾಡುತ್ತಾ ಅವಳ ಮೇಲೆ ಎಸೆಯುತ್ತಿದ್ದ. ಆನಂದ ಬೆರಗಾಗಿ ಅವರನ್ನೇ ನೋಡಿದ. ನಮ್ಮ ದೇಶದಲ್ಲಿ ಹೀಗೆ ಮಾಡಿ ದರೆ ಮುಗಿದುಹೋಯಿತು ಎಂದುಕೊಂಡ.

ತರುಣ ಥಂಗನೆ ಎಗರಿ ಸೂಟಿನ ಮೇಲಿದ್ದ ಧೂಳನ್ನು ಕೊಡವಿ ಇನ್ನೂ ಕಾಲು ನೀಡಿ ಕುಳಿತಿದ್ದ ಹುಡುಗಿಗೆ ಕೈ ನೀಡಿದ. ಅವಳು ಅವನ ಕೈಹಿಡಿದು ಎದ್ದು ನಿಂತಳು. ಅವನು ಅವಳ ಸೊಂಟದ ಸುತ್ತ ಕೈಹಾಕಿದ. ಇಬ್ಬರೂ ಮಾತನಾಡುತ್ತ ನಿಧಾನವಾಗಿ ಹೊರಟರು. ಅವರ ನಡೆ, ಪ್ರೀತಿಯ ಪ್ರದರ್ಶನ ಆನಂದನ ಭಾವನೆಗಳನ್ನು ಕೆರಳಿಸಿದವು. ಬಹಳ ದಿನಗಳಿಂದಲೂ ಇಂಗಿಸಿದ್ದ ಆಸೆ ಹೆಮ್ಮರವಾಗಿ ಬೆಳೆಯಿತು. ವಿರಹದ ಕಾವಿನಲ್ಲಿ ಆನಂದನ ರಕ್ತ ಬಿಸಿಯಾಯಿತು.

ಆಗ ಸುಮಾರು ಇಪ್ಪತ್ತೆರಡು ವರ್ಷದ ತರುಣಿಯೊಬ್ಬಳು ಅದೇ ಮಾರ್ಗವಾಗಿ ಬಂದಳು. ಆನಂದ ಅವಳ ಕಡೆ ನೋಡಿದ. ಅವಳು ಬಣ್ಣ ಬಣ್ಣದ ಹೂವಿನ ಲಂಗ, ತಿಳಿನೀಲಿ ಬಣ್ಣದ ಸ್ವೆಟರ್ ಹಾಕಿದ್ದಳು. ಲಂಗ ಮೊಳಕಾಲು ಮೇಲಿದ್ದುದರಿಂದ ಅವಳ ದುಂಡುಗಾಲುಗಳು ಕಾಲುಚೀಲವ ನ್ನೊಡೆದು ಬರುತ್ತಿವೆಯೋ ಎನ್ನುವಂತಿತ್ತು. ಮೈಬಣ್ಣದ್ದೇ ಕಾಲುಚೀಲ, ಕಪ್ಪು ಷೂಸ್. ಆಕೆ ಬಳುಕುತ್ತ ಆನಂದನ ಎದುರಿಗೆ ಬಂದಳು. ಆನಂದ ಅವಳನ್ನು ನೋಡುವ ವೇಳೆಗೆ ಸರಿಯಾಗಿ ಅವಳೂ ಅವನನ್ನು ನೋಡಿದಳು. ಕೈಲಿ ಹಿಡಿದಿದ್ದ ಚೀಲ ತೂಗಿ, ಕರವಸ್ತ್ರವನ್ನು ತುದಿಬೆರಳಿಗೆ ಸುತ್ತಿ ಕೊಳ್ಳುತ್ತಾ ಆಕೆ ಆನಂದನ ಹತ್ತಿರ ಬಂದು ಕೇಳಿದಳು.

"ನಾನಿಲ್ಲಿ ಕುಳಿತುಕೊಳ್ಳಬಹುದೇ ?"

"ಅಗತ್ಯವಾಗಿ ಆಗಬಹುದು" ಆನಂದ ಆಕೆಗೆ ಜಾಗ ಕೊಡಲು ಬೆಂಚಿನ ತುದಿಗೆ ಸರಿದ. ಆಕೆ ಬೆಂಚಿನ ಮತ್ತೊಂದು ತುದಿಯಲ್ಲಿ ಕುಳಿ ತಳು. ಅವಳು ಚೀಲ ತೆಗೆದು, ಕನ್ನಡಿ ನೋಡಿಕೊಂಡು ಮೂಗಿಗೆ ಪೌಡರ್ ಹಚ್ಚಿ, ತುಟಿಗೆ ಮತ್ತಷ್ಟು ರಂಗು ಬಳಿದು, ಕೂದಲನ್ನು ಬೆರಳಿನಿಂದ ಸರಿ ಮಾಡಿಕೊಂಡಳು. ಅವಳೇನು ಮಾಡುತ್ತಿರುವಳೋ ಎಂದು ನೋಡುವ ಕುತೂಹಲ ಆನಂದನಿಗೆ. ಆದರೆ ಅದು ಸಭ್ಯತೆಯಲ್ಲವೇನೋ ಎಂದು ಸುಮ್ಮನಾದ. ಒಂದು ಬಾರಿ ಓರೆಗಣ್ಣಿನಿಂದವಳ ಕಡೆ ನೋಡಿದಾಗ ಕೆಂಪು ಬಣ್ಣ ಹಚ್ಚಿದ ಕೈಬೆರಳುಗಳು ಗೋಚರವಾದವು. ಆಕೆ ಸ್ವಲ್ಪ ಹೊತ್ತು

ಕುಳಿತಿದ್ದು ಅನಂತರ ಎದ್ದು ಹೊರಟಳು. ಆನಂದ ಅವಳ ವಿಲಾಸದ ನಡಿಗೆಯನ್ನೇ ನೋಡುತ್ತಾ ಕುಳಿತ. ಆಕೆ ಬಹಳ ನಿಧಾನವಾಗಿ ಹೋಗು ತ್ತಿದ್ದಳು. ಆಕೆ ಇನ್ನೇನು ಮರಗಳ ಗುಂಪಿನಲ್ಲಿ ಮರೆಯಾಗಬೇಕು, ಅಷ್ಟ ರಲ್ಲಿ ಆನಂದನ ದೃಷ್ಟಿ ಅವಳು ಬೆಂಚಿನ ಮೇಲೆ ಬಿಟ್ಟು ಹೋಗಿದ್ದ ಕರ ವಸ್ತ್ರದ ಮೇಲೆ ಬಿತ್ತು. ಆನಂದ ಅದನ್ನು ಕೈಗೆತ್ತಿಕೊಂಡ. ಅಬ್ಬ! ಅದೇನು ಸುಗಂಧವಾಸನೆ! ಆನಂದ ಎದ್ದು ವೇಗವಾಗಿ ಹೆಜ್ಜೆ ಹಾಕಿದ. ಅವಳು ನಿಧಾನವಾಗಿ ಹೋಗುತ್ತಿದ್ದುದರಿಂದ ಅವಳನ್ನು ಹಿಡಿಯುವುದು ಕಷ್ಟವಾಗ ಲಿಲ್ಲ. ಆನಂದ ಅವಳ ಮುಂದೆ ನಿಂತು ಕರ್‌ಚೀಫ್ ನೀಡಿ,

"ತೆಗೆದುಕೊಳ್ಳಿ" ಎಂದ.

ಅವಳು ಅವನ ಮುಖ ನೋಡಿ ನಸುನಕ್ಕು, ವಸ್ತ್ರ ತೆಗೆದುಕೊಂಡು "ಥ್ಯಾಂಕ್ಸ್, ನಿಮಗೆ ತೊಂದರೆಯಾಯಿತು" ಎಂದಳು.

"ಛೇ, ಹಾಗೇನಿಲ್ಲ"

ಮುಂದೇನು ಮಾತನಾಡಬೇಕೆಂದು ಆನಂದನಿಗೆ ತೋಚಲಿಲ್ಲ. ಅವಳೇ ಸಿಗರೇಟು ಕಚ್ಚಿ 'ಮ್ಯಾಚಸ್ ಇದೆಯೇ?' ಎಂದಳು.

ಜೇಬಿನಿಂದ ಬೆಂಕಿಕಡ್ಡಿ ಪೆಟ್ಟಿಗೆ ತೆಗೆದು ಅವಳ ಕೈಗೆ ಕೊಡಲು ಹೋದ. ಅವಳು ಮುಖ ಮುಂದೆ ಮಾಡಿ 'ನೀವೇ ಹಚ್ಚಿಬಿಡಿ' ಎಂದಳು. ಆನಂದ ಕಡ್ಡಿ ಗೀರಿ ಅವಳ ಸಿಗರೇಟು ಹತ್ತಿಸಿ, ತಾನೊಂದು ಹಚ್ಚಿಕೊಂಡ. ಇಬ್ಬರೂ ಮಾತನಾಡುತ್ತ ಹುಲ್ಲಿನ ಮೇಲೆ ಕುಳಿತರು. ಆನಂದ ಆಗ ಅವ ಳನ್ನು ಸರಿಯಾಗಿ ನೋಡಿದ. ಅವಳ ಹೊನ್ನಗೂದಲು ಗುಂಗುರು ಗುಂಗು ರಾಗಿ ಬೆನ್ನಿನ ತುಂಬಾ ಹರಡಿಕೊಂಡಿತ್ತು. ಲಕ್ಷಣವಾಗಿ ಕತ್ತರಿಸಿದ ಹುಬ್ಬು, ವಿಪರೀತ ಬಣ್ಣ ಬಳಿದ ತುಟಿ ಅವಳಿಗೆ ವಿಲಕ್ಷಣ ಕಳೆಯನ್ನು ಕೊಟ್ಟಿದ್ದವು.

ಆಕೆ ಹೊಗೆ ಬಿಡುತ್ತಾ ಕೇಳಿದಳು "ನಿಮ್ಮ ಹೆಸರೇನು?"

"ಆನಂದ. ನಿಮ್ಮ ಹೆಸರು?"

"ಬೆಟ್ಟಿ. ನಿಮ್ಮೂರು ಚೆನ್ನವೋ, ನಮ್ಮೂರು ಚೆನ್ನವೋ?"

"ನನಗೆ ನಮ್ಮ ದೇಶವೇ ಚೆನ್ನ" ಅವನ ಮಾತು ಕೇಳಿ ಬೆಟ್ಟಿ ಕಿಲ ಕಿಲನೆ ನಕ್ಕಳು. ಅವಳ ನಗು ಅವನಿಗೆ ಕಚಗುಳಿಯಿಟ್ಟಿತು.

"ನೀವೇನು ಮಾಡುತ್ತಿದೀರಿ?" ಆನಂದ ಕೇಳಿದ. ಬೆಟ್ಟಿ ಬೆಡಗಿನಿಂದ ಹುಬ್ಬೆತ್ತಿ 'ನಾನೇ? ಇಲ್ಲಿ ಟೈಪಿಸ್ಟ್ ಆಗಿದೀನಿ. ವಿರಾಮ ಕಾಲದಲ್ಲಿ ಅಂಗಡಿ ಗಳಲ್ಲಿ 'ಷೋ ಗರ್ಲ್' ಆಗಿ ನಿಲ್ಲುತ್ತೇನೆ. ಕೆಲವು ವೇಳೆ ಚಿತ್ರಕಾರರ 'ಮಾಡೆಲ್ ಆಗಿದ್ದೇನೆ' ಎನ್ನುತ್ತ ಹಸಿರು ಕಣ್ಣುಗಳಿಂದ ಆನಂದನನ್ನು

ತೀಕ್ಷ್ಣವಾಗಿ ನೋಡಿದಳು. ಆನಂದ ತಾನರಿಯದಂತೆ ಅವಳ ಬಳಿ ಸರಿದಿದ್ದ. ಕತ್ತಲು ಅವರನ್ನು ನುಂಗುತ್ತ ಬಂದಿತು. ಮಂಜು ಬೀಳಲಾರಂಭಿಸಿತು.

"ಇನ್ನು ಹೊರಡೋಣ" ಆನಂದ ಎದ್ದು ನಿಂತ. ಬೆಟ್ಟಿ ಆಕಳಿಸಿ ಮೈ ಮುರಿದು ಕೈ ಮೇಲೆ ನೀಡಿ ಆನಂದನ ಮುಖ ನೋಡಿದಳು. ಆನಂದನ ಮನಸ್ಸು ಒಂದು ಗಳಿಗೆ ಹಿಂಜರಿಯಿತು. ಹಿಂದೆ ತಾನು ನೋಡಿದ್ದ ತರುಣನಂತೆ ಕೈ ನೀಡಿ ಅವನು ಅವಳ ಕೈ ಹಿಡಿದು ಮೇಲೆಬ್ಬಿಸಿದ. ಬೆಟ್ಟಿ ಮೇಲೆದ್ದ ರಭಸಕ್ಕೆ ಅವಳ ಕೆನ್ನೆ ಅವನ ತುಟಿಗೆ ತಗುಲಿತು. ಅವಳ ಒರಟುಕೂದಲು ಅವನ ಭುಜದ ಮೇಲೆ ದೊಪ್ಪನೆ ಬಿದ್ದು ಹರಿದಾಡಿತು.

ಒಣ ಹುಲ್ಲಿಗೆ ಕಿಡಿ ತಗುಲಿದಂತಾಯಿತು. ಆನಂದ ಭ್ರಮಿಷ್ಟನಂತೆ ಅವಳ ಮುಖ ಕೈಲಿ ಹಿಡಿದು ಮುದ್ದಿಸಿದ. ಅವಳು

"ಇಲ್ಲಿ ಬೇಡ........ಮನೆಯಲ್ಲಿ......." ಎಂದು ಪಿಸುಗುಟ್ಟಿದಳು. ಇಬ್ಬರೂ ಜೊತೆಯಲ್ಲಿ ಹೊರಟರು. ದಾರಿಯಲ್ಲಿ ಸಿಕ್ಕಿದ 'ಬಾರ್' ನೋಡಿ ಬೆಟ್ಟಿ 'ಹೋಗೋಣವೇ' ಎಂದಳು. ಇಬ್ಬರೂ ಬಾರಿನೊಳಗೆ ಬಂದರು. ಎರಡು ಗ್ಲಾಸು 'ಶಾಂಪೇನ್' ಕುಡಿದು ಬೆಟ್ಟಿಯ ರೂಮಿನಕಡೆ ಹೊರಟರು.

ಬೆಟ್ಟಿ ಆನಂದನನ್ನು ಮನೆಯ ಹೊರಗೆ ನಿಲ್ಲಿಸಿ 'ನೀನು ಇಲ್ಲಿಯೇ ಇರು. ನಾನು ಮನೆಯಾಕೆ ಎಲ್ಲಿದ್ದಾಳೆ ಎಂದು ನೋಡಿಕೊಂಡು ಬರುತ್ತೇನೆ. ಅವಳಿಗೆ 'ಬಾಯ್ ಫ್ರೆಂಡ್ಸ'ನ್ನು ರೂಮುಗಳಿಗೆ ಕರೆದು ತರುವುದೆಂದರೆ ಆಗುವುದಿಲ್ಲ' ಎಂದು ಹೇಳಿ ಒಳಗೆ ಹೋದಳು. ತನ್ನ ರೂಮಿನ ಬೀಗ ತೆಗೆದು ಆನಂದನನ್ನು ಸನ್ನೆ ಮಾಡಿ ಕರೆದಳು.

ಆನಂದ ಒಂದು ಗಳಿಗೆ ಹಿಂದೆ ಮುಂದೆ ನೋಡಿದ. ಆದರೆ ಶಾಂಪೇನ್ ತನ್ನ ಪ್ರಭಾವವನ್ನು ಅವನ ಮೇಲೆ ಬೀರಿತು. ಮೈಕೊರೆಯುವ ಚಳಿ, ಶಾಂಪೇನ್ ಅವನನ್ನು ಒಳಗೆ ಹೋಗುವಂತೆ ಪ್ರೇರಿಸಿದವು. ಹಸಿವಿನಿಂದ ಕಂಗೆಟ್ಟಿದ್ದ ಆನಂದ ಬೆಟ್ಟಿಯನ್ನು ಹಿಂಬಾಲಿಸಿದ. ಆನಂದ ಒಳಗೆ ಹೋದೊಡನೆ ಬೆಟ್ಟಿ ರೂಮಿನ ಬಾಗಿಲು ಹಾಕಿದಳು. ಮೇಜಿನ ಮೇಲಿದ್ದ ದೀಪ ಹತ್ತಿಸಿ, ಕುರ್ಚಿಯ ಮೇಲೆ ಕುಳಿತು ಷೂಸ್ ಕಳಚಿದಳು. ತಿಳಿಹಸಿರು ದೀಪ ಕೊಠಡಿಯಲ್ಲಿ ಬೆಳಗಿತು. ಬೆಟ್ಟಿಯ ಹಸಿರು ಕಣ್ಣುಗಳಲ್ಲಿ ಹಸಿರು ಕಿರಣಗಳು ಬೆರೆದು, ಮತ್ತಿಷ್ಟು ಹಸಿರಾದುವು. ಅನ್ನವನ್ನು ನೋಡುವ ಕ್ಷಾಮಪೀಡಿತನಂತೆ, ತನ್ನನ್ನು ಹರಿದು ತಿನ್ನುವಂತೆ ನೋಡುತ್ತಿದ್ದ ಆನಂದನನ್ನು ನೋಡಿ ಬೆಟ್ಟಿ ನಕ್ಕು ದೀಪ ಆರಿಸಿದಳು.

ಬೆಳಗಿನ ಜಾವ ನಾಲ್ಕು ಗಂಟೆಗೇ ಬೆಟ್ಟಿ ಎದ್ದು ಆನಂದನನ್ನು ಎಬ್ಬಿ

ಸಿದಳು. ಆನಂದ ಚಳಿಗೆ ಮತ್ತಷ್ಟು ಮುದುರಿ ಮಲಗಿದ.

"ಏಳು. ಮನೆಯಾಕೆ ನೋಡಿದರೆ ಗಲಾಟೆಯಾಗುತ್ತದೆ. ಬೆಳಗಾಗುವುದಕ್ಕೆ ಮುಂಚೆಯೇ ಹೊರಟು ಹೋಗು"

ಆನಂದ ಎದ್ದು ಕುಳಿತ. ರಾಂಪೇನಿನ ಅಮಲು ಇಳಿದಿತ್ತು. ತೀರ ಹತ್ತಿರ ಬಂದ ಬೆಟ್ಟಿ ಅವನಿಗೆ ಕುರೂಪಿಯಾಗಿ ಕಾಣಿಸಿದಳು! ಆ ಹೊನ್ನು ಗೂದಲು, ಪಸಿರು ಕಣ್ಣು, ಬಣ್ಣ ಬಳಿದ ತುಟಿ ...ಛೂ.. ಆನಂದ ಹಾಸಿಗೆಯಿಂದ ಹಾರಿ ಕನ್ನಡಿಯ ಮುಂದೆ ನಿಂತ. ಅವನ ತುಟಿಯ ಮೇಲೆ, ಬಿಳಿಯ ಶರಟಿನ ಮೇಲೆ ಕೆಂಪು ಬಣ್ಣದ ಗುರುತಿತ್ತು. ಆನಂದನಿಗೆ ಅಸಹ್ಯದಿಂದ ಓಕರಿಕೆ ಬಂದಂತಾಯಿತು. ಶರಟಿನ ಮೇಲಿದ್ದ ಗುರುತು ಕಾಣಿಸದಂತೆ ಕೋಟು ಹಾಕಿಕೊಂಡು, ಮುಖವನ್ನು ಚೆನ್ನಾಗಿ ತೊಳೆದು ಹೊರಟ. ಬೆಟ್ಟಿ ಹಿಂದಿನಿಂದ ಬಂದು,

"ನಿನ್ನೆಯ ಜಾಗದಲ್ಲಿ ಸಂಧಿಸೋಣ" ಎಂದಳು.

ಆನಂದ ಹೂಗುಟ್ಟಿ ಅವಳ ರೂಮಿನಿಂದ ಹೊರಬಿದ್ದ. ತನ್ನ ರೂಮಿನ ಬಾಗಿಲು ತೆಗೆಯುತ್ತಿದ್ದಾಗ ಮನೆಯಾಕೆ ಸುಪ್ರಭಾತ ಹೇಳಿ,

"ನಿನ್ನೆ ರಾತ್ರಿ ಊಟಕ್ಕೇಕೆ ಬರಲಿಲ್ಲ" ಎಂದು ಕೇಳಿದಳು.

"ನನ್ನ ಸ್ನೇಹಿತನ ಮನೆಯಲ್ಲಿ ಊಟವಿತ್ತು. ನಿಮಗೆ ತಿಳಿಸುವುದನ್ನು ಮರೆತುಬಿಟ್ಟೆ. ಆಮೇಲೆ ಅಲ್ಲೇ ಮಲಗಲು ಹೇಳಿದ....... " ಆನಂದ ಸುಳ್ಳು ಪೋಣಿಸಿ ಹೇಳಿದ. ರೂಮಿನ ಬಾಗಿಲು ತೆಗೆದು ಮಂಚದ ಮೇಲೆ ಬಿದ್ದುಕೊಂಡ. ಅವನ ಮನಸ್ಸು ಗಾಣಕ್ಕೆ ಸಿಕ್ಕಿದಂತಾಗಿತ್ತು. ಭಾರತಿಗೆ ಮೋಸ ಮಾಡಿದೆನೆಂದು ಆನಂದ ಪಶ್ಚಾತ್ತಾಪ ಪಟ್ಟ. ಮರುಗಳಿಗೆಯೇ 'ಗಂಡಸರು ಏನು ಮಾಡಿದರೂ ತಪ್ಪಿಲ್ಲ. ಗಂಡಸು ಎಷ್ಟು ಮದುವೆ ಬೇಕಾದರೂ ಮಾಡಿಕೊಳ್ಳಬಹುದು. ಎಷ್ಟು ಜನ ಹೆಂಗಸರೊಡನೆ ಬೇಕಾದರೂ ಮೆರೆಯಬಹುದು. ಅದರಲ್ಲಿ ಏನೂ ತಪ್ಪಿಲ್ಲ' ಎಂದು ಮನಸ್ಸು ಅವನನ್ನು ಸಮಾಧಾನಪಡಿಸಿತು.

ಆದರೂ ಗಂಡಸಾದ ಮಾತ್ರಕ್ಕೆ ಮನಸ್ಸು ಬಂದ ಹಾಗೆ ಹೋಗುವುದು ಸರಿಯೆ? ಭಾರತಿ ಎಷ್ಟು ಪ್ರೀತಿಸುತ್ತಾಳೆ! ಅವಳ ಅಪ್ಸರ ಸೌಂದರ್ಯ, ಪ್ರೇಮದ ಮುಂದೆ ಬೆಟ್ಟಿಯೇ? ಅದು ನಿಜ. ಹಿಂದಿನ ರಾತ್ರಿ ಇಂಗ್ಲಿಷ್ ರಮಣಿಯ ತೋಳುಗಳಲ್ಲಿ ಮಲಗಿದ್ದರೂ ಅವನ ಮನಸ್ಸು ಭಾರತಿಯನ್ನು ನೆನೆಯುತ್ತಿತ್ತು. ಹಳದಿಯ ಕೂದಲು, ಹಸಿರು ಕಣ್ಣುಗಳು ಎದುರಿಗಿದ್ದರೂ ಮನಸ್ಸು ಕಪ್ಪು ಕೂದಲಿನ, ಕಪ್ಪು ಕಣ್ಣಿನ ಚೆಲುವೆಯನ್ನು

ನೆನೆಯುತ್ತಿತ್ತು.

ಬೆಟ್ಟಿಯನ್ನು ಭೇಟಿ ಮಾಡಬಾರದೆಂದು ಆನಂದ ನಿರ್ಧರಿಸಿದರೂ, ಸಂಜೆಯಾಗುತ್ತ ಬಂದಂತೆ ನಿಸರ್ಗದ ಕರೆಗೆ ಕಿವುಡನಾಗಲಾರದೆ, ಅವನ ಮರುಳು ಮನಸ್ಸು ಅವನನ್ನು ಹೈಡ್‌ಪಾರ್ಕಿನ ಕಡೆಗೇ ಎಳೆಯಿತು. ಬೆಟ್ಟಿ ಅವನಿಗಿಂತಲೂ ಮುಂಚಿತವಾಗಿ ಅಲ್ಲಿಗೆ ಬಂದು ಕಾದಿದ್ದಳು.

ಕಾಮುಕ ಕಣ್ಣುಗಳು, ಉಬ್ಬಿದೆದೆ, ದುಂಡುತೋಳು, ರಂಗಿನ ತುಟಿಯು ಬೆಡಗಿನ ಮುಂದೆ ಆನಂದನ ನಿರ್ಧಾರ ಹಿಮ್ಮೆಟ್ಟಿತು. ಅವಳ ಮಾತಿನ ಮೋಡಿಗೆ, ದೇಹದ ಬೆಡಗಿಗೆ ಆನಂದ ಬಲಿಯಾದ.

ಬೆಳಗಾದಂತೆ ಅವಳ ಕೃತಕ ಸೌಂದರ್ಯ ಅವನಿಗೆ ಅಸಹ್ಯವನ್ನುಂಟುಮಾಡಿದರೂ ಇರುಳು ಅಡಿಯಿಡುತ್ತಿದಂತೆ ತನಗಿಂತಲೂ ಬಲವಾದ ಶಕ್ತಿಯೊಂದರಿಂದ ತಳ್ಳಲ್ಪಟ್ಟು, ಬೆಟ್ಟಿಯ ಬಳಿ ಧಾವಿಸಿ ಆನಂದ ಅವಳ ತೆಕ್ಕೆಯೊಳಗೆ ಬೀಳುತ್ತಿದ್ದ.

## ೨೩

ಬೆರಳುಗಳನ್ನು ಸುಟ್ಟ ಸಿಗರೇಟಿನ ಚೂರನ್ನು ಆನಂದ ಕಿಟಕಿಯಿಂದಾಚೆ ಎಸೆದು ಹಾಸಿಗೆಯ ಮೇಲೆ ಮಲಗಿ ತಾರಸಿಯನ್ನು ನೋಡತೊಡಗಿದ.

ಎರಡು ಮನಸ್ಸುಗಳಿಗೆ ಕಾಳಗ ನಡೆದಿತ್ತು.

"ನೀನು ಗಂಡಸು. ನಿನಗಿಷ್ಟ ಬಂದಹಾಗೆ ಮಾಡಬಹುದು. ಆದರೆ ಹೆಣ್ಣು ಹಾಗೆ ಮಾಡಿದರೆ ಅವಳು ಪತಿತೆ. ಅವಳಿಗೆ ಕ್ಷಮೆಯಿಲ್ಲ. ನಾಯಿ ಮುಟ್ಟಿದ ಮಡಕೆಯಂತೆ ಬಿಸಾಡಬೇಕು."

"ಅದು ಸರಿಯಲ್ಲ. ನೀನೂ ಅದೇ ತಪ್ಪು ಮಾಡಿಲ್ಲವೇ? ಅವಳಂತೆಯೇ ದೇಹದ ಬಯಕೆಗೆ ಬಲಿಯಾಗಲಿಲ್ಲವೇ? ನೀನು ಹೇಗೆ ಆ ಲಾಲಸೆಯನ್ನು ಕಟ್ಟಲಾರದೆ ಹೋದೆಯೋ, ಭಾರತಿಯೂ ಹಾಗೆಯೇ ದಮನ ಮಾಡಲಾರದೆ ಹೋದಳು. ನೀನು ಮಾಡಿದುದು ಸರಿಯಾದರೆ, ಅವಳದು ಹೇಗೆ ತಪ್ಪಾದೀತು? ಹೆಂಗಸಿಗೊಂದು ನೀತಿ, ಗಂಡಸಿಗೊಂದು ನೀತಿಯಿರುವುದು ಯಾವ ನ್ಯಾಯ? ನೀನು ನಿಜವಾಗಿಯೂ ಅವಳನ್ನು ಪ್ರೀತಿಸುವುದಾದರೆ ಮನ್ನಿಸು. ಅವಳು ನಿನ್ನ ಹೃದಯದ ದೇವಿ. ಅವಳಿಗೆ ತನ್ನ ಕೃತ್ಯದಿಂದಾಗಿ ಪಶ್ಚಾತ್ತಾಪವಾಗಿದೆ. ಅದಕ್ಕೆ ಅವಳ ಬಡದೇಹವೇ ಸಾಕ್ಷಿ. ದುರ್ಬಲಳಾದ

ಭಾರತಿ ಪುರುಷನಿಗೆ ಬಲಿಯಾದಳು. ಅವಳನ್ನು ತಿರಸ್ಕರಿಸಬೇಡ. ಅವಳನ್ನು ಕ್ಷಮಿಸುವ ಹಕ್ಕು ನಿನಗಿಲ್ಲ. ನಿಮ್ಮಿಬ್ಬರ ತಪ್ಪು ಒಂದೇ ಆಗಿದೆ. ಹಿಂದಾದುದನ್ನು ಮರೆತುಬಿಡು. ತಪ್ಪು ಮಾಡಿದಾಗ ಕ್ಷಮಿಸುವುದು ಪ್ರೇಮದ ಹಿರಿಯ ಗುಣ........"

ಆನಂದ ಹಾಸಿಗೆ ಮೇಲೆ ಹೊರಳಾಡಿದ.

"ಆದರೂ ಚಂದು ಮುದ್ರಿಸಿದ ಆ ತುಟಿಗಳನ್ನು ತಾನು ಪುನಃ .."

"ನಿನ್ನ ದೇಹ ಶುದ್ಧವೇ? ಬೆಟ್ಟಿಯ ಮುತ್ತಿನ್ನೂ ನಿನ್ನ ತುಟಿಯ ಮೇಲೆ ಹಸಿಯಾಗಿಯೇ ಉಳಿದಿಲ್ಲವೇ?"

ಆನಂದ ಚಿಂತೆಯಲ್ಲಿ ತೊಳಲಿದ.

ತಾಯಿ ಹೊರಗಿನಿಂದ ರಾತ್ರಿಯೂಟಕ್ಕೆ ಕರೆದಾಗ ಆನಂದ ಯೋಚನಾಪ್ರಪಂಚದಿಂದ ಎಚ್ಚೆತ್ತ.

"ಆನಂದ...ಊಟಕ್ಕೆ ಬಾ ಮಗು"

ಆನಂದ ಹೆಗಲ ಮೇಲೊಂದು ಟವಲು ಹಾಕಿಕೊಂಡು ಹೊರಟ. ರಂಗಣ್ಣನವರಾಗಲೇ ಎಲೆಯ ಮುಂದೆ ಕುಳಿತಿದ್ದರು. ಆನಂದ ಅವರ ಪಕ್ಕದಲ್ಲಿ ಕುಳಿತ. ತಂದೆ, ಮಗ, ತಾಯಿ ಒಂದು ಮಾತೂ ಆಡದೆ, ಒಬ್ಬರ ಮುಖ ಒಬ್ಬರು ನೋಡದೆ ಊಟ ಮುಗಿಸಿದರು. ಆನಂದ ಮರಳಿ ರೂಮಿಗೆ ಬಂದಾಗ ಅವನ ಹಾಸಿಗೆ ಹಾಸಿತ್ತು. ಆನಂದನಿಗೆ ತಾಯಿಯ ಮನಸ್ಸು ತಿಳಿಯಿತು. ತಾನಿನ್ನು ಭಾರತಿಯೊಡನಿರುವುದು ಆಕೆಗೆ ಸರಿಯಿಲ್ಲವೆನಿಸಿರಬೇಕು. ಆದುದರಿಂದಲೇ ತನ್ನ ಹಾಸಿಗೆ ಕೆಳಗೆ ಹಾಕಿದ್ದಾಳೆ! ಮಾತನಾಡಲು ಧೈರ್ಯವಿಲ್ಲದೆ, ಕಾರ್ಯದಿಂದ ತನ್ನ ಮನಸ್ಸು ಬಿಚ್ಚಿ ತೋರಿಸಿದ್ದಾಳೆ.

ಆನಂದ ಹಾಸಿಗೆಯ ಮೇಲುರುಳಿದ.

ಹಾಗಾದರೆ ತಾಯಿ ತನಗೆ ಮತ್ತೊಂದು ಮದುವೆ ಮಾಡಲು ಯೋಚಿಸಿದ್ದಾಳೆ. ಬೇರೊಂದು ಹುಡುಗಿ! ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ. ಬೇರೊಬ್ಬಳ ಕೈ ಹಿಡಿದರೆ ಇನ್ನೊಂದು ಜೀವಿಗೆ ವಂಚನೆ ಮಾಡಿದಂತಾಗುವುದಿಲ್ಲವೇ?

ಅವನ ಒಳಗಣ್ಣು ಪಶ್ಚಾತ್ತಾಪದ ಉರಿಯಲ್ಲಿ ಬೆಂದು ಎಲುಬಿನ ಗೂಡಾಗಿರುವ ಹೆಂಡತಿಯನ್ನು ನೋಡಿತು.

ಎಷ್ಟು ಬಡವಾಗಿದ್ದಾಳೆ! ಆ ಅಪ್ಸರೆಯೆಲ್ಲಿ? ಈ ಶೋಕದ ಮೂರ್ತಿಯೆಲ್ಲಿ? ದೇಹದಲ್ಲಿ ಎಲ್ಲಿ ನೋಡಿದರೂ ಮೂಳೆ. ಕಣ್ಣುಗಳು ಹಳ್ಳಕ್ಕಿಳಿದು ಕಪ್ಪು ಉಂಗುರದ ಸುತ್ತು ಬಂದಿತ್ತು. ಕೆನ್ನೆ ಬಾಡಿದ ಹೂವಿನಂತಾಗಿತ್ತು.

ಏನು ಮಾಡಲಿ ಎಂದು ಮನಸ್ಸು ಕೆದಕಿ ಕೇಳಿತು. ತಲೆ ಚಕ್ರಾಕಾರ

ವಾಗಿ ಸುತ್ತುತ್ತಿತ್ತು. ಆನಂದ ಎದ್ದು ಕುಳಿತ. ಭಾರತಿ ತನಗಾಗಿ ಕಾದಿರು ವಳಲ್ಲವೇ ? ರಾತ್ರಿ ತಾನು ಯಾವುದನ್ನೂ ಯೋಚಿಸಿ ತಿಳಿಸುವುದಾಗಿ ಹೇಳಿ ಬಂದಿದ್ದ.

ಆನಂದ ಎದ್ದು ನಿಂತು ತಲೆಗೂದಲು ಸರಿಮಾಡಿಕೊಂಡು ರೂಮಿನಿಂದ ಹೊರಗೆ ಬಂದ. ಹಾಲಿನಲ್ಲಿ ನಿಂತು ತನ್ನನ್ನೇ ನೋಡುತ್ತಿದ್ದ ತಾಯಿಯ ದೃಷ್ಟಿಯನ್ನು ಲೆಕ್ಕಿಸದೆ ಮಹಡಿಯ ಮೆಟ್ಟಲಿನ ಮೇಲೆ ಕಾಲಿಟ್ಟ.

ವೇದಮ್ಮ ಬೆರಗು ಬಡಿದವರಂತೆ ಮಗನ ಕಾರ್ಯವನ್ನು ನೋಡುತ್ತಿದ್ದರು. ಅವನು ಮೆಟ್ಟಲಿನ ಮೇಲೆ ಕಾಲಿಟ್ಟೊಡನೆ ವೇದಮ್ಮ ಮಿಂಚಿನ ವೇಗದಿಂದ ಬಂದು, ಕಟಕಟೆಯ ಮೇಲಿದ್ದ ಅವನ ಕೈ ಮೇಲೆ ತಮ್ಮ ಕೈಯಿಟ್ಟು ತಡೆದು ಹೇಳಿದರು. "ಆನಂದ, ನಿನಗೆ ಹುಚ್ಚು ಹಿಡಿದಿಲ್ಲವಷ್ಟೇ ?"

ಆನಂದ ತಾಯಿಯ ಕಡೆ ನೋಡದೇ ಉತ್ತರ ಕೊಟ್ಟ.

"ಇಲ್ಲಮ್ಮ. ನನ್ನ ತಡೆಯಬೇಡ"

"ಆನಂದ........ಅವಳು ಪತಿತೆ........"

"ಅಮ್ಮ, ನಾನೂ ಪತಿತ. ಅವಳಂತೆಯೇ ನಾನೂ ಇಂಗ್ಲೆಂಡಿನಲ್ಲಿ ಬೇರೊಂದು ಹೆಣ್ಣಿನೊಡನೆ ಸಂಪರ್ಕವಿಟ್ಟುಕೊಂಡಿದ್ದೆ........"

"ಆದರೆ ...ಆದರೆ.... ನೀನು ಗಂಡಸು........"

ಆನಂದ ವ್ಯಂಗ್ಯವಾಗಿ ನಕ್ಕು ಹೇಳಿದ "ನೀತಿ ಎಂದಮೇಲೆ ಎಲ್ಲರಿಗೂ ಒಂದೇ ಅಲ್ಲವೇನಮ್ಮ. ನಾವಿಬ್ಬರೂ ಪತಿತರು...." ಎನ್ನುತ್ತ ಆನಂದ ತಾಯಿಯ ಕೈ ಕೆಳಗಿದ್ದ ಕೈಯನ್ನು ಹಿಂದಕ್ಕೆಳೆದುಕೊಂಡ.

"ಆನಂದ ಇಲ್ಲಿ ಕೇಳು...." ವೇದಮ್ಮ ಕೂಗುತ್ತಿದ್ದಂತೆಯೇ ಆನಂದ ತಾಯಿಯನ್ನು ನಿರ್ಲಕ್ಷಿಸಿ ಮಹಡಿಯ ಮೇಲೆ ಬಂದ. ಭಾರತಿಯ ರೂಮಿನಲ್ಲಿ ದೀಪವಿನ್ನೂ ಉರಿಯುತ್ತಿತ್ತು—ಯಾವುದೂ ನಿರ್ಧಾರ ಕೇಳಲು ಕಾದಿರುವಂತೆ.

ಆನಂದ ರೂಮಿನೊಳಗೆ ಬಂದ.

ಭಾರತಿ ಗಂಡನ ಕಡೆ ನೋಡಿದಳು. ಎಷ್ಟು ಮುದ್ದಾಗಿದ್ದಾರೆ ! ಇಂಗ್ಲೆಂಡಿಗೆ ಹೋಗಿ ಬಂದ ಮೇಲೆ ಆನಂದ ಲಕ್ಷಣವಾಗಿ ಕಾಣಿಸುತ್ತಿದ್ದ!

"ಭಾರತಿ"

"ಏನು ಯೋಚನೆ ಮಾಡಿದಿರಿ ?" ಅವಳ ದನಿ ಶಾಂತವಾಗಿತ್ತು. ಬಿರುಗಾಳಿಗೆ ಸಿಕ್ಕಿದ್ದ ಅವಳ ಮನಸ್ಸು ಕ್ಷಮಾಯಾಚನೆ ಮಾಡಿ ಶಾಂತವಾಗಿತ್ತು.

ಆನಂದ ಬಾಗಿಲು ಮುಚ್ಚಿ ಹೃದಯದ ಭಾರ ತಡೆಯಲಾಗದವನಂತೆ

ಬಾಗಿಲೊರಗಿ ನಿಂತ.

"ನೀವು ಸುಖವಾಗಿದ್ದರೆ ಸಾಕು. ನಾಳೆ ನಾನು........"

"ಓ ಸಾಕು ಭಾರತಿ. ನಾನೂ ನಿನ್ನಂತೆಯೇ ಎಡವಿದ್ದೇನೆ. ದೇಹ ದಾಸೆಗಾಗಿ ಪತಿತನಾಗಿದ್ದೇನೆ ಲಂಡನ್ನಿನಲ್ಲಿ ಹೆಣ್ಣೊಬ್ಬಳ ಬಲೆಗೆ ಬಿದ್ದು ದೇಹ ಕಲುಷಿತವಾಗಿದೆ. ಇಬ್ಬರೂ ಒಬ್ಬರನ್ನೊಬ್ಬರು ಕ್ಷಮಿಸಬೇಕು ........" ಉದ್ವೇಗದಿಂದ ಆನಂದನ ದೇಹ ನಡುಗುತ್ತಿತ್ತು. "ಆದರೂ ಭಾರತಿ....... ನನ್ನ ಪ್ರೇಮ ನಿನ್ನದು. ಹಿಂದಾದುದನ್ನು ಇಬ್ಬರೂ ಮರೆತುಬಿಡೋಣ. ನಮ್ಮಿಬ್ಬರ ಪ್ರೇಮದ ನಡುವೆ ನೀತಿಯ ಪ್ರಶ್ನೆ ಬೇಡ ......."

ಆನಂದ ಬಾಗಿಲೊರಗಿಯೇ ನಿಂತಿದ್ದ. ಅವನ ಕೊನೆಯ ಮಾತು ಕೇಳಿ ಭಾರತಿ ಓಡಿಬಂದು ಅವನ ತೋಳಿನೊಳಗೆ ಬಿದ್ದಳು. ಅವನೆದೆಯಲ್ಲಿ ಮುಖ ಹುದುಕಿಸಿ ಹೃದಯ ಹಗುರುವಾಗುವಷ್ಟು ಅತ್ತುಬಿಟ್ಟಳು. ಆನಂದ ಅವಳ ತಲೆಯ ಮೇಲೆ ಕೆನ್ನೆಯೊರಗಿಸಿ, ಅವಳ ದುಃಖ ಶಾಂತವಾಗುವವರೆವಿಗೆ ಸುಮ್ಮನೆ ನಿಂತಿದ್ದ. ಕ್ರಮೇಣ ಭಾರತಿಯ ದುಃಖ ಕಡಿಮೆಯಾಯಿತು.

"ಇನ್ನು ಮೇಲೂ ನೀವು ನಿಜವಾಗಿಯೂ ನನ್ನವರೇ? ನನ್ನನ್ನು ಮೊದಲಿನಂತೆಯೇ ಪ್ರೀತಿಸುತ್ತೀರಾ?"

"ಊ ಹೂಂ. ಮೊದಲಿನಷ್ಟು ಪ್ರೀತಿಸುವುದಿಲ್ಲ. ಇನ್ನೂ ಹೆಚ್ಚು ಪ್ರೀತಿಸುತ್ತೇನೆ. ನಾನು ಎಂದೆಂದಿಗೂ ನಿನ್ನವನು"

"ನೀವು ನನ್ನನ್ನು ಕ್ಷಮಿಸುವಿರಾ?"

ಆನಂದ ಬಗ್ಗಿ ಕಣ್ಣೀರಿನಿಂದ ತೊಯ್ದ ಕೆನ್ನೆಯನ್ನು ಮುದ್ದಿಸಿ,

"ನಿನ್ನ ಪ್ರಶ್ನೆಗೆ ಉತ್ತರ ಸಿಕ್ಕಿತೇ" ಎಂದ.

"ಮತ್ತೆ........ಅವರು ........ನಿಮಗೆ ಬೇರೆ ಮದುವೆ........"ಎನ್ನುತ್ತಿರುವಾಗಲೇ ನೀರಾರಿದ ಅವಳ ಕಣ್ಣುಗಳಲ್ಲಿ ಫಕ್ಕನೆ ನೀರು ಬಂತು.

ಆನಂದ ಅವಳ ಕಣ್ಣೊರೆಸಿದ.

"ಮತ್ತೊಂದು ಬಾರಿ ಮದುವೆ ಆಗಬೇಕು. ಯಾರೊಡನೆ ಗೊತ್ತೆ? ಭಾರತೀದೇವಿಯನ್ನು ಆನಂದನಿಗೆ ಕೊಟ್ಟು ಈ ರಾತ್ರಿ ಸುಮುಹೂರ್ತದಲ್ಲಿ ಮದುವೆ. ಎಲ್ಲಿ ಚಿನ್ನ, ಇನ್ನು ಅತ್ತಿದ್ದು ಸಾಕು. ಒಂದು ಬಾರಿ ನಗು ನೋಡೋಣ. ನಿನ್ನ ನಗು ನೋಡಿ ಎರಡು ವರ್ಷಗಳಾದವು. ಊಹೂಂ. ಹಾಗಲ್ಲ. ಕೆನ್ನೆಯಲ್ಲಿನ ಗುಳಿ ಇನ್ನೂ ಆಳವಾಗಿ ಮೂಡಬೇಕು. ಹಾಗೆ ಜಾಣೆ........"

---

# ತಾಯಿ

**ಮ್ಯಾಕ್ಸಿಂಗಾರ್ಕಿ—ಅನುವಾದ: ನಿರಂಜನ**

ಪುಟಗಳು : ೫೨೯ ಬೆಲೆ : ೨—೮—೦

ಆರ್. ಎಸ್. ಎನ್. ರವರ ೨೪ ತುಂಬುಪುಟದ
ಚಿತ್ರಗಳಿಂದ ಅಲಂಕೃತವಾಗಿದೆ.

ಕಥನ ರೀತಿ ಹೃದಯಂಗಮವಾಗಿದೆ. ಆಕರ್ಷಣೀಯವಾಗಿದೆ. ಸನ್ನಿವೇಶ ರಚನೆ ಅದ್ಭುತವಾಗಿದೆ. ಇಲ್ಲಿ ಬರುವ ಪ್ರತಿಯೊಂದು ಪಾತ್ರವೂ ತಮ್ಮ ವಿಶಿಷ್ಟಗುಣಗಳಿಂದ ಜೀವಂತ ವ್ಯಕ್ತಿಗಳಾಗಿ ಪ್ರಕಾಶಿಸುತ್ತಾರೆ........ ಶೈಲಿಯಲ್ಲಿ ತೀಕ್ಷ್ಣತೆಯಿದೆ; ವೈವಿಧ್ಯವಿದೆ ಆವೇಶಪೂರಿತವಾಗಿದೆ. ಕಾರ್ಮಿಕರ ಬಡತನ ಮತ್ತು ಹೋರಾಟಗಳ ವಿರಾಟ್ ದರ್ಶನವಿದೆ.

....ಸುದೀರ್ಘವಾದ ಈ ಅನುಪಮಕೃತಿಯನ್ನು ಇಷ್ಟು ಸುಲಭ ಬೆಲೆಗೆ ಪ್ರಕಟಿಸಿದ ಭಾರತೀ ಪ್ರಕಾಶನದ ಸಾಹಸ ಶ್ರಮಗಳು ಸ್ತುತ್ಯರ್ಹವಾಗಿವೆ.

**—ಪ್ರಬುದ್ಧ ಕರ್ಣಾಟಕ**

# ಚಿರಸ್ಮರಣೆ

**ನಿರಂಜನ**

ಪುಟಗಳು ೩೦೬ ಬೆಲೆ : ೧—೮—೦

"....ಕಲ್ಲನ್ನೂ ಕರಗಿಸುವಂತಹ ಶೈಲಿಯಲ್ಲಿ ನಿರಂಜನರು ಕಣ್ಣಿಗೆ ಕಟ್ಟುವಂತೆ ಕೈಯ್ಯೂರು ಹೋರಾಟವನ್ನು ಮೊದಲಿನಿಂದ ಕೊನೆಯವರೆಗೂ ಚಿತ್ರಿಸಿದ್ದಾರೆ."

**....ಚಿತ್ರಗುಪ್ತ**

"....ಭಾರತೀ ಪ್ರಕಾಶನದವರು ಈ ಕೈಹೊತ್ತಿಗೆ ಓದುಗರಿಗೆ ರಸದೌತಣವನ್ನೀಯುವುದರೊಂದಿಗೆ ವಿಚಾರಧಾರೆ ಹರಿಸಲು ಶಕ್ತವಾಗಿದೆ.

**—ಪ್ರಜಾಮತ**

---